ಶ್ರೀಕೃಷ್ಣಪರಬ್ರಹ್ಮಣೇನಮಃ

# ಶ್ರೀ ಕೃಷ್ಣಬೋಧಾಮೃತ

## ಸಾರ ಎಂಬ ಹನ್ನೆರಡು ರಾಜಪುತ್ರರ ಕಥೆ.

ಎಂಬ ಈ ಗ್ರಂಥವು

**ವೇ॥ ಬ್ರ॥ ಶ್ರೀ॥ ದೊಡ್ಡಬೆಲೆ ನಾರಾಯಣಶಾಸ್ತ್ರಿಗಳಿಂದ ರಚಿಸಲ್ಪಟ್ಟು**



ಇದರ ಸರ್ವ ಸ್ವಾತಂತ್ರ್ಯವನ್ನು ಪಡೆದಿರುವ

ಬೆಂಗಳೂರು ಸಿಟಿ ಚಿಕ್ಕಪೇಟೆ, ಕಳಾನಿಧಿ ಬುಕ್‌ಡಿಪೊ ಪ್ರೊಪ್ರೈಟರ್,

## ಟಿ. ಕೆ. ಕೃಷ್ಣಸ್ವಾಮಿಶೆಟ್ಟರವರ

ಸ್ವಕೀಯ

ಕಳಾನಿಧಿ ಮುದ್ರಾಲಯದಲ್ಲಿ ಮುದ್ರಿಸಿ ಪ್ರಕಟಿಸಲ್ಪಟ್ಟಿತು.

ಬೆಂಗಳೂರು ಸಿಟಿ.



[ಕ್ರಯ ೦-೧೨-೦.] 1938 [ಟಪಾಲು ಖರ್ಚು ಬೇರೆ

# ಪ್ರಕಟನೆ

| ನಾಟಕಗಳು. | ರೂ. | ಆ. | ಪೈ |
|---|---|---|---|
| ಲಂಕಾದಹನ ನಾಟಕ | ೦ | ೬ | ೦ |
| ಸದಾರಮಾ ನಾಟಕ | ೦ | ೫ | ೦ |
| ಭೋಜಕಾಳಿದಾಸ ನಾಟಕ | ೦ | ೧೦ | ೦ |
| ಮಹಾತ್ಮ ಕಬೀರ್ ದಾಸ್ ನಾಟಕ | ೧ | ೦ | ೦ |
| ಸಾರಂಗಧರ ನಾಟಕ | ೦ | ೬ | ೦ |
| ಲವಕುಶರ ನಾಟಕ | ೦ | ೬ | ೦ |
| ಶ್ರೀಕೃಷ್ಣಲೀಲಾ ನಾಟಕ | ೦ | ೧೨ | ೦ |
| ಕಂಸವಧಾ ನಾಟಕ | ೦ | ೧೦ | ೦ |
| ಸುಭದ್ರಾಪರಿಣಯ ನಾಟಕ | ೦ | ೬ | ೦ |
| ಶಾಕುಂತಲ ನಾಟಕ | ೦ | ೬ | ೦ |
| ಪಾಂಡುವಿಜಯ ನಾಟಕ | ೦ | ೫ | ೦ |
| ಇಂದ್ರಸಭಾ ನಾಟಕ | ೦ | ೫ | ೦ |
| ಪ್ರಭಾವತೀ ದರ್ಬಾರ್ ನಾಟಕ | ೦ | ೪ | ೦ |
| ಶ್ರೀ ಕೃಷ್ಣಗಾರುಡಿ ನಾಟಕ | ೧ | ೦ | ೦ |
| ಗುಲೇಬಕಾವಲಿ ನಾಟಕ | ೦ | ೫ | ೦ |
| ಮಾರ್ಕಂಡೇಯ ನಾಟಕ | ೦ | ೧೨ | ೦ |
| ಶ್ರೀ ಕೃಷ್ಣ ಪಾರಿಜಾತನಾಟಕ | ೦ | ೧೨ | ೦ |
| ರತ್ನಾವಳೀ ನಾಟಕ | ೦ | ೪ | ೦ |
| ರುಕ್ಮಿಣಿ ಸ್ವಯಂವರನಾಟಕ | ೦ | ೧೨ | ೦ |
| ಶ್ರೀಯಾಳ ನಾಟಕ | ೦ | ೪ | ೦ |
| ಚಂದ್ರಹಾಸನ ನಾಟಕ | ೦ | ೫ | ೦ |
| ಚೋರಕಥೆ ನಾಟಕ | ೦ | ೪ | ೦ |
| ರಾಜಸೂಯಾಗ ನಾಟಕ | ೦ | ೧೨ | ೦ |
| ಸಂಸಾರಚಿತ್ರ ನಾಟಕ | ೦ | ೧೨ | ೦ |
| ಭಗವದ್ಭಕ್ತರಿಗೆ ಅನುಕೂಲವಾಗಿರುವ ಸರ್ವಾನಂದಬೋಧೆ | ೨ | ೫ | ೦ |

| ಕನ್ನಡ ಕಥೆಗಳು | ರೂ | ಆ. | ಪೈ |
|---|---|---|---|
| ಲಾವಣ್ಯತಿಲೋತ್ತಮೆ ಎಂಬ ಚರಿತ್ರ ವಿಷಯಕ ಕಾದಂಬರಿ | ೦ | ೨ | ೦ |
| ರಾಜಮಾರ್ತಾಂಡ ಚರಿತ್ರೆ | ೨ | ೮ | ೦ |
| ಮದನಮೋಹನರಾಜರಕಥೆ | ೦ | ೬ | ೦ |
| ವಸಂತಕೋಕಿಲೆ ಎಂಬ ಇಂದ್ರಜಾಲ ಮಹೇಂದ್ರಜಾಲವನ್ನು ಸ್ಪಷ್ಟವಾಗಿ ತೋರಿಸುವ ಅತ್ಯದ್ಭುತ ಚಮತ್ಕಾರವಾದ ಹೊಸ ಕಾದಂಬರೀ ಕಥೆ | ೧ | ೦ | ೦ |
| ನಳದಮಯಂತಿಯರಕಥೆ | ೦ | ೬ | ೦ |
| ವಿದ್ಯಾಮಂಜರಿ ಕಥೆ | ೦ | ೮ | ೦ |
| ಭಟ್ಟಿ ವಿಕ್ರಮಾದಿತ್ಯ ರಾಯನ ಕಥೆ | ೨ | ೦ | ೦ |
| ಶಿವಮಹಾಪುರಾಣದ ಕಥೆ | ೨ | ೪ | ೦ |
| ಶುಕಸಪ್ತತಿ ಕಥೆ ೭೦ ಕಥೆಗಳು | ೨ | ೦ | ೦ |
| ಪತಿವ್ರತಾಮಹಾತ್ಮ್ಯ ೧೦ ಜನ ಪತಿವ್ರತೆಯರಕಥೆ | ೦ | ೬ | ೦ |
| ಹಾಸ್ಯಸುಂದರಿ ಎಂಬ ಶುಕವಾಣಿ ಕಥೆ | ೦ | ೮ | ೦ |
| ಮುದ್ರಾಮಂಜೂಷವೆಂಬ ಚಾಣಕ್ಯ ತಂತ್ರ | ೧ | ೧೨ | ೦ |
| ಶ್ರೀಕೃಷ್ಣಬೋಧಾಮೃತ ಎಂಬ ೧೨ ರಾಜಪುತ್ರರಕಥೆ | ೦ | ೧೨ | ೦ |
| ವಿಚಿತ್ರ ಕಥಾ ಪ್ರಪಂಚಂ ಎಂಬ ಕಾಶೀರಾಮೇಶ್ವರ ಯಾತ್ರೆಯ ಕಥೆಗಳು | ೧ | ೮ | ೦ |

**ನಮ್ಮ ವಿಳಾಸ:—ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,**

ಕಳಾನಿಧಿ ಬುಕ್ ಡಿಪೋ ಪ್ರೊಪ್ರೈಟರ್,

ಬಳೇಪೇಟೆ, ಬೆಂಗಳೂರು ಸಿಟಿ.

# ವಿಷಯಾನುಕ್ರಮಣಿಕೆ.


| ಸಂಖ್ಯೆ. | | ಪುಟಸಂಖ್ಯೆ. |
|---|---|---|
| | **ಸತ್ಯಜಿತುವೆಂಬ ಮೊದಲನೆ ರಾಜಪುತ್ರನ ಕಥೆ.** | |
| ೧. | ಭರದ್ವಾಜ ಮಹರ್ಷಿಯು ಸತ್ಯಜಿತುರಾಯನಿಗೆ ಸಾಂಖ್ಯಸೂತ್ರವನ್ನು ಬೋಧಿಸುವಿಕೆ. | ೧೭ |
| | **ಶಶಿಬಿಂದುವೆಂಬ ಎರಡನೆ ರಾಜಪುತ್ರನ ಕಥೆ.** | |
| ೨. | ಶಶಿಬಿಂದು ಮಹಾರಾಯನಿಗೆ ಭಾಸ್ಕರಮಹರ್ಷಿ ಪೇಳಿದ ಛಾಯಾಪುರುಷ ಲಕ್ಷಣ. | ೩೨ |
| | **ಸೂರ್ಯಸೇನನೆಂಬ ಮೂರನೆ ರಾಜಪುತ್ರನ ಕಥೆ.** | |
| ೩. | ಸೂರ್ಯಸೇನ ಮಹಾರಾಯನಿಗೆ ಬೌದ್ಧಮಹರ್ಷಿ ಪೇಳಿದ ನಾದಾನಂದ ಪ್ರಭಾವ. | ೪೩ |
| | **ಅಗ್ನಿದತ್ತನೆಂಬ ನಾಲ್ಕನೆ ರಾಜಪುತ್ರನ ಕಥೆ.** | |
| ೪. | ಅಗ್ನಿದತ್ತ ಮಹಾರಾಯನಿಗೆ ಜಟಿಲಮಹರ್ಷಿಯು ಪೇಳಿದ ಪಂಚಮುದ್ರೆಗಳ ಪ್ರಭಾವ. | ೫೬ |
| | **ವಿಚಿತ್ರವಾಹನನೆಂಬ ಐದನೆ ರಾಜಪುತ್ರನ ಕಥೆ.** | |
| ೫. | ಭುಜಂಗಮಹರ್ಷಿಯಿಂದ ವಿಚಿತ್ರವಾಹನ ಮಹಾರಾಯನಿಗೆ ಹೇಳಲ್ಪಟ್ಟ ತಾರಕಮಂತ್ರ ರಹಸ್ಯ. | ೬೫ |
| | **ಶೃತಕೀರ್ತಿಯೆಂಬ ಆರನೆ ರಾಜಪುತ್ರನ ಕಥೆ.** | |
| ೬. | ಕಾಳಿಕಾದೇವಿಯಿಂದ ಶೃತಕೀರ್ತಿರಾಯನಿಗೆ ಹೇಳಲ್ಪಟ್ಟ ಸಚ್ಚಿದಾನಂದ ಭಾವ. | ೮೨ |

ಶ್ರೀ


ಚಂದ್ರಗುಪ್ತನೆಂಬ ಏಳನೆ ರಾಜಪುತ್ರನ ಕಥೆ.

೭. ಚಂದ್ರಗುಪ್ತ ಮಹಾರಾಯನಿಗೆ ಏಕದಂಡ ಮಹರ್ಷಿಯಿಂದ ಬೋಧಿಸಲ್ಪಟ್ಟ ಸಾಕಾರ ಬ್ರಹ್ಮರಹಸ್ಯ. ೯೮

ವಿಕ್ರಮಸೇನನೆಂಬ ಎಂಟನೆ ರಾಜಪುತ್ರನ ಕಥೆ.

೮. ಜಲಧರ ಮಹರ್ಷಿಯಿಂದ ವಿಕ್ರಮಸೇನರಾಯನಿಗೆ ಹೇಳಲ್ಪಟ್ಟ ನಿರಾಕಾರ ಭಾವ. ೧೧೭

ರಾಜಹಂಸನೆಂಬ ಒಂಭತ್ತನೆ ರಾಜಪುತ್ರನ ಕಥೆ.

೯. ರಾಜಹಂಸರಾಯನಿಗೆ ವಾಲ್ಮೀಕಿಮಹರ್ಷಿಯಿಂದ ಬೋಧಿಸಲ್ಪಟ್ಟ ಅಮನಸ್ಕಭಾವ. ೧೨೨

ವೀರಸೇನನೆಂಬ ಹತ್ತನೆ ರಾಜಪುತ್ರನ ಕಥೆ.

೧೦. ಅಗಸ್ತ್ಯಮಹರ್ಷಿಯು ವೀರಸೇನರಾಯನಿಗೆ ಪೇಳಿದ ಆರ್ಯದರ್ಪಣ ಭಾವ. ೧೫೧

ಸೂರ್ಯದತ್ತನೆಂಬ ಹನ್ನೊಂದನೆ ರಾಜಪುತ್ರನ ಕಥೆ.

೧೧. ನಾರಾಯಣ ಮಹರ್ಷಿಯಿಂದ ಸೂರ್ಯದತ್ತರಾಯನಿಗೆ ಬೋಧಿಸಲ್ಪಟ್ಟ ಜ್ಞಾನ ಪ್ರಭಾವ. ೧೭೦

ಚಂದ್ರಕೇತುವೆಂಬ ಹನ್ನೆರಡನೆ ರಾಜಪುತ್ರನ ಕಥೆ.

೧೨. ಭೃಗುಋಷಿಯಿಂದ ಚಂದ್ರಕೇತುರಾಯನಿಗೆ ಹೇಳಲ್ಪಟ್ಟ ದೇವರಹಸ್ಯ. ೧೮೦

ಚಂದ್ರಕೇತುರಾಯನಿಗೆ ನಾಗಕನ್ಯೆಯರಿಂದ ಬೋಧಿಸಲ್ಪಟ್ಟ ಅಚಲಪರಿಪೂರ್ಣಭಾವ. ೧೯೪

೧೩. ಕೃಷ್ಣಾರ್ಜುನರು ಖಾಂಡವವನವನ್ನು ದಹಿಸಿದ ಕಥೆ. ೨೦೧



ಶ್ರೀರಸ್ತು.

॥ ಶ್ರೀಕೃಷ್ಣಪರಬ್ರಹ್ಮಣೇ ನಮಃ. ॥





ವಸುದೇವಸುತಂ ದೇವಂ ಕಂಸಂ ಚಾಣೂರಮರ್ದನಂ ।
ದೇವಕೀಪರಮಾನನ್ದಂ ಕೃಷ್ಣಂ ವನ್ದೇ ಜಗದ್ಗುರುಂ ॥

# ಶ್ರೀ ಕೃಷ್ಣಬೋಧಾಮೃತಸಾರ

ವೆಂಬ

## ಹನ್ನೆರಡು ರಾಜಪುತ್ರರ ಕಥೆಗಳು.



ಶ್ಲೋ॥ ನಾರಾಯಣಂ ನಮಸ್ಕೃತ್ಯ ನರಂಚೈವನರೋತ್ತಮಂ ।
ದೇವೀಂನರಸ್ವತೀಂವ್ಯಾಸಂ ತತೋಜಯಮುದೀರಯೇತ್ ॥

ತಾ॥ ಶ್ರೀಮನ್ನಾರಾಯಣನಂ ನಮಿಸಿ, ನರನಂ ನುತಿಗೈದು, ಸರಸ್ವತಿಯ ಮನದೊಳಿಟ್ಟು ವ್ಯಾಸಮಹರ್ಷಿಯಂ ಧ್ಯಾನಿಸಿ. ಗುರುನಾಥನನ್ನು ಹೃದಯ

---

ಕಮಲದಲ್ಲಿಟ್ಟು ಪೂರ್ವೋಕ್ತಮಾದ ವ್ಯಾಸಮಹರ್ಷಿಯಿಂದ ವಿರಚಿತಮಾದ ಶ್ರೀಮನ್ಮಹಾಭಾರತದ ಆದಿಪರ್ವದೊಳು ಶ್ರೀಕೃಷ್ಣನು, ಮತ್ತು ಇಂದ್ರಾಂಶಸಂಭೂತನಾದ ಅರ್ಜುನನು ಇವರಿಬ್ಬರೂ ವಸಂತಋತುವಿನಲ್ಲಿ, ಯಮುನಾನದೀ ಪರ್ವತಪ್ರಾಂತ್ಯಗಳಲ್ಲಿ ಸಂವಾದಮಾಡಿದ ಅಂದರೆ ಸಾಕ್ಷಾತ್ ಶ್ರೀಕೃಷ್ಣನು ಅರ್ಜುನನಿಗೆ ಆ ಕಾಲದೊಳು ಮೋಕ್ಷಸಾಧನಗಳಾದ ವೇದಾಂತ ರಹಸ್ಯಮಾರ್ಗಗಳನ್ನು ತಿಳಿಸಿದಂಥಾ ಅಂಶಗಳನ್ನೇ ಕುರಿತು ಈ ಲೋಕದಲ್ಲಿ ಅಚಲಜ್ಞಾನಿಗಳಾದ ಸರ್ವರಿಗೂ ಸುಲಭವಾಗಿ ತಿಳಿಯುವಹಾಗೆ ಅತಿಸುಲಭವಾಗಿಯೂ, ಅತ್ಯಂತ ರಮಣೀಯವಾಗಿಯೂ, ಶೃಂಗಾರರಸಭರಿತವಾಗಿಯೂ, ಪಾಪನಾಶಕರವಾಗಿಯೂ, ಅತಿವಿಚಿತ್ರವಾಗಿಯೂ, ಕನ್ನಡ ಪದಪದ್ಧತಿಗಳುಳ್ಳದ್ದಾಗಿಯೂ, ಇರುವ ಈ ಹನ್ನೆರಡು ಕಥಾರೂಪಕವಾಗಿರುವ ರಾಜರುಗಳ ಚರಿತ್ರೆಗಳನ್ನು ಕಲ್ಪಿಸಿ ಆ ಹನ್ನೆರಡು ಕಥೆಗಳಲ್ಲಿಯೂ ಒಂದೊಂದು ಕಥೆಯಲ್ಲಿ ಒಂದೊಂದು ವಿಧವಾದ ವೇದಾಂತರಹಸ್ಯ ಸಾರವನ್ನು ಶೃಂಗಾರಾದ್ಭುತಗಳನ್ನು ಪ್ರಯೋಗಿಸಿ, ಶ್ರೀಕೃಷ್ಣಬೋಧಾಮೃತಸಾರ ಎಂಬೀ ಗ್ರಂಥವನ್ನು ರಚಿಸಿತೊಡಗಿರುವೆನು ಗುಣೈಕದರ್ಶಿಗಳಾದ ಮಹನೀಯರು ಈ ಗ್ರಂಥವನ್ನು ಆಮೂಲಾಗ್ರವಾಗಿ ಪರಿಶೋಧಿಸಿ, ಹಂಸಪಕ್ಷಿಯಂತೆ ಗುಣವನ್ನೆ ಗ್ರಹಿಸುವರೆಂದಾಶಯವು.



## —: ಕಥಾಕ್ರಮವಿವರಣೆ :—

ಜಗಜ್ಜನ್ಮಾದಿಕಾರಣನಾಗಿಯೂ, ಅವ್ಯಾಜಕರುಣಾರಸ ಪೂರಿತಾಂಗನಾಗಿಯೂ, ಅಂತರ್ಬಹಿರ್ವ್ಯಾಪಕನಾಗಿಯೂ, ತ್ರಿಮೂರ್ತಿ ಸ್ವರೂಪನಾಗಿಯೂ, ಭಕ್ತಜನಾಭೀಷ್ಟದಾಯಕನಾಗಿಯೂ, ಶಂಕಚಕ್ರ ಗಧಾಧರನಾಗಿಯೂ, ಕ್ಷೀರಾಬ್ಧಿ ಶಯನನಾಗಿಯೂ, ಪರಾತ್ಪರನಾಗಿಯೂ, ಸಚ್ಚಿದಾನಂದಸ್ವರೂಪನಾಗಿಯೂ, ಪರಮಾತ್ಮನಾಗಿಯೂ, ಇರುವ ಪರಬ್ರಹ್ಮಸ್ವರೂಪನಾದ ಶ್ರೀಮನ್ನಾರಾಯಣನು, ಲೀಲಾರೂಪದಿಂದ ಮಾನುಷ ನಟನೆಯಂ ನಡೆಸಲೋಸುಗ ಭೂಲೋಕದೊಳು ದ್ವಾರಕಾಪಟ್ಟಣದಲ್ಲಿ ಅವತರಿಸಿ ಆ ದ್ವಾರಕಾಪಟ್ಟಣವನ್ನು ಸಂರಕ್ಷಿಸುತ್ತಾ ತನ್ನ ಲೀಲಾಮಾನುಷಚರಿತ್ರೆಯಿಂದ ಗೋಪಸ್ತ್ರೀಯರನ್ನು ಆನಂದ ಸಮುದ್ರದಲ್ಲಿ, ಮುಳುಗಿಸುತ್ತಾ ಗೋಪ ಸಮೂಹವನ್ನು ಭ್ರಮೆಗೊಳಿಸುತ್ತಾ, ಸಕಲವಾದ ಮಾನುಷಸುಖಗಳನ್ನು ನಿಜಮಾಯೆಯಿಂದ ನಿತ್ಯಾನಂದ ವೈಭವಗಳಂತೆ ಅನುಭವಿಸುತ್ತಾ ಕಾಲಮಂ ಕಳೆಯುತ್ತಿರಲು ಕೆಲವುಕಾಲ ಕಳೆದ ಬಳಿಕ ಒಂದಾನೊಂದು ದಿವಸ ಆ ಜಗಜ್ಜನ್ಮಾದಿ ಕಾರಣನಾದ ಶ್ರೀಕೃಷ್ಣನ ತಂದೆ ತಾಯಿಗಳಾದ ವಸುದೇವ, ದೇವಕಿಯರು ತಮ್ಮ ಪುತ್ರರತ್ನವಾದ ಕೃಷ್ಣನ ಲೀಲಾ

ಸ್ಥಾನಕ್ಕೆ ಹೋಗಲಾಗಿ ಶ್ರೀಕೃಷ್ಣನು ತನ್ನ ಪತ್ನಿಯರೊಡನೆ ತಂದೆತಾಯಿಗಳನ್ನು ಇದಿರ್ಗೊಂಡು ಅರ್ಘ್ಯಪಾದ್ಯಾದಿಗಳಿಂದಭಿವಂದಿಸಿ ಸುಖಾಗಮನವನ್ನು ಕೇಳಲಾಗಿ ಆ ತಂದೆತಾಯಿಗಳು ಅತ್ಯಾನಂದವಂ ಹೊಂದಿ ಪುತ್ರನನ್ನು ಸೊಸೆಯನ್ನು ಆಲಿಂಗಿಸಿ ಆನಂದಬಾಷ್ಪಗಳನುಗುಳುತ್ತಾ ಮಗನೊಡನೆ ಇಂತೆಂದರು, ಎಲೈ ಯಾದವಕುಲಾಂಬುಧಿಯೇ! ನಿನ್ನ ಲೀಲಾಚಾತುರ್ಯವನ್ನು ವರ್ಣಿಸಲಾರು ಸಮರ್ಥರು, ಆವರೆ ನಿನ್ನ ತಂಗಿಯಾದ ಸುಭದ್ರಾದೇವಿಯನ್ನು ಪಾಂಡುನಂದನನಾದ ಅರ್ಜುನನು ಓರ್ವಳನ್ನೇ ರಥದಲ್ಲಿ ಕುಳ್ಳಿರಿಸಿಕೊಂಡು ತನ್ನ ಪಟ್ಟಣಕ್ಕೆ ತೆರಳಿದನು. ಸುಭದ್ರೆಯು ಇಲ್ಲಿಂದ ತೆರಳಿದಾರಭ್ಯ ಈ ಪರಿಯಂತರವೂ ಅವಳ ವರ್ತಮಾನವೇ ತಿಳಿಯಲಿಲ್ಲ. ಆ ಇಂದುವದನೆಯು ಹ್ಯಾಗಿರುವಳೋ ಎಂಬದಾಗಿ ಮನಸ್ಸಿನೊಳು ವ್ಯಾಕುಲವುಂಟಾಗಿರುವದರಿಂದ ನೀನು ಚತುರಂಗ ಬಲಸಮೇತನಾಗಿ ಅನೇಕ ಧನಕನಕ ವಸ್ತುವಾಹನಗಳನ್ನು ತೆಗೆದುಕೊಂಡು ಪಾಂಡುನಂದನನಿರುವ ಸ್ಥಳಕ್ಕೆ ಹೋಗಿ ನಿನ್ನ ತಂಗಿಯಾದ ಸುಭದ್ರೆಯನ್ನು ನೋಡಿಕೊಂಡು ನೀನು ಕೊಂಡುಹೋಗುವ ಪದಾರ್ಥಗಳಲ್ಲಿ ಉಚಿತವಾದವುಗಳನ್ನವಳಿಗಿತ್ತು ಕುಂತಿದೇವಿಗಭಿವಂದಿಸಿ ನಿನ್ನ ಪಾಲಕರಾದ ಧರ್ಮರಾಯ ಮೊದಲಾದವರನ್ನು ಮತ್ತು ದ್ರೌಪದಿಯನ್ನು ಉಚಿತರೂಪದಿಂ ಸಂಭಾವಿಸಿ ಶೀಘ್ರವಾಗಿ ಬರುವವನಾಗೆನಲು ಆ ಮಾತುಗಳನ್ನು ಕೇಳಿದವನಾಗಿ ತಕ್ಷಣವೇ ಶ್ರೀಕೃಷ್ಣನು ಮಾತಾಪಿತೃಗಳ ಮನೋಭಿಲಾಷೆಯನ್ನು ನೆರವೇರಿಸುವದಕ್ಕಾಗಿ ಸಮಾಚಾರವನ್ನೆಲ್ಲಾ ತನ್ನ ಕಾಂತಾರತ್ನಗಳಾದ ರುಕ್ಮಿಣೀ ಸತ್ಯಭಾಮೆಯರಿಗರುಹಿ ಅವರ ಸಮ್ಮತಿಯಂ ಪಡೆದು ಅತ್ಯುನ್ನತಗಳಾದ ರಥಗಳನ್ನು, ಐರಾವತಕ್ಕೆ ಸಮಾನವಾದ ಆನೆಗಳನ್ನು ಉಚ್ಚೈಶ್ರವಸ್ಸಿಗೆ ಸದೃಶಗಳಾದ ದಿವ್ಯ ಕುದುರೆಗಳನ್ನು, ಅನೇಕ ಭಟರುಗಳನ್ನು, ದೇವತಾಸ್ತ್ರೀಯರನ್ನು ಹಿಯ್ಯಾಳಿಸುವ ನಾರೀಮಣಿಗಳನ್ನು ದಾಸದಾಸೀವರ್ಗವನ್ನು ರತ್ನಖಚಿತಗಳಾದ ಆಭರಣಗಳನ್ನು ಸುವರ್ಣಖಚಿತಗಳಾದ ಪಾಲಕಿಗಳನ್ನು ದಿವ್ಯವಾದ ಚೀನೀಚೀನಾಂಬರಗಳನ್ನು ಇವೆ ಮೊದಲಾದವುಗಳೊಡನೆ ಹೊರಟು ದಿವ್ಯವಾದ ರಥವನ್ನೇರಿ ಮಂದಿರವನ್ನು ಬಿಟ್ಟವನಾಗಿ ದ್ವಾರಕಾಪಟ್ಟಣದ ರಾಜಮಾರ್ಗದೊಳು ಪ್ರಯಾಣೋನ್ಮುಖನಾಗಿ ರಮಣೀಯವಾದ ಮಂಗಳವಾದ್ಯಂಗಳೊಡನೆ ಹೋಗುತ್ತಲಿರುವ ಲೀಲಾಮಾನುಷಸ್ವರೂಪನಾದ ಶ್ರೀಮನ್ನಾರಾಯಣಮೂರ್ತಿಯಂ ಕಂಡು ಆ ಪಟ್ಟಣದೊಳಿರುವ ಅಂಗನಾಮಣಿಗಳು ತಮ್ಮ ತಮ್ಮ ಕಣ್ಣುಗಳ ರೆಪ್ಪೆಗಳನ್ನು ಅಲ್ಲಾಡಿಸದೆ, ಆ ಶ್ರೀಕೃಷ್ಣನನ್ನೆ ತದೇಕಾಯತ್ತಚಿತ್ತದಿಂದ ನೋಡುತ್ತಾ ತಮ್ಮತಮ್ಮ ಸಮೂಹದಲ್ಲಿ ಒಬ್ಬರಿಗೊಬ್ಬರು ಆ ಮಹಾಪುರುಷನ ರೂಪು ರೇಖಾ ಲಾವಣ್ಯಗಳನು ವರ್ಣಿಸುತ್ತಾ ಒಬ್ಬ ಸಖಿಯನ್ನು ಕುರಿತು ಮತ್ತೋರ್ವ ಸಖಿ ಇಂತೆಂದಳು.

ಎಲೈ, ಸಖಿಶಿರೋಮಣಿಯಾದ ಪ್ರಾಣರಕ್ಷಕಳೇ ಲಾಲಿಸು ! ಈ ಪ್ರಯಾಣೋನ್ಮುಖನಾಗಿರುವ ಕಂದರ್ಪಜನಕನಾದ ಇಂದಿರಾಕಾಂತನು, ಅತಿ ಸೌಂದರ್ಯಶಾಲಿಗಳಾದ ನಮ್ಮಂಥಾ ಅಬಲೆಯರನ್ನು ಕಾಮಪಾಶಕ್ಕೆ ಸಿಲುಕಿಸಿ ತಾನು ಎಲ್ಲಿಗೆ ಹೋಗುವನೋ ಸುಂದರಾಂಗಿಗಳಾದ ನಮ್ಮಂಥಾ ನಾರೀರತ್ನಗಳನ್ನೀ ರೀತಿಯಾಗಿ ತ್ಯಜಿಸಿ ಪೋಗುವದು ಈತಂಗೆ ಸಹಜಧರ್ಮವೆ ! ಆಹಾ ! ಲೋಕರಕ್ಷಕನಾದ ಪರಮಾತ್ಮ ಸ್ವರೂಪವುಳ್ಳ ಈ ಮಹಾನುಭಾವನನ್ನು ಈ ನಿಮಿಷಮಾತ್ರವಾದರೂ ನಾವು ಬಿಟ್ಟಿರುವುದು ಹೇಗೆ! ಎಂಬೀ ಪ್ರಕಾರವಾಗಿ ಆ ಮಹಾಪುರುಷನ ಮಹಿಮೆಯಂ ವರ್ಣಿಸುತ್ತಾ ಒಬ್ಬರಿಗೊಬ್ಬರು ಸರಸಸಲ್ಲಾಪಗಳನಾಡುತ್ತಾ ಒಬ್ಬರ ಬೆನ್ನಿನಮೇಲೆ ಮತ್ತೊಬ್ಬರು ಬೀಳುತ್ತ ಮತ್ತೆ ಕೆಲವರು ಕೇವಲ ವೈರಾಗ್ಯಮಾರ್ಗದಿಂದ ಮಹಾಪುರುಷನೊಳು ಮನಸ್ಸುಗಳನ್ನಿಟ್ಟು ಪ್ರಾಣಾಯಾಮ ಪೂರ್ವಕದಿಂದ ತಮ್ಮ ದೃಷ್ಟಿಯನ್ನು ಭೂಮಿಮಧ್ಯದೊಳು ನೆಲೆಗೊಳಿಸಿ ತತ್ಸ್ವರೂಪವನ್ನೇ ಧ್ಯಾನಮಾಡುತಲಿದ್ದರು, ಬಳಿಕ ಸಮಸ್ತ ಪ್ರಜೆಗಳ ಮನಃಕಮಲಗಳನ್ನು ವಿಕಸಿತಗೊಳಿಸಿ ಅಪಾರವಾದ ಆಹ್ಲಾದವನ್ನುಂಟುಮಾಡುತ್ತಾ ಶ್ರೀಕೃಷ್ಣಮೂರ್ತಿಯು ದ್ವಾರಕಾವತಿಯಿಂದ ಹೊರಟು ಪಾಂಡುನಂದನರಿರುವ ಇಂದ್ರಪ್ರಸ್ತಪುರಕ್ಕೆ ಹೋಗಿ ತನ್ನ ಸುಖಾಗಮನವನ್ನು ಕುಂತೀನಂದನನನಾದ ಧರ್ಮರಾಯಂಗೆ ತಿಳಿಸಲು ಆ ಧರ್ಮರಾಯನು ಅಪರಿಮಿತವಾದ ಆನಂದಪರವಶನಾಗಿ ಸಕಲವಾದ ಉತ್ಸಾಹದಿಂದ ಶ್ರೀಕೃಷ್ಣನನ್ನಿದಿಗೊಂಡು ಆತನಂ ಪಟ್ಟಣದೊಳಕ್ಕೆ ಕರೆದುಕೊಂಡು ಬಂದು ರಾಜಬೀದಿಯಿಂದ ಅಂತಃಪುರಕ್ಕೆ ಪೊರಮಡಿಸಿ ಉಚಿತವಾದ ಸುಖಾಸನದಲ್ಲಿ ಕುಳ್ಳಿರಿಸಿ ಸುಖಾಗಮನವಂ ವಿಚಾರಿಸಿದವನಾಗಿ ಆ ಕೃಷ್ಣನಂ ಕುರಿತು ಎಲೈ ಲೋಕರಕ್ಷಕನಾದ ಪರಬ್ರಹ್ಮನೆ, ನಮ್ಮ ಜನ್ಮಾಂತರ ಪುಣ್ಯಪರಿಪಾಕದದೆಶೆಯಿಂ ನಿನ್ನ ದರ್ಶನವು ಲಭಿಸಿತು, ಇಂತಾ ದರ್ಶನಮಾತ್ರದಿಂದಲೇ ನಾವು ಕೃತಕೃತ್ಯರಾದೆವು ಆದರೆ ಅಂಥಾ ಸಕಲ ಚತುರಂಗಬಲಸಮೇತನಾಗಿ ಪ್ರಕೃತದಲ್ಲಿ ಸುಖಾನುಗಮನಕ್ಕೆ ಕಾರಣವೇನೆಂದು ಅತಿವಿನಯದಿಂ ಬೆಸಗೊಳ್ಳಲಾಮಾತಿಗೆ ಪುರುಷೋತ್ತಮನಾದ ಶ್ರೀ ಕೃಷ್ಣನು ಇಂತೆಂದನು.

ಎಲೈ, ಧರ್ಮನಂದನನೇ ನಾನು ಬಂದಿರುವ ವರ್ತಮಾನವಂ ಹೇಳಲಾಗುವುದಿಲ್ಲ. ಪ್ರತ್ಯಕ್ಷವಾಗಿ ನಡೆಯುವ ಕಾರಣಗಳಿಂದ ತಿಳಿಯಬಹುದೆಂದು ಪೇಳಿ ಭಾವಮೈದಂದಿರಾದ ಐದು ಜನಗಳಿಗೂ ಬೇರೆಬೇರೆ ವಸ್ತ್ರಾಭರಣಗಳನ್ನು ಉಡುಗರೆಯಾಗಿ ಕೊಟ್ಟು ಸೋದರತ್ತೆಯಾದ ಕುಂತೀದೇವಿಗಭಿವಂದಿಸಿ ಆಕೆಯ ಆಶೀರ್ವಚನಮಂ ಸ್ವೀಕರಿಸಿ ದಿವ್ಯವಾದ ಪೀತಾಂಬರವನ್ನಾಕೆಗೆ ಉಡುಗೆರೆಮಾಡಿ, ದ್ರೌಪದೀ ಸುಭದ್ರೆಯರಿಗೆ ದಿವ್ಯತರವಾದ ಪೀತಾಂಬರಗಳನ್ನು ಕೊಟ್ಟು ಅಪರಿ

ಮಿತವಾದ ಆಭರಣಗಳನ್ನು ವಸ್ತ್ರಗಳನ್ನು ಸಖಿಯರನ್ನು ದಾಸದಾಸೀಜನರನ್ನು ತಂಗಿಯಾದ ಸುಭದ್ರೆಗೆ ಒಪ್ಪಿಸಿ ಕೇವಲ ಶಾಂತಮಾರ್ಗಗಳನ್ನಾಕೆಗೆ ಬೋಧಿಸಿ ಅಪರಿಮಿತವಾದ ಚತುರಂಗಬಲವನ್ನು ಧರ್ಮನಂದನನಾದ ಧರ್ಮರಾಯಂಗೆ ಕಪ್ಪವನ್ನಾಗಿ ಒಪ್ಪಿಸಿದವನಾದನು, ಬಳಿಕಲಾ ಕುಂತೀನಂದನನು ಶ್ರೀಕೃಷ್ಣ ಭಗವಂತನನ್ನು ಕುರಿತು, ಎಲೈ—ದೇವದೇವೋತ್ತಮಾ ! ದೇವತಾಸಾರ್ವ ಭೌಮಾ ! ಪರಬ್ರಹ್ಮಸ್ವರೂಪನಾದ ನಿನ್ನಯ ಕಟಾಕ್ಷವು ಸಂಪೂರ್ಣವಾಗಿ ನಮ್ಮಲ್ಲಿ ನೆಲೆಯಾಗಿರುವ ಕಾಲದೊಳು ಈ ಕಪ್ಪವನ್ನಾಗಿ ಕೊಟ್ಟ ಚತುರಂಗ ಬಲದಿಂದ ಪ್ರಯೋಜನವೇನು ಆದರೆ ನಿನ್ನ ಅಂತರಂಗ ಪೂರ್ಣವಾದ ಅಸಂ ದಾಭಿಮಾನವೇ ನಮಗೆ ಶ್ರೇಯಸ್ಕರವೆಂಬುದಾಗಿ, ಆ ಮಹಾನುಭಾವನನ್ನು ಸ್ತುತಿಸುತ್ತಾ ಆತನಿಂದ ಸಕಲವಾದ ಧರ್ಮಸಾರಗಳನ್ನು ತಿಳಿದುಕೊಳ್ಳುತ್ತಾ ಇರಲಾಗಿ ಕೆಲವು ದಿವಸಗಳಮೇಲೆ ಒಂದಾನೊಂದು ದಿನ ಕುಂತೀನಂದನನಾದ ಅರ್ಜುನನು ಶ್ರೀಕೃಷ್ಣನಂ ಕುರಿತು ಇಂತೆಂದನು ಎಲೈ—ದೇವಕೀನಂದನನೇ ! ನನ್ನ ಮನಸ್ಸಿನೊಳು ಒಂದು ವಿಧವಾದ ಆಶಯವಿರುವದು ಅದೇನೆಂದರೆ ಈಗ ಪ್ರಾಪ್ತವಾಗಿರುವ ವಸಂತಋತುವು ಅತಿ ಮನೋಹರವಾಗಿಯೂ, ಅತಿ ರಮ್ಯ ವಾಗಿಯೂ ಇರುವುದು. ಈ ಕಾಲದಲ್ಲಿ ನಾವೀರ್ವರೂ ಆ ಮನೋಹರವಾದ, ಯಮುನಾನದಿ ಪ್ರಾಂತ್ಯದೊಳಿರುವ ವನ, ಬೆಟ್ಟ,ಗುಟ್ಟಗಳಲ್ಲಿ ವಿಹಾರಮಾಡು ವಂಥವರಾಗಿ ಕೆಲವುಕಾಲ ಸುಖದೊಳಿರಬೇಕೆಂದು ಪ್ರಾರ್ಥಿಸಲಾಗಿ ಪುಂಡ ರೀಕಾಕ್ಷನು ಎಲೈ—ಪಾಂಡುನಂದನನೇ ನಿನ್ನ ಮನೋಭಿಲಾಷೆಯಂತೆ ನಡೆಯು ವುದಕ್ಕೆ ಮನವಿರುವುದೆನಲಾ ತರುವಾಯ ಕೃಷ್ಣಾರ್ಜುನರೀರ್ವರೂ ಭೋಜನಾದಿ ಗಳಂ ತೀರಿಸಿಕೊಂಡು ಯಮುನಾನದಿ ಪ್ರಾಂತ್ಯದೊಳು ಎಷ್ಟು ದಿವಸಗಳಿರ ಬೇಕೊ ಅಷ್ಟುಕಾಲಕ್ಕೆ ಸರಿಯಾದ ಭೋಜನ ಸಾಮಗ್ರಿಯಗಳನ್ನು ಪರಿಚಾರಕ ರನ್ನು ಸಿದ್ಧಮಾಡಿಕೊಂಡು ಧರ್ಮರಾಯನಿಂದ ಅನುಮತಿಯಂ ಪಡೆದು ದಿವ್ಯ ತರಮಾದ ಕುದುರೆಗಳಮೇಲೆ ಹತ್ತಿ ಪ್ರಯಾಣೋನ್ಮುಖರಾಗಿ ಮಾರ್ಗದಲ್ಲಿ ಹೋಗುತ್ತಿರುವಾಗ ಅನೇಕವಾದ ಗಿರಿತಟಾಕಗಳಂ ದಾಂಟಿ ಅರಣ್ಯಮಧ್ಯ ದಲ್ಲಿರುವ ನಾನಾವಿಧ ದುಷ್ಟಜಂತುಗಳನ್ನು ಬೇಟೆಯಾಡುತ್ತಾ ವಿಧವಿಧವಾದ ಸರಸ್ಸುಗಳಲ್ಲಿರುವ ಕಮಲಪುಷ್ಪಗಳನ್ನು ಕೀಳುತ್ತಾ ಅತ್ಯುತ್ತಮವಾದ ನದೀ ಪ್ರವಾಹಗಳಲ್ಲಿ ಈಜುತ್ತಾ ಹೊಂಗೆಯ ಮರಗಳ ನೆರಳಲ್ಲಿ ಕುಳಿತುಕೊಂಡು ವಿಶ್ರಾಂತಿಸುಖವನ್ನನುಭವಿಸುತ್ತಾ ಶುಕಪಿಕಶಾರಿಕಾದಿ ಪಕ್ಷಿಗಳ ಧ್ವನಿಗಳನ್ನಾ ಲಿಸಿ, ಕೇಳುತ್ತಾ ಪುಷ್ಪಫಲಗಳಿಂದ ಪೂರಿತಗಳಾದ ವಿವಿಧವೃಕ್ಷಗಳನ್ನು ಈಕ್ಷಿ ಸುತ್ತಾ ಕೇವಲಮಾಧುರ್ಯವುಳ್ಳ ಫಲಗಳನ್ನು ಭಕ್ಷಿಸುತ್ತಾ ಕೇವಲ ನಿರ್ಮಲವಾದ ಉದಕವನ್ನು ಕುಡಿಯುತ್ತಾ, ಸಮಾಚೀನವಾದ ವಾಸನೆಯುಳ್ಳ ಪುಷ್ಪಗಳನ್ನು

ಆಘ್ರಾಣಿಸುತ್ತಾ ರಮಣೀಯಳಾದ ಯಮುನಾನದೀ ತೀರವನ್ನು ಸೇರಿದವರಾದರು. ಆ ನದೀತೀರದಲ್ಲಿ ಕೃಷ್ಣಾರ್ಜುನರೀರ್ವರೂ ಹಗಲು ಕಾಲದಲ್ಲಿ ಸುಗಂಧಯುಕ್ತಗಳಾದ ಕುಸುಮಗಳಿಂದ ಅತಿಮನೋಹರವಾದ ಲತಾಗೃಹಗಳಲ್ಲಿಯೂ ತಮಾಲ ವಟವೃಕ್ಷಗಳ ನೆರಳುಗಳಲ್ಲಿಯೂ, ಕಾಲವನ್ನು ಕಳೆಯುತ್ತಾ ದಿನಕರ ನಸ್ತಾದ್ರಿಯನೇರಲು ಈರ್ವರೂ ಸುಖಭೋಜನವಂ ಮಾಡಿ ಅತಿಶೀತಳವಾಗಿರುವ ಯಮುನಾ ನದಿಯುಸೈಕತ ಪ್ರದೇಶಗಳೊಳು ಕುಳಿತುಕೊಂಡು ಜಾಜಿ, ಲವಂಗ, ಕರ್ಪೂರದಿಂದ್ಯುಕ್ತವಾದ ತಾಂಬೂಲವುಂ ಸವಿದು ಸುವಾಸನೆಯುಳ್ಳ ಪುಷ್ಪಂಗಳಂ ಧರಿಸಿಕೊಂಡು ಪರಿಮಳದ್ರವ್ಯಮಂ ಮೈಗೆ ಲೇಪವಂ ಮಾಡಿಕೊಂಡು ಅತಿ ಶೀತಲವಾಗಿ ಬೀಸುವ ಮಂದಮಾರುತವನ್ನು ಸೇವಿಸಿ ಸುಖಾನಂದವನ್ನೈದುತ್ತಾ ಸರಸ ಚಮತ್ಕಾರಗಳೊಳು ಕಾಲವನ್ನು ನೂಕುತ್ತ ಸುಖದಲ್ಲಿರುತ್ತಿರಲು ಒಂದಾನೊಂದು ದಿನ ರಾತ್ರಿ ಕುಂತೀನಂದನನಾದ ಅರ್ಜುನನು ಭಗವತ್ಸ್ವರೂಪನಾದ ಶ್ರೀಕೃಷ್ಣನಂ - ಕುರಿತು ದೇವದೇವೋತ್ತಮಾ ! ಭಕ್ತಪರಾಧೀನ ಆರ್ತಜನರಕ್ಷಕ ! ಆಕಾಶದೊಳು ನೋಡುವಂತಾವನಾಗು ಮೃಗಾಂಕನಾದ ಚಂದ್ರನು ನಿರ್ಮಲವಾಗಿಯೇ ಇರುವನಾದಕಾರಣ ದೇವಮನುಜರಿಗೆ ಯಾವ ಕಾರಣದಿಂದ ಜನನಮರಣ ಪ್ರವಾಹರಹಿತವಾದ ಅಪವರ್ಗಮಾರ್ಗವುಂಟಾಗುವದೊ ಅಂತಪ್ಪ ಪುನರಾವರ್ತಿರಹಿತವಾದ ಮೋಕ್ಷಸಾಧನ ಮಾರ್ಗವನ್ನು ನೀನು ಸುಲಭವಾಗಿ ತಿಳಿಯುವಂತೆ ಅನುಗ್ರಹಿಸಬೇಕೆಂದು ಅತಿ ವಿನಯದಿಂದ ಪ್ರಾರ್ಥಿಸಿದ ಫಲ್ಗುಣನ ಮಾತುಗಳನ್ನಾಲಿಸಿದ ಸಚ್ಚಿದಾನಂದಸ್ವರೂಪನಾದ ಶ್ರೀಕೃಷ್ಣನು ಅರ್ಜುನನನ್ನು ನೋಡಿ, ಎಲೈ—ಪಾರ್ಥ ? ಬಹುಕಾಲದಿಂದಲೂ ನಿನಗೂ ನನಗೂ ಸಾಮಿಪ್ಯವು ಅನೇಕ ಸಮಯಗಳಲ್ಲಿ ಉಂಟಾಗಿದ್ದರೂ ಎಂದಿಗೂ ನೀನು ಇಂಥಾ ಅಮೋಘವಾದ ಮೋಕ್ಷಸಾಧನ ಮಾರ್ಗಾಪೇಕ್ಷೆಯುಳ್ಳವನಾಗಿರಲಿಲ್ಲ ಈಗ ನೀನು ಕೇಳುವ ವಿಷಯವು ಅತ್ಯಾಶ್ಚರ್ಯಕರವಾಗಿರುವುದು, ಇದು ನಿನ್ನ ಹೃದಯದೊಳೀಗ ಅಂಕುರಿಸಲು ಕಾರಣವು ಸ್ಫೂರ್ತಿಯಾಗಲಿಲ್ಲ ಆದರೆ ಅಪವರ್ಗಮಾರ್ಗಾಪೇಕ್ಷೆಯು ಸಾಕ್ಷಾತ್ ಶ್ರೀಮನ್ನಾರಾಯಣಾಂಶ ಸಂಭೂತರಿಗಲ್ಲದೆ ಇತರರಿಗೆ ಸಾಮಾನ್ಯವಾಗಿ ಉಂಟಾಗದು ಆದಕಾರಣ ನೀನು ಜನ್ಮಾಂತರದೊಳು ನರನಾರಾಯಣಋಷಿಯ ಸಂಸರ್ಗವನ್ನೈದಿದ್ದ ಕಾರಣ ಈಗ ನಿನಗೆ ಈ ಮೋಕ್ಷಸಾಧನಮಾರ್ಗವು ಸಮೀಪವಾದಂತೆ ತೋರಬಹುದು, ಇಂತಾ ಜ್ಞಾನವುಂಟಾದ ಮಾತ್ರದಿಂದಲೇ ಇಂದಿಗೆ ನೀನು ಧನ್ಯನಾದೆ. ಆದಾಗ್ಯೂ ಪ್ರಕೃತದಲ್ಲಿ ನಿನಗುಂಟಾಗಿರುವ ಅಮೋಘವಾದ ವಿವೇಕ ಜ್ಞಾನಕ್ಕೆ ನಾನು ಪರಮಸಂತುಷ್ಟನಾಗಿ ಮೋಕ್ಷಮಾರ್ಗವನ್ನು ಹೇಳತೊಡಗುವೆನು ಸಾದರದಿಂದ ಕೇಳುವಂತಾವನಾಗು, ಮೋಕ್ಷವೆಂದರೆ ಅಪವರ್ಗವು.

ಇದು ತತ್ವಜ್ಞಾನಿಗಳಿಂದ ಸಾಧಿಸಲಳವೇ ಹೊರ್ತು ಇತರ ಪುರುಷರಿಂದ ಎಂದಿಗೂ ಸಾಧನೆಯಾಗಲಾರದು. ಅತ್ರಿಋಷಿಯು, ಭರದ್ವಾಜ, ಕಶ್ಯಪ, ವಸಿಷ್ಠ, ಗೌತಮ, ಗಾರ್ಗೇಯ, ನಾರದ, ಕಣ್ವ, ಕಪಿಲ, ವಿಶ್ವಾಮಿತ್ರ, ವಾಲ್ಮೀಕಿ, ವ್ಯಾಸ, ಶುಕರೇ ಮೊದಲಾದ ಮಹಾಋಷಿಗಳೂ, ಧೃವ, ಪ್ರಹ್ಲಾದ, ಅಂಬರೀಷ, ರುಕ್ಮಾಂಗದರೇ ಮೊದಲಾದ ಅವನೀಪತಿಗಳೂ ಇನ್ನೂ ಇತರರರಾದ ಅನೇಕ ಭಗವದ್ಭಕ್ತರುಗಳು ಈ ಮೋಕ್ಷಮಾರ್ಗ ಸಾಧನ ಮಾದ ವೇದಾಂತರಹಸ್ಯಗಳನ್ನು ತಿಳಿದಂಥವರಾಗಿ ತನ್ಮೂಲಕದಿಂದ ಬ್ರಹ್ಮ ಜ್ಞಾನ ಉಂಟಾದವರಾಗಿ ಆ ಶಾಶ್ವತವಾದ ಅಪವರ್ಗವನ್ನೈದಿದವರಲ್ಲದೆ ಮತ್ಯಾವದರಿಂದಲೂ ಅಲ್ಲ. ಆದರೆ ಮಂತ್ರ, ಯಂತ್ರ, ತಂತ್ರಗಳು, ಷಣ್ಮತ ಗಳು, ಸಾಕಾರಧ್ಯಾನಗಳು, ದಾರು, ಲೋಹ, ಶಿಲಾ ಇವುಗಳಿಗೆ ನಾನು ರೂಪ ಮುಂತಾದವುಗಳು, ಕಲ್ಪನೆ ಮಾಡಿ ಪೂಜಿಸುವಿಕೆಯಿಂದ ತ್ರಿಗುಣಗಳನ್ನು ಧ್ಯಾನಮಾಡುವುದು, ಆ ಅಪವರ್ಗಕ್ಕೆ ದಾರಿಯಲ್ಲ ತತ್ವಮಸಿಯೇ ಮುಂತಾದ ವೇದಾಂತವಾಕ್ಯಗಳನ್ನು ಅರಿತು ಅರ್ಚನಸಂಪನ್ನಯೇ ಮುಂತಾದ ಪೂಜೆಗಳು ಸಾಕಾರ ಬ್ರಹ್ಮನಾದ ಸಾಕ್ಷಾತ್ ಪರಬ್ರಹ್ಮನ ಧ್ಯಾನವೇ ಮೋಕ್ಷಮಾರ್ಗವೆಂಬ ದಾಗಿ ಶ್ರೀಕೃಷ್ಣನು ವಿವರಿಸಲಾಗಿ ಅದಂ ಕೇಳಿದ ಪಾರ್ಥನು ಸಂತೋಷಭರಿತ ನಾಗಿ ಶ್ರೀಕೃಷ್ಣನಂ ಕುರಿತು ಇಂತೆಂದನು, ಎಲೈ-ಪುರುಷೋತ್ತಮಾ ಈಗ ಹೇಳ ಲ್ಪಟ್ಟ ಮೋಕ್ಷಮಾರ್ಗವನ್ನೆನಗೆ ತಿಳುಹುವುದಕ್ಕೆ ನೀನು ಅಲ್ಲದೆ ಮತ್ಯಾರೂ ಇಲ್ಲವಾದುದರಿಂದ ದೇವತೆಗಳು, ಋಷಿಗಳು, ಮಾನವರೂ ಸರ್ವಸುಖವಾದ ಆ ವೇದಾಂತಸಾರವನ್ನು ಹೇಗೆ ತಿಳಿದವರಾಗಿ ಯಾವರೀತಿಯಿಂದ ಮೋಕ್ಷವ ನ್ನೈದಿದರೋ ಅದಂ ನನಗೀಗ ನೀನು ವಿವರವಾಗಿ ಸಾನಂದದಿಂದ ಪೇಳ ಬೇಕೆಂದು ಅತಿವಿನಯದಿಂದ ಪ್ರಾರ್ಥಿಸಿದ ಪಾರ್ಥಂಗೀರೀತಿಯಾಗಿ ಶ್ರೀಕೃಷ್ಣ ನಿಂತೆಂದನು.

ಕೇಳೈ:—ಪಾಂಡುನಂದನನೇ! ಅಚಲಚಿತ್ತನಾಗಿ ಸಾವಕಾಶದಿಂದ ನೀನು ಕೇಳುವಂಥವನಾದರೆ ಸರ್ವ ದೇವತಾ ರಹಸ್ಯಗಳನ್ನು ನಿನಗ ನಾನು ತಿಳಿಸಿ ಹೋಗುವೆನು. ವೇದಾಂತಸಾರವೆಂಬುವದು ಸಾಂಖ್ಯ ಸೂತ್ರವೆಂತಲೂ ನಾದಾ ನಂದವೆಂತಲೂ, ಛಾಯಾಪುರುಷನೆಂಬುದಾಗಿಯೂ, ಪಂಚಮುದ್ರೆಗಳೆಂತಲೂ, ತಾರಕಮಂತ್ರವೆಂತಲೂ, ಸಚ್ಚಿದಾನಂದವೆಂಬದಾಗಿಯೂ, ಸಾಕಾರವೆಂತಲೂ, ನಿರಾಕಾರವೆಂತಲೂ, ಅಮನಸ್ಕವೆಂತಲೂ, ದರ್ಪಣವೆಂಬದಾಗಿಯೂ, ಜ್ಞಾನ ವೆಂಬದಾಗಿಯೂ, ಅಚಲಪರಿಪೂರ್ಣವೆಂತಲೂ, ಈರೀತಿಯಾಗಿ ಹನ್ನೆರಡು ವಿಧ ಗಳಾಗಿರುವವು ಸರ್ವಜ್ಞತನ್ಯವುಳ್ಳ ಬ್ರಹ್ಮ, ವಿಷ್ಣು, ಮಹೇಶ್ವರರಿಗೂ, ಜನನ ಮರಣ ರಹಿತವಾದ ದೇವತೆಗಳಿಗೂ, ಜ್ಞಾನೈಕತತ್ಪರರಾದ ಮಹರ್ಷಿಗಳಿಗೂ



ಅರ್ಜುನನು.



ಶ್ರೀಕೃಷ್ಣನು.

ಮತ್ತು ಮಾನುಷದೇಹಧಾರಿಗಳಿಗೂ, ಅಂತಪ್ಪ ವಿಷಯವು ಅಪವರ್ಗಮಾರ್ಗ ವನ್ನು ಕೊಡತಕ್ಕದ್ದಾಗಿರುವುದು. ಮೇಲೆ ಹೇಳಿದಂಥಾ ಹನ್ನೆರಡು ವಿಧಗಳನ್ನು ಯಾವನು ಗುರುಮುಖದಿಂದ ತಿಳಿಯಹೋಗುವನೋ ಅಂಥವನಿಗೆ ಪಾಪ ಪುಣ್ಯಾದಿಗಳು, ಮತ್ತು ಜನನಮರಣ ಪ್ರವಾಹಸಂಬಂಧವು ಎಂದಿಗೂ ಉಂಟಾ ಗಲಾರದು, ಅಂದರೆ ಆ ಮೋಕ್ಷವೇ ಪ್ರಾಪ್ತವಾಗುವದು. ಅಂತಪ್ಪ ಮಹಾ ಪುರುಷನನ್ನು ವರ್ಣಿಸುವುದಕ್ಕೆ ಬ್ರಹ್ಮಾದಿಗಳಿಗೂ ಅಶಕ್ಯವಾಗಿರುವುದು. ಈ ಮಾರ್ಗಗಳಲ್ಲಿ ಒಂದೊಂದು ಮಾರ್ಗವನ್ನೇ ಆಶ್ರಯಿಸಿಕೊಂಡು ಅನೇಕ ಮಹ ನೀಯರು ಲೋಕಾಂತರಗಳನ್ನೈದಿರುವರೆಂದು ಶ್ರೀಕೃಷ್ಣನು ನುಡಿಯಲಾಗಿ ಅರ್ಜುನನು, ಎಲೈ ಯಾದವಕುಲಶಿರೋಮಣಿಯೇ! ಈಗ ಹೇಳಲ್ಪಟ್ಟವುಗಳಲ್ಲಿ ಮೊದಲನೆ ಸಾಂಖ್ಯವಿಚಾರವನ್ನು ಚೆನ್ನಾಗಿ ತಿಳಿಯುವಂತೆ ಎನಗೆ ದಯಮಾಡಿ ತಿಳುಹಿ ಆ ಮೋಕ್ಷಮಾರ್ಗವನ್ನೈದಲು ನನ್ನನ್ನು ಅರ್ಹನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಲು, ಶ್ರೀಕೃಷ್ಣನು ಕೇಳೈ, ಕುಂತಿನಂದನನೇ! ಸಾಂಖ್ಯಶಾಸ್ತ್ರವಿಚಾರ ದಿಂದ ಮೋಕ್ಷವನ್ನೈದಿದ (ಸತ್ಯಜಿತುವೆಂಬ) ಮಹಾರಾಯನ ವೃತ್ತಾಂತವನ್ನು ಹೇಳುವೆನೆಂದು ನುಡಿಯಲಾರಂಭಿಸಿದನು.



## ಸತ್ಯಜಿತುವೆಂಬ ಮೊದಲನೆ ರಾಜನ ಕಥೆ.

ಪೂರ್ವಕಾಲದಲ್ಲಿ ಕರ್ನಾಟಕ ದೇಶವನ್ನು ಸತ್ಯದಿಂದ ಆಳುತಲಿದ್ದ ಜಯಂತನೆಂಬ ಧೊರೆಗೆ ಆತನ ಪಟ್ಟಮಹಿಷಿಯಾದ ಚಂದ್ರಾನನೆ ಎಂಬುವಳ ಗರ್ಭದೊಳು ಅತಿಸುಂದರನಾದ ಒಬ್ಬ ಕುಮಾರನು ಜನಿಸಿದನು. ಆಗಲಾ

ರಾಯನು ಪುತ್ರೋತ್ಸವಾದುದನ್ನು ಕೇಳಿ ಬಹಳ ಸಂತುಷ್ಟನಾಗಿ ಕೋಟ್ಯಾಂತರದ್ರವ್ಯವನ್ನು ಜಾತಕರ್ಮ ಮೊದಲಾದುವುಗಳಿಗೋಸ್ಕರ ಸತ್ಪಾತ್ರಂಗಳಲ್ಲಿ ವಿನಿಯೋಗವಮಾಡಿ ಪುತ್ರನಿಗೆ (ಸತ್ಯಜಿತು) ಎಂಬದಾಗಿ ನಾಮಕರಣ ಮಾಡಿ ಅತಿ ಪ್ರೇಮದಿಂದ ಸಲಹುತ್ತ ಬರಲು ಪುತ್ರನಿಗೆ ಐದು ಸಂವತ್ಸರಗಳಾಗಲು ತಂದೆಯು ಮಗುವಿಗೆ ವಿದ್ಯಾಭ್ಯಾಸವಂ ಮಾಡಿಸುವುದಕ್ಕಾಗಿ ಅಕ್ಷರಾಭ್ಯಾಸವಂ ಮಾಡಿಸಿ ಉತ್ತಮ ಗುರುವಿನ ಬಳಿಯಲ್ಲಿ ಒಪ್ಪಿಸಿ ಬಾಲಕನು ಅತಿ ಸೂಕ್ಷ್ಮನಾದ ಬುದ್ಧಿಯುಳ್ಳವನಾದ ಕಾರಣ ಆ ಗುರುಮುಖದಿಂದ ಸಕಲವಾದ ವಿದ್ಯೆಗಳನ್ನೂ, ಅಸ್ತ್ರಶಸ್ತ್ರಗಳ ಉಪಸಂಹಾರ ಮಂತ್ರಗಳನ್ನೂ, ಧನುರ್ವಿದ್ಯೆಗಳನ್ನೂ ಸಾಂಗೋಪಾಂಗವಾಗಿ ಕಲಿತುಕೊಂಡು ತಂದೆತಾಯಿಗಳಿಗೆ ಪ್ರೀತಿಯನ್ನುಂಟು ಮಾಡುತ್ತಾ ಪ್ರಾಪ್ತವಯಸ್ಕನಾಗಿ ಒಂದಾನೊಂದುದಿನ ಆತನಿಗೆ ಭೂಮಂಡಲ ಸಂಚಾರವಂ ಮಾಡಬೇಕೆಂದಾಶಯುವು ಸಂಭವಿಸಲಾಗಿ, ತಂದೆತಾಯಿಗಳಿಗೆ ತಿಳಿಯದಹಾಗೆ ತನಗೆ ಬೇಕಾದಂಥಾ ವಸ್ತ್ರಗಳನ್ನು, ಆಭರಣಗಳನ್ನು, ಹೇರಳವಾಗಿ ದ್ರವ್ಯವನ್ನು, ಧನುರ್ಬಾಣಗಳನ್ನೂ ತೆಗೆದುಕೊಂಡು ಅರ್ಧರಾತ್ರಿಯ ಸಮಯದೊಳಿದ್ದು ಉತ್ತಮವಾದ ಕುದುರೆಯಮೇಲೆ ಕುಳಿತುಕೊಂಡು ಉತ್ತರ ದಿಕ್ಕಿನಕಡೆಗೆ ಪ್ರಯಾಣಮಾಡಿದವನಾದನು. ಮರುದಿವಸ ಸೂರ್ಯೋದಯವಾಗಲು ಅಂತಃಪುರದಲ್ಲಿ ತಂದೆತಾಯಿಗಳು ಪುತ್ರನನ್ನು ಕಾಣದೆ ಬಹಳವಾಗಿ ದುಃಖಿಸುತ್ತಾ ಎಲ್ಲಿಗೆ ಹೋದನೋ? ಎಂಬದಾಗಿ ವ್ಯಾಕುಲಚಿತ್ತರಾಗಿ ಚತುರ್ದಿಕ್ಕುಗಳಲ್ಲಿಯೂ ಹರಕರುಗಳ ಹೇಳಿ ಚಾರರನ್ನು ಅಟ್ಟಿದರು.

ಇತ್ತಲಾ ಮಧ್ಯರಾತ್ರಿಯೊಳು ಏಕಾಂಗಿಯಾಗಿ ಹೊರಟ ಸತ್ಯಜಿತು ರಾಯನು ಸರಿಯಾದ ಮಾರ್ಗವು ಸಿಕ್ಕದೆ ಅರಣ್ಯಮಧ್ಯದಲ್ಲಿ ಭಯರಹಿತನಾಗಿ ಹೋಗುತ್ತಾ ನಾನಾವಿಧವಾದ ದುಷ್ಟಮೃಗಗಳನ್ನು ಸಂಹರಿಸುತ್ತಾ ವನಮಧ್ಯದೊಳು ಸಿಕ್ಕುವ ರಸಭರಿತವಾದ ಫಲಗಳನ್ನು ಭಕ್ಷಿಸುತ್ತಾ ನದಿಗಳಲ್ಲಿ ಹರಿಯುವ ಉದಕಗಳನ್ನು ಕುಡಿಯುತ್ತಾ ಸರಸ್ಸುಗಳೊಳಿರುವ ತಾವರೆ ಪುಷ್ಪಗಳನ್ನು ಕೀಳುತ್ತಾ ಪುನ್ನಾಗವೃಕ್ಷಗಳ ತಡಿಗಳಲ್ಲಿ ವಿಶ್ರಾಂತಿ ತೆಗೆದುಕೊಂಡು ಝಿಲ್ಲೀಧ್ವನಿಗಳಿಗೆ ಕಿವಿಗೊಟ್ಟು ಅದಂ ಕೇಳಲಾರದೆ ಕಿವಿಗಳನ್ನು ಮುಚ್ಚಿಕೊಳ್ಳುತ್ತಾ ಈ ರೀತಿಯೊಳು ಪ್ರಯಾಣಮಾಡುತ್ತಾ ಬಹುದೂರ ಕಳೆದ ಬಳಿಕ, ಕಡೆಗೆ ಒಂದಾನೊಂದು ಶೃಂಗಾರ ಸಹಿತವಾದ ವಿಪಿನವನ್ನು ನೋಡಿ ಅದನ್ನು ಒಳಹೊಕ್ಕು ಅದರ ರಮಣೀಯತೆಯನ್ನು ನೋಡಿ ತನ್ನ ಮನದೊಳಗೆ ಈ ರೀತಿಯಾಗಿ ಯೋಚಿಸಿದನು. ಏನೆಂದರೆ:—ಈ ಉದ್ಯಾನವನವು ದೇವತೆಗಳು ಕ್ರೀಡಿಸುವಂಥಾದ್ದಾಗಿ ಇರುವುದು ಇದರೊಳಗಿರುವ ಫಲವೃಕ್ಷಗಳನ್ನು, ಸರಸ್ಸುಗಳನ್ನು, ವೃಕ್ಷಲತೆಗಳನ್ನು ನೋಡಿ ಆನಂದವನ್ನು ಹೊಂದೋಣವೆಂಬದಾಗಿ

ಯೋಚಿಸಿ, ವನಪ್ರವೇಶಮಾಡಲು ದಾರಿಯನ್ನು ಹುಡುಕಿ ಎಲ್ಲಿಯೂ ಮಾರ್ಗವು ಸಿಕ್ಕದೆ ಕಡೆಗೆ ಒಂದುಕಡೆ ಬಾಗಿಲು ಕಾಣಲು ಅದರಿಂದ ಒಳಹೋಗುವದಕ್ಕೆ (ಬಾಗಿಲು ಹಾಕಿದ್ದರಿಂದ) ಯತ್ನವಿಲ್ಲದೆ ಸುತ್ತಲಿರುವ ಬೇಲಿಯನ್ನು ದಾಟುವೆನೆಂದು ಯೋಚಿಸಿ ತಾನು ಕುಳಿತಿದ್ದ ಕುದುರೆಯನ್ನು ಒಂದು ಮರಕ್ಕೆ ಕಟ್ಟಿಹಾಕಿ ಬೇಲಿಯನ್ನು ದಾಟಿ ಒಳಹೊಕ್ಕು ಅಲ್ಲಿರುವ ಫಲ ವೃಕ್ಷಗಳನ್ನು ನೋಡುತ್ತಾ ಸುತ್ತಿಕೊಂಡು ಬರುವ ಸುಗಂಧ ಮಿಳಿತವಾದ ತಂಗಾಳಿಯನ್ನು ಸೇವಿಸುತ್ತಾ ತೋಟದ ಮಧ್ಯಪ್ರದೇಶದಲ್ಲಿ ಅರಳಿದ ಕಮಲಪುಷ್ಪಗಳಿಂದ ಶೋಭಾಯಮಾನವಾಗಿರುವ ವಿಚಿತ್ರತರವಾದ ಸರಸ್ಸನ್ನೂ ಮತ್ತು ಅದರ ಸುತ್ತಮುತ್ತಲೂ ಸ್ಫಟಿಕ ಶಿಲೆಗಳಿಂದ ನಿರ್ಮಾಣವಾಗಿರುವ ಸೋಪಾನಪಂಗ್ತಿಗಳನ್ನೂ ಆನಂದದಿಂದ ಈಕ್ಷಿಸುತ್ತಾ ಅವರಲ್ಲಿರುವ ಅತಿನಿರ್ಮಲವಾದ ಕ್ಷೀರ್ತ್ರವುಳ್ಳ ದಿವ್ಯವಾದ ಜಲವನ್ನು ನೋಡಿ ಆಶ್ಚರ್ಯಪರವಶನಾಗಿ ಈ ಸರಸ್ಸಿನಲ್ಲಿಳಿದು ದೇಹದ ಆಯಾಸವು ಹೋಗುವಂತೆ ಸ್ನಾನವಂ ಮಾಡಬೇಕೆಂದು ಅದರಲ್ಲಿಳಿದು ಸ್ನಾನವನ್ನು ಮಾಡಿ ನಿತ್ಯಕರ್ಮಗಳನ್ನು ತೀರಿಸಿಕೊಂಡು ಯಥೇಚ್ಛವಾಗಿ ನೀರನ್ನು ಕುಡಿದು ವಿಶಲವಾಗಿರುವ ರಸಾಲವೃಕ್ಷದ ನೆರಳಿನಲ್ಲಿ ಕುಳಿತುಕೂಂಡು ವಿಶ್ರಾಂತಿ ಸುಖವನ್ನನುಭವಿಸುತ್ತಾ ಇರಲಾಗಿ ಅಕಸ್ಮಾತ್ತಾಗಿ ಅತ್ಯದ್ಭುತವಾದ ಸ್ತ್ರೀ ಸಮೂಹದ ಧ್ವನಿಯು ಕೇಳಬರಲದನ್ನು ಕಂಡು ಅದನ್ನೇ ಲಾಲಿಸುತ್ತಿರಲು, ತತ್ಕ್ಷಣವಲ್ಲಿಯೇ ಧ್ವನಿಮಾಡಿದ ನಾರೀರತ್ನಗಳು, ಆ ತೋಟದ ಸಹಜವಾದ ಬಾಗಿಲನ್ನು ತೆರೆದುಕೊಂಡು ಪಲ್ಲಕ್ಕಿಗಳ ಮೇಲೆ ಕುಳಿತುಕೊಂಡು ಒಳಕ್ಕೆ ಬರುತ್ತಿರುವುದನ್ನೀರಾಜನು ನೋಡಿ, ಆಹಾ ! ಇಲ್ಲಿರುವ ಸರಸ್ಸು ಸ್ತ್ರೀಯರು ಕ್ರೀಡೆಯಾಡುವ ಪ್ರದೇಶವಾಗಿರುವುದು ಸಾವಕಾಶಮಾಡಿ ನಾನು ಇಲ್ಲಿರುವೆನಾದರೆ ಅಪಮಾನವು ಸಂಭವಿಸುದೆಂದು ಚಿಂತಿಸಿ ಧೈರ್ಯಮಂ ತಾಳಿ ಅತಿ ಶೀಘ್ರವಾಗಿ ಅಲ್ಲಿರುವ ಪೊದೆಯಾದ ಒಂದಾನೊಂದು ವೃಕ್ಷವನ್ನೇರಿ ಮರೆಯಾಗಿ ಕುಳಿತುಕೊಂಡು ಆಶ್ಚರ್ಯವಂ ನೋಡುತ್ತಿರಲಾಗಿ, ಬಳಿಕ ಆ ನಾರೀಮಣಿಗಳು ಪಲ್ಲಕ್ಕಿಗಳಿಂದ ಇಳಿದು ಹೊರಗೆಬಂದು ಚತುರ್ದಿಕ್ಕುಗಳನ್ನು ಈಕ್ಷಿಸಿ ಇನ್ನೊಂದು ಪಲ್ಲಕ್ಕಿಯೊಳು ಕುಳಿತಿರುವ ಮತ್ತೋರ್ವ ಸ್ತ್ರೀರತ್ನವನ್ನು ಕುರಿತು, ಎಲೈ, ಚಂದ್ರಾನನೆಯೇ! ಪಲ್ಲಕ್ಕಿಯನ್ನಿಳಿದು ಬಾ ಎನಲಾಮಾತಿಗೆ ಪೂರ್ಣೇಂದುವದನೆಯಾದ ರಾಜಕನ್ನೆಯು ವರ್ಷಕಾಲದ ಮಿಂಚಿನೋಪಾದಿಯಲ್ಲಿ ಚಂಚತ್ತರವಾದ ಶರೀರಕಾಂತಿಯಿಂದ ಈಕ್ಷಿಸುವವರ ನೇತ್ರಗಳು ಮುಚ್ಚಿ ಹೋಗುವ ಹಾಗೆ ಅತಿ ರಮಣೀಯವಾದ ಪ್ರಕಾಶದಿಂದ ಪಲ್ಲಕ್ಕಿಯನ್ನಿಳಿದು ಬರುತ್ತಿರಲು ಅಷ್ಟರೊಳು ವೃಕ್ಷದಮೇಲೆ ಮರೆಯಲ್ಲಿ ಕುಳಿತುಕೊಂಡಿರುವ ಸತ್ಯಜಿತುರಾಯನು ಆ ರಾಜಪುತ್ರಿಯ ಸೌಂದರ್ಯಕ್ಕೆ ಭ್ರಾಂತನಾಗಿ ಕಣ್ಣುಗಳಿಂದ ಆಕೆಯನ್ನು

ನೋಡಲು ಶಕ್ತಿಸಾಲದೆ ಮೆಲ್ಲಗೆ ಕಣ್ಣು ತೆರೆದಾಕೆಯ ಸರ್ವಾಯುವ ಸೌಂದರ್ಯ ನೋಡಿ ಈ ಕನ್ಯೆಯು ಶರೀರವು ಮಿಂಚಿನ ಬಳ್ಳಿಯಂತಿರುವುದು ಇದನ್ನು ನೋಡುವುದಕ್ಕೆ ಆಗಲಾರದು. ಆಹಾ! ಇದು ಮಿಂಚೆಂದು ಊಹಿಸಲಾಗದು, ಮತ್ತೇನೆಂದರೆ ಹುಣ್ಣಿಮೆಯ ಚಂದ್ರನ ಕಿರಣಗಳ ರಾಶಿಯೆಂಬುದಾಗಿ ಊಹಿಸಿದ್ದಾದರೆ ಆ ಕಿರಣ ಸಮೂಹಕ್ಕೆ ಅವಯುವಗಳೆಲ್ಲಿಂದ ಬಂದಾವು, ಆದಕಾರಣ ಇದು ಕಿರಣ ಸಮೂಹವೂ ಅಲ್ಲ. ಈ ಕನ್ಯೆಯು ಮೂರುಲೋಕಕ್ಕೂ ರಾಜಲಕ್ಷ್ಮಿಯೆಂದೇ ತಿಳಿಯಬೇಕು. ಒಂದುವೇಳೆ ರಾಜ್ಯಲಕ್ಷ್ಮಿಯಾದರೆ ಇಂಥಾ ಮನುಜಸ್ತ್ರೀಯರು ಸಮೂಹದಲ್ಲಿ ಎಂದಿಗೂ ಸೇರಲಾರಳು. ಸೃಷ್ಟಿಕರ್ತನಾದ ಚತುರ್ಮುಖನು ಈ ಸ್ತ್ರೀಯನ್ನು ನಿರ್ಮಾಣಮಾಡುವ ಕಾಲದಲ್ಲಿ ಬೆಳ್ಳಿ ಮತ್ತು ಅಪರಂಜಿಯನ್ನು ಪುಡಿಮಾಡಿ ಆ ಪುಡಿಯನ್ನು ಅಮೃತದಲ್ಲಿ ಕಲಿಸಿ ತನ್ಮೂಲಕದಿಂದ ಈಕೆಯನ್ನು ತಿದ್ದಿರುವನಲ್ಲದೆ ಮತ್ತಾವರೀತಿಯಿಂದಲೂ ಸೃಷ್ಟಿಸಿದಂತೆ ಕಾಣುವುದಿಲ್ಲ ಎಂಬೀರೀತಿಯಾಗಿ ತನ್ನ ಮನದೊಳು ಚಿಂತಿಸುತ್ತಿರುವ ಸಮಯದಲ್ಲಿ ಆ ಅಂಗನಾಮಣಿಗಳು ಅತಿಶೀಘ್ರವಾಗಿ ತಮ್ಮತಮ್ಮ ಸೀರೆ ಕುಪ್ಪಸಗಳನ್ನು ಬಿಚ್ಚಿ ಸೋಪಾನಗಳ ಮೇಲಿಟ್ಟು ಸರಸ್ಸಿನೊಳಿಳಿದು ಜಲಕ್ರೀಡೆಯನ್ನು ಆಡಲಾರಂಭಿಸುವಷ್ಟರಲ್ಲಿಯೇ ಸತ್ಯಜಿತು ಮಹಾರಾಯನು ಆ ರಾಜಕನ್ಯೆಯ ಸರ್ವಾವಯವ ಸೌಂದರ್ಯವನ್ನು ನೋಡುತ್ತಾ ಅದರಿಂದ ಚಿತ್ತಚಾಂಚಲ್ಯಮುಂಟಾಗಿ ಮದನ ಬಾಣಗಳಿಗೆ ಸಿಲುಕಿ ದೈವವನ್ನು ಸ್ಮರಿಸಿಕೊಂಡು ಎಲೈ ದೈವವೇ! ಇಂಥಾ ಸುಂದರ ಮನುಷ್ಯಳಾದ ಸ್ತ್ರೀಯನ್ನು ಈ ಕಾಲದಲ್ಲಿ ನೋಡುವುದಕ್ಕಾಗಿಯೇ ನನ್ನನ್ನು ಸೃಷ್ಟಿಸಿದೆಯಲ್ಲದೆ ಮತ್ತಾವುದಕ್ಕೂ ಅಲ್ಲ ಈ ಕಾರಣದಿಂದ ನನಗುಂಟಾಗಿರುವ ಮನ್ಮಥನ ತಾಪುವು ಹೇಗೆ ಶಮನವಾಗುವುದು? ಅಥವಾ ಬಲತ್ಕಾರದಿಂದೀಕೆಯಂ ಹಿಡಿದು ಕಾಮವನ್ನು ತೀರಿಸಿಕೊಳ್ಳೋಣವೆಂದರೆ ಮಾನಪ್ರಾಣಗಳೆರಡಕ್ಕೂ ತೊಂದರೆಯಾಗುವವಲ್ಲದೆ ಮತ್ತೆ ಬೇರೆಯಿಲ್ಲ. ಸೃಷ್ಟಿಕರ್ತನಾದ ಬ್ರಹ್ಮನು ಈ ನಾರೀರತ್ನವನ್ನು ನನಗೋಸ್ಕರವಾಗಿ ರಚಿಸಿರುವನೋ ಎಂಬದಾಗಿ ಹಲವು ಬಗೆಯಿಂದ ಚಿಂತಿಸುತ್ತಾ ಮುಂದುತೋರದೆ ಬಹಳ ಭ್ರಾಂತನಾಗಿ ಅಷ್ಟರಲ್ಲಿಯೇ ಧೈರ್ಯಮಂ ತಳೆದು, ಒಳ್ಳೇದು ಈ ರಾಜಾಂಗನೆಯ ಸೀರೆಕುಪ್ಪಸಗಳನ್ನಾದರೂ ಸಂಗ್ರಹಿಸಿ ಅದರಿಂದಲಾದರೂ ಸ್ವಲ್ಪ ತೃಪ್ತಿಯನ್ನು ಹೊಂದೋಣವೆಂದು ತನ್ನಲ್ಲಿರುವ ಅಸ್ತ್ರವಿದ್ಯಾ ಸಾಮರ್ಥ್ಯದಿಂದ ಧನುಸ್ಸಿನೊಳು ಭಾಣವಂ ಸಂಧಾನಗೈದು ರಾಜಪುತ್ರಿಯು ಇಟ್ಟಿರುವ ಸೀರೆಯನ್ನು, ಕುಪ್ಪಸವನ್ನು ಆ ಬಾಣದಿಂದ ಹಿಡಿಸಿ ಅದಕ್ಕೆ ಬಗೆಬಗೆಯಾಗಿ ಬೇರೆಬೇರೆ ಬಾಣಗಳನ್ನು ಹಗ್ಗದಂತೆ ಕೊಟ್ಟು, ತನ್ಮೂಲಕದಿಂದ ಅವುಗಳನ್ನು ಸಮೀಪಕ್ಕೆ ಬರುವಹಾಗೆ ಮಾಡಿ ಕೈಗೆ ತೆಗೆದುಕೊಂಡು ಬಿಚ್ಚಿಬಿಚ್ಚಿ ನೋಡುತ್ತಾ

ಇಂಥಾ ವಸ್ತ್ರಗಳನ್ನು ನಾನು ಎಂದಿಗೂ ನೋಡಲಿಲ್ಲ ಇವುಗಳಿಗ ಬೆಲೆಯಂ ಕಟ್ಟುವರಾರು ಎಂಬದಾಗಿ ಆ ಬಟ್ಟೆಗಳಿಗೆ ಮುತ್ತುಗಳಂ ಕೊಡುತ್ತಾ ಅವಳ ಅಂದವನ್ನೇ ಮನದೊಳು ವರ್ಣಿಸುತ್ತಿರಲಾಗಿ ಸರಸ್ಸಿನಲ್ಲಿಳಿದ ಕನ್ಯೆಯರು ನೀರಿನೊಳು ಸರಸಲ್ಲಾಪಗಳನ್ನಾಡುತ್ತಾ ಕ್ರೀಡಾವಿನೋದದಿಂದ ದೀರ್ಘವಾಗಿ ಕಾಲವನ್ನು ಕಳೆದು ತರುವಾಯ ನೀರಿನಿಂದ ಮೇಲಕ್ಕೆ ಬಂದವರಾಗಿ ತಮ್ಮತಮ್ಮ ವಸ್ತ್ರ, ಕಂಚುಗಳನ್ನು ಧರಿಸಿಕೊಳ್ಳುವ ಮಧ್ಯದಲ್ಲಿ ರಾಜಕನ್ಯೆಯು ತನ್ನ ಸ್ವಂತ ಸೀರೆ ಕುಪ್ಪಸಗಳನ್ನು ಕಾಣದೆ ತಾನಿಟ್ಟಿದ್ದ ಸ್ಥಳದಲ್ಲಿ ಭೂಮಿಯು ಮಾತ್ರ ಛಾಯವಂ ಪಡೆದಿರುವುದನ್ನು ಕಂಡು ತನ್ನ ಸ್ನೇಹಿತರಾದ ನಾರೀಮಣಿಗಳನ್ನು ಕುರಿತು, ಎಲೈ, ಸಖಿಯರೇ ನನ್ನ ವಸ್ತ್ರಗಳು ಇಲ್ಲ ಕಾಣುವುದಿಲ್ಲ ಎಲ್ಲಿ ಹೋಯಿತೋ ತಿಳಿಯದು ಎಂಬದಾಗಿ ದುಃಖದಿಂದ ಕೇಳಲಾಗಿ ಆ ಮಾತನ್ನು ಕೇಳಿ ಸಖಿಯರೆಲ್ಲರೂ ಭ್ರಾಂತಚಿತ್ತರಾಗಿ ಭಯವನ್ನು ಹೊಂದಿ ತಾವು ಸುತ್ತುಮುತ್ತಲೂ ಹುಡುಕಿ ಎಲ್ಲಿಯೂ ಕಾಣದೆ ಅತಿ ತೀವ್ರವಾಗಿ ಬೇರೊಂದು ವಸ್ತ್ರವನ್ನಿತ್ತು ಪಲ್ಲಕ್ಕಿಯೊಳು ಕುಳ್ಳಿರಿಸಿಕೊಂಡು ಕರೆದುಕೊಂಡು ಹೋಗಿ ಅವಳ ಅಂತಃಪುರವನ್ನು ಸೇರಿಸಿ ತಮ್ಮ ಸ್ವಸ್ಥಾನಗಳಿಗೆ ತೆರಳಲಾ ರಾಜಕನ್ಯೆಯು ತನ್ನ ತಂದೆ ತಾಯಿಗಳಂ ಕರೆಸಿ ಉದ್ಯಾನವನದಲ್ಲಿ ನಡೆದ ಸಮಾಚಾರವೆಲ್ಲವನ್ನೂ ತಿಳಿಸಲಾಗಿ ಜನನೀಜನಕರಾ ವೃತ್ತಾಂತಮಂ ಕೇಳಿ ಮಗಳಮಾತಿಗೆ ಮರುಳಾಗಿ ಪುತ್ರಿಯನ್ನು ಕುರಿತು ಉಪವನದಲ್ಲಿ ನಡೆದ ಈ ಸಾಹಸಕಾರ್ಯವು ಯಾರೋ ದೇವಪುರುಷನಿಂದ ನಡೆದಿರುವುದಲ್ಲದೆ ಇತರರಿಂದ ನಡದಂತೆ ಕಾಣುವುದಿಲ್ಲ ಆದ್ದರಿಂದ ಈ ವೃತ್ತಾಂತಮಂ ನನ್ನ ಸಭಾಸ್ಥಾನದಲ್ಲಿರುವ ಆಪ್ತಮಂತ್ರಿಗಳೊಡನೆ ಯೋಚಿಸಿ ಮುಂದಣ ಕಾರ್ಯವನ್ನು ಅರುಹುವೆನು ಅದುವರೆಗು ನೀನು ವ್ಯಸನಮಾಡಬೇಡವೆಂದು ಸಂತೈಸಿ ಆ ಮಹಾರಾಯನು ತಕ್ಷಣವೇ ರಾಜಾಸ್ಥಾನಕ್ಕೆ ಬಂದು ತನ್ನ ಆಪ್ತ ಮಂತ್ರಿಗಳೊಡನೆ ನಡೆದ ವೃತ್ತಾಂತವನ್ನು ತಿಳುಹಿ ಯಾವರೀತಿಯಿಂದೀ ವೃತ್ತಾಂತವು ನಡೆದಿರುವುದೋ ಅದಂ ನೀವು ಹೇಳಬೇಕೆನಲಾಮಾತಿಗೆ ಮಂತ್ರಿವರ್ಯನಾದ ಸುನೀತಿಯೆಂಬವನು ಸಾವಕಾಶದಿಂದ ಯೋಚಿಸಿ ದೊರೆಯಂ ಕುರಿತು ರಾಜಾಧಿರಾಜನೆ, ಈ ಕೃತ್ಯವು ದೇವತೆಗಳಿಂದ ನಡೆದಂತೆ ಕಾಣಬರುವುದಿಲ್ಲ ನಾಳೆ ಸೂರ್ಯೋದಯಾನಂತರ ನಾವೇ ಆ ಸ್ಥಳಕ್ಕೆ ಹೋಗಿ ನೋಡಿಕೊಂಡು ಬರೋಣವೆಂಬದಾಗಿ ಯೋಚನೆಯನ್ನು ಮಾಡಿ ಒಡ್ಡೋಲಗವು ತೀರಲು ತಮ್ಮತಮ್ಮ ಮನೆಗಳಿಗೆ ತೆರಳಿದವರಾದರು.

ಅತ್ತಲಾ ಉದ್ಯಾನವನದಲ್ಲಿ ಪೊದೆಯಾದ ವೃಕ್ಷದಮೇಲೆ ಕುಳಿತು ರಾಜಾಂಗನೆಯ ವಸ್ತ್ರಕಂಚುಗಳನ್ನು ಅಪಹರಿಸಿದ ಸತ್ಯಜಿತುವು ಜಲಕ್ರೀಡೆಯನ್ನು ಮುಗಿಸಿಕೊಂಡು ತಮ್ಮ ಸ್ವಸ್ಥಾನಕ್ಕೆ ನಾರೀಮಣಿಗಳು ತೆರಳಿದ ಬಳಿಕ

ವೃಕ್ಷದಿಂದ ಕೆಳಕ್ಕೆ ಇಳಿದು ಬಂದು ತಾನು ಅಪಹರಿಸಿದ ವಸ್ತ್ರಕಂಚುಗಳನ್ನು ಭದ್ರವಾಗಿ ಕಟ್ಟಿಕೊಂಡು ವನವನ್ನು ದಾಂಟಿ ಹೊರಗೆ ಬಂದು ತನ್ನ ತೇಜಿಯು ನ್ನೇರಿ ಅದೇ ಪಟ್ಟಣವಂ ಪೊಕ್ಕು ಆ ಪಟ್ಟಣದೊಳಿರುವ ಒಬ್ಬಾನೊಬ್ಬ ಅಡು ಗೂಳಜ್ಜಿಯ ಮನೆಗೆ ಬಂದು ಆಕೆಯಂ ಕುರಿತು, ಎಲೈ, ಮುದುಕಿಯೇ, ನಾನು ಇಲ್ಲಿರುವವರೆಗೆ ಕಾಲಕಾಲಕ್ಕೆ ಅಡಿಗೆಯನ್ನು ಮಾಡಿ ಭೋಜನಕ್ಕೆ ಇಡುತ್ತಾ ಇರೆಂದು ಆಕೆಗೆ ಕೊಂಚ ದ್ರವ್ಯಮಂಕೊಟ್ಟು ಅಲ್ಲಿಯೇ ಭೋಜನಮಾಡಿ ವಿಶ್ರಾಂ ತಿಯಂ ಹೊಂದಿದ ತರುವಾಯ ಮುದುಕಿಯಂ ಕುರಿತು ವೃದ್ಧಳೇ ಈ ಪಟ್ಟಣದ ಹೆಸರೇನು ? ಈ ರಾಜ್ಯವನ್ನಾಳುವ ಪ್ರಭುವಿನ ನಾಮಧೇಯವು ಯಾವುದು ? ಪಟ್ಟಣದೊಳು ವಿಶೇಷಸಮಾಚಾರವಳೇನು ? ಇವುಗಳಂ ವಿಸ್ತರಿಸಿ ಹೇಳೆನಲಾ ಮುದುಕಿಯು, ಕೇಳೈ—ಪೃಚ್ಛಕನೇ ! ಈ ದೇಶಕ್ಕೆ ಕಳಿಂಗದೇಶವೆಂದು ನಾಮ ಧೇಯವು. ಇದನ್ನಾಳುವ ಧೊರೆಗೆ ಪ್ರತಾಪರುದ್ರನೆಂಬಭಿಧಾನವು. ಈ ಮಹಾರಾಯನು ಅತಿ ಧರ್ಮಪರಾಯಣನಾಗಿಯು, ಸತ್ಯಸಂಧನಾಗಿಯು, ಇರುವ ನೆಂದು ಹೇಳಲಾ ಸತ್ಯಜಿತುವು ಆ ಮಾತುಗಳಂ ಕೇಳಿ ತನ್ನ ಮನಸ್ಸಿನಲ್ಲಿ ವನದಲ್ಲಿ ತಾನು ಕಂಡ ನಾರೀಮಣಿಯು ಈ ಪಟ್ಟಣದ ರಾಜನ ಮಗಳಾಗಿರಬಹುದು. ನಾನು ಅವಳ ವಸ್ತ್ರ ಕಂಚುಳಗಳನ್ನು ಅಪಹರಿಸಿದೆ. ಈ ರಾಯನಂ ಕಂಡು ನಿನ್ನ ಪುತ್ರಿಯನ್ನೆನಗೆ ಕೊಟ್ಟು ವಿವಾಹಮಾಡಬೇಕೆಂದು ಕೇಳಿದ್ದರೆ ಅದರಂತೆ ರಾಯನು ಮಾಡುತ್ತಿದ್ದನೋ ಏನೋ, ಅದರಂತೆ ನಾನು ನಡೆಯದೆ ಆತುರ ಪಟ್ಟನಾದಕಾರಣ ನಾನು ಮಾಡಿದ ಕೃತ್ಯವು ಕಾರಣಾಂತರದಿಂದ ಅರಸನಿಗೆ ತಿಳಿದರೆ ಅದಕ್ಕಾಗಿ ನನ್ನನ್ನು ರಕ್ಷಿಸುವನೋ, ಇಲ್ಲವೇ ಶಿಕ್ಷಿಸುವನೋ, ಇದ ಕ್ಕೇನೂ ತೋರುವುದಿಲ್ಲವಲ್ಲಾ, ಎಂದು ಚಿಂತಿಸಿ, ಬುದ್ಧಿಃಕರ್ಮಾನುಸಾರಿಣೀ, ಎಂಬ ವಚನವಿರುವುದರಿಂದ ದೇವರ ಅಭಿಪ್ರಾಯದಂತೆ ನಡೆಯುವುದೆಂದು ಆ ರಾಜಕನ್ನೆಯಲ್ಲಿಯೇ ಮನವನ್ನಿಟ್ಟುಕೊಂಡು ಬೆಳಗಿನಝಾಮದಲ್ಲಿಯೇ ಎದ್ದು ತೇಜಿಯನ್ನೇರಿ ಆ ಪಟ್ಟಣವಂ ಬಿಟ್ಟು ಹೋಗುತಲಿರಷ್ಟರಲ್ಲಿ ಅರುಣೋದಯ ವಾಗುತಬರಲು ಪ್ರತಾಪರುದ್ರರಾಯನು ಪ್ರಾತಃಕಾಲದೊಳೆದ್ದು ಆಪ್ತಪ್ರಧಾನ ರೊಡನೆಯೂ, ತನ್ನ ಪುತ್ರಿಯಕೂಡ ಹಿಂದಿನದಿವಸ ಉಪವನಕ್ಕೆ ಹೋಗಿದ್ದ ಸಖೀಜನರೊಡನೆಯೂ, ಸೇರಿ ಉದ್ಯಾನವನವಂ ಪೊಕ್ಕು ಅಲ್ಲಿ ಜಲಕ್ರೀಡಾ ಸರ ಸ್ಸಿನ ಬಳಿ ದಾಸೀಜನಗಳು ತೋರಿದ ಭೂಘಾತವನ್ನು ಎಲ್ಲರೂ ನೋಡಿ ಆಶ್ಚರ್ಯ ವನ್ನು ಹೊಂದಿ ತಮ್ಮೊಳಗೆತಾವೆ ಯೋಚಿಸಲಾರಂಭಿಸಲು, ಅವರಲ್ಲಿ ಮಂತ್ರಿ ವರ್ಯನೊಬ್ಬನು ಅಲ್ಲಿ ಧೊರೆಯಂ ನೋಡಿ ಪ್ರಭುವೆ ! ಈ ಭೂಘಾತವು ಬಾಣ ದಿಂದ ನಡೆದಿರುವುದಲ್ಲದೆ ಮತ್ತ್ಯಾವದರಿಂದಲೂ ಅಲ್ಲ, ಈ ಉದ್ಯಾನವನಕ್ಕೆ ಒಬ್ಬಾನೊಬ್ಬ ರಾಜಪುತ್ರನು ನೀರಡಿಕೆಯಿಂದ ಬಂದು ನೀರಂಕುಡಿದು ವಿಶ್ರಾಂತಿ

ಯೊಳಿರುವ ಸಮಯದಲ್ಲಿ ನಿನ್ನ ಪುತ್ರಿಯು ಸಖೀಜನಗಳೊಂದಿಗೆ ಜಲಕ್ರೀಡೆಗೆ ಬರಲು ರಾಜನಂದನನು ಕಂಡು ಮರವನ್ನೇರಿ ಮರೆಯೊಳೌತುಕೊಂಡು ಜಲ ಕ್ರೀಡೆಗೋಸ್ಕರ ನಿನ್ನ ಪುತ್ರಿಯು ತೆಗದಿಟ್ಟ ವಸ್ತ್ರಾದಿಗಳನ್ನು ತನ್ನ ಧನುರ್ವಿದ್ಯಾ ಸಾಮರ್ಥ್ಯದಿಂದ ಮೊಲಕ್ಕೆ ತೆಗೆದುಕೊಂಡು ನಿನ್ನ ಪುತ್ರಿಯು ಪುರಕ್ಕೆ ತೆರಳಿದ ಬಳಿಕ ತಾನು ಹೊರಟುಹೋಗಿರುವನೆಂದು ನನಗೆ ತಿಳಿಯುವುದೆನಲಾಮಾತಿಗೆ ರಾಯನು ಒಪ್ಪಿದವನಾಗಿ ಇಂಥಾ ಸಾಹಸವೂ, ತಾಳ್ಮೆಯೂ, ಉಳ್ಳ ರಾಜಪುರು ಷನನ್ನು ನಾನು ಎಂದಿಗೂ ನೋಡಿಯೂ ಕೇಳಿಯೂ ಇಲ್ಲವೆಂದು ಎಲ್ಲರೂ ಅಲ್ಲಿಂದ ಪಟ್ಟಣಕ್ಕೆ ಬಂದು ತಾನು ನೋಡಿದ ಮತ್ತು ಕೇಳಿದ ಸಂಗತಿಯನ್ನೆಲ್ಲ ವನ್ನು ಪ್ರತಾಪರುದ್ರನು ತನ್ನ ಪುತ್ರಿಗೆ ಅರುಹಲಾ ಕಮಲಾಕ್ಷಿಯು, ತಂದೆಯೇ, ಆ ರಾಜಪುರುಷನ ಸಾಮರ್ಥ್ಯವನ್ನೆಷ್ಟೆಂದು ವರ್ಣಿಸಲಿ, ಆತನ ಶಾಂತಭಾವವೂ, ಸಾಹಸವು ಇಷ್ಟೆಂದು ಹೇಳಲಾಗದು. ನಾನು ಜಲಕ್ರೀಡಾಸಮಯದೊಳು ವಸ್ತ್ರ ಶೂನ್ಯಳಾಗಿ ನಿರ್ವಾಣದಲ್ಲಿರುವಕಾಲವಲ್ಲಿ ನನ್ನ ಸರ್ವಾವಯವವನ್ನು ಆ ರಾಜ ಪುತ್ರನು ನೋಡಿರುವನಾದಕಾರಣ ಆತನನ್ನೇ ನಾನು ಪತಿಯಾಗಿ ವರಿಸಿರುವೆನು. ಅವನಲ್ಲದೆ ಮತ್ತ್ಯಾರನ್ನೂ ನಾನು ವರಿಸುವುದಿಲ್ಲ. ಒಂದುವೇಳೆ ನಾನು ಆತನಂ ಬಿಟ್ಟು ಮತ್ತೊರ್ವನಂ ಪತಿಯಾಗಿ ವರಿಸಿದಲಿ ಎಷ್ಟುಮಾತ್ರವೂ ಮಾನವತಿ ಎಂತಲೂ, ಪತಿವ್ರತೆಯೆಂಬದಾಗಿಯೂ ಲೋಕದಲ್ಲಿ ಪೆಸರನ್ನು ಪಡೆಯಲಾರೆನು, ಆದುದರಿಂದ ಆತನನ್ನು ಹುಡುಕಿಸಿ ನನಗೆ ವಿವಾಹವಂಮಾಡದೆ ಹೋದರೆ ಅಗ್ನಿ ಕುಂಡದಲ್ಲಿ ಬಿದ್ದು ಈ ನನ್ನ ಪ್ರಾಣಂಗಳನ್ನು ತೊರೆಯುವೆನೆಂದು ಅತಿಕ್ರೂರ ವಾದ ಪ್ರತಿಜ್ಞೆಯನ್ನು ಮಾಡಿದವಳಾಗಲು ರಾಜಶ್ರೇಷ್ಠನು ತನ್ನ ನಿಜಪುತ್ರಿಯು ಮೇಲಣ ವ್ಯಾಮೋಹದಿಂದ ಕಣ್ಣುಗಳಲ್ಲಿ ದುಃಖರೂಪವಾದ ನೀರುನ್ನು ಸುರಿ ಸುತ್ತಾ ನನ್ನ ಆಪ್ತಮಂತ್ರಿಯನ್ನು ಕರೆತರಿಸಿ ಆತನಿಗೆ ಪುತ್ರಿಯ ಮನೋಭೀಷ್ಟ ವನ್ನರುಹಿ ಮಂತ್ರಿವರ್ಯನೆ, ನಿನ್ನ ಶೌರ್ಯ್ಯಾದಾರ್ಯಗಳು, ನೀತಿಕುಶಲತೆಗಳು, ಈ ಲೋಕದೊಳು ಪ್ರಖ್ಯಾತಿಗೊಂಡು ಶಾಶ್ವತವಾಗಿ ನಿಲ್ಲುವಂತೆ ಆ ರಾಜಪುತ್ರ ನನ್ನು ಯಾವ ಕಾರಣದಿಂದಲಾದರೂ ಇಲ್ಲಿಗೆ ಕರೆತಂದು ನನ್ನ ಪುತ್ರಿಯನ್ನಾ ತಂಗೆ ಕೊಟ್ಟು ವಿವಾಹವನ್ನು ಮಾಡುವರೀತಿಯನ್ನು ನೀನು ಮಾಡದಿರ್ದೊಡೆ ಈಗ ಪ್ರಾಪ್ತವಾಗಿರುವ ಪುತ್ರಿಯ ಅಪಾರವಾದ ಶೋಕವನ್ನು ನಾನು ಸಹಿಸ ಲಾರೆನು ಎಂದು ಹಲವು ಬಗೆಯಾಗಿ ಚಿಂತಿಸಲಾ ಮಂತ್ರಿಶ್ರೇಷ್ಠನು ಆ ಮಾತು ಗಳಂ ಕೇಳಿ ತನಗೆ ಬೇಕಾದ ಪದಾರ್ಥಗಳನ್ನು, ದ್ರವ್ಯವನ್ನು ತೆಗೆದುಕೊಂಡು ವಸ್ತ್ರಕಂಚುಕಗಳನ್ನಪಹರಿಸಿದ ರಾಜಾತ್ಮಜನನ್ನು ಹುಡುಕಲೋಸುಗ ಭಗವಂತ ನನ್ನು ಅಂತರಾತ್ಮದೊಳು ನೆನಸುತ್ತಾ ಪ್ರಯಾಣಸನ್ನದ್ಧನಾಗಿ ರಾಜಾಜ್ಞೆಯನ್ನು ಹೊಂದಿ ಹೋಗುತಲಿದ್ದನು.

ಇಷ್ಟರೊಳಾ ಪ್ರತಾಪರುದ್ರಮಹಾರಾಯನ ಪಟ್ಟಣದಿಂದ ಪ್ರಾತಃಕಾಲಕ್ಕೆ ಪೂರ್ವವೇ ಮುದುಕಿಯ ಮನೆಯಿಂದ ಹೊರಟ ಸತ್ಯಜಿತುರಾಯನು ಭಯವನ್ನು ಬಿಟ್ಟವನಾಗಿ ಗೊಂಡಾರಣ್ಯ ಮಧ್ಯದಲ್ಲಿ ಹೋಗುತ್ತಾ ಅರಣ್ಯಮಧ್ಯದೊಳಿರುವ ಹೆಬ್ಬುಲಿಗಳನ್ನು ಹೊಡೆಯುತ್ತಾ ಭಯಂಕರಗಳಾದ ಭಲ್ಲೂಕಗಳನ್ನು ಸಂಹರಿಸುತ್ತಾ ಮದಿಸಿದ ಆನೆಗಳನ್ನು ಸದೆಯುತ್ತಾ ಆ ರಾಜಪುತ್ರಿಯಲ್ಲಿಯೇ ಮನವನ್ನಿಟ್ಟು ಚಿಂತಿಸುತ್ತಾ ನಿಟ್ಟುಸುರುಗಳನ್ನು ಬಿಡುತ್ತಾ ಮನ್ಮಥನ ಬಾಣಗಳಿಗೆ ಪರವಶನಾಗಿ ವೃಕ್ಷಗಳ ತಡಿಗಳಲ್ಲಿ ಕೂತುಕೊಂಡು ವಿಶ್ರಾಂತಿಯನ್ನೈದುತ್ತಾ ಮಧುರರಸವುಳ್ಳ ಫಲಗಳನ್ನು ತಿನ್ನುತ್ತಾ ಸರಸ್ಸುಗಳಲ್ಲಿರುವ ನಿರ್ಮಲೋದಕಗಳನ್ನು ಕುಡಿಯುತ್ತಾ ಆಕಾಶದೊಳುದಿಸಿರುವ ಪೂರ್ಣಚಂದ್ರನನ್ನು ನೋಡಿ ರಾಜಪುತ್ರಿಯನ್ನು ನೆನಸಿ ಆವಳಮೇಲಣ ವ್ಯಾಮೋಹದಿಂದ ಬುದ್ಧಿಭ್ರಮೆಯುಂಟಾಗಿ ತಾನು ಉದ್ಯಾನವನದಲ್ಲಿ ರಾಜಪುತ್ರಿಯಂ ಕಂಡ ಸ್ಥಳಕ್ಕೆ ಪುನಃ ರಾಜಪುತ್ರಿಯು ಬಂದಿರುವಳೆಂದು ಊಹಿಸಿ ಎಲೈ, ರಾಜನಂದನೆಯೇ ! ನನ್ನಲ್ಲಿ ದಯೆ ಎಂಬುದನ್ನು ಸ್ವಲ್ಪವಾದರೂ ತೋರಿಸದೆ ಮನ್ಮಥನೆಂಬ ವ್ಯಾಧನಿಗೆ ವಶಮಾಡಿದವಳಾಗಿ ಜಲಕ್ರೀಡೆಯನ್ನು ಮುಗಿಸಿಕೊಂಡು ನಿನ್ನಯ ಅಂತಃಪುರಮಂ ಪೊಕ್ಕುವಳಾದೆಯಾ ? ಅತಿಸುಂದರನಾದಂಥಾ ರಾಜಪುತ್ರನಾದ ನನ್ನನ್ನು ಮರೆತಿರುವ ನೀನಿಂದಾದರೂ ಕರುಣದಿಂದಲೆನ್ನನು ಮನ್ಮಥಾತುರದಿಂದ ಸೇರಿದವನನ್ನಾಗಿ ಮಾಡು, ಶೋಭನಾಂಗಿಯೇ, ಎಂಬೀ ರೀತಿಯಾಗಿ ಆ ರಾಜನಂದನೆಯಂ ಕುರಿತು ಅವಳಂ ಕೂಗುತ್ತಾ ಸ್ವಲ್ಪ ಹೊತ್ತು ಹೋಗಿ ಈಕ್ಷಿಸಿ ಚಂದ್ರನುದಯವರಿತು ಪ್ರಾಪ್ತವಾದ ಅಜ್ಞಾನವನ್ನು ಕುರಿತು ಚಿಂತಿಸುತ್ತಾ, ಏನೂ ಅರಿಯದವನಹಾಗೆ ಸಂಕಟವನ್ನು ಹೊಂದುತ್ತಾ ಆ ರಾಜಪುತ್ರಿಯ ವಸ್ತ್ರ ಕಂಚುಕಗಳನ್ನು ವೃಕ್ಷಸ್ಥಳದಲ್ಲಿ ಭದ್ರವಾಗಿಟ್ಟುಕೊಂಡು ಅವಕ್ಕೆ ಮುತ್ತಿಡುತ್ತಾ, ದೇವರನ್ನು ದೂಷಿಸುತ್ತಾ, ಆ ಸ್ಥಳದಿಂದ ಮುಂದಕ್ಕೆ ಸ್ವಲ್ಪದೂರ ಹೋಗಿ ಅಲ್ಲಿರುವ ವಿಚಿತ್ರವಾದ ಒಂದಾನೊಂದು ಉಪವನವನ್ನು ಕಂಡು ಈ ವನವು ಕಳಿಂಗದೇಶದ ಶೃಂಗಾರವನವೆಂತಲೂ, ಇದರಲ್ಲಿರುವ ಸರೋವರದಲ್ಲಿ ಬಿಸಜಾಕ್ಷಿಯು ಜಲಕ್ರೀಡೆಗಳನ್ನಾಡುತ್ತಿರುವಳೆಂಬವಾಗಿಯೂ ಶಬ್ದಮಾಡದೆ ಮೆಲ್ಲಗ ಅಲ್ಲಿ ಹೋಗಿ ಆ ವಲ್ಲಭೆಯಂ ಸೆರೆಹಿಡಿದುಕೊಂಡು ಅವಳ ಸಹಾಯಸಂಪತ್ತಿನಿಂದ ಕ್ರೂರನಾದ ಮನ್ಮಥನನ್ನು ಓಡಿಸಿಬಿಡುವೆನೆಂದು ಮನಸ್ಸಿನಲ್ಲಿ ಹಲವುಬಗೆಯಾಗಿ ಯೋಚಿಸಿ, ವ್ಯಥೆಪಡುತ್ತ ತಾನು ಹತ್ತಿದ್ದ ಕುದುರೆಯನ್ನಿಳಿದು ಕೈಯೊಳು ಬಿಲ್ಲನ್ನು ತೆಗೆದುಕೊಂಡು ಗಿಡಗಳ ಮಧ್ಯಮಧ್ಯದಲ್ಲಿ ಹೊಂಚು ಹಾಕುತ್ತಾ ಹೋಗುತ್ತಿದ್ದನು. ಆ ವನವು ಭರದ್ವಾಜ ಮಹರ್ಷಿಯ ಆಶ್ರಮವಾದಕಾರಣ ಆ ಋಷಿವರ್ಯನ ಶಿಷ್ಯನೋರ್ವನು ಇವನ ಹಂಬಲಿಕೆಗಳನೂ

ನೋಡಿ ಇವನಾರೋ ರಾಜನಂದನನಾದಾಗ್ಯೂ ಕಾಮಪೀಡಿತನಾಗಿರುವನೆಂದರಿತು ಅವನಂಪಿಡಿದುಕೊಂಡು ಹೋಗಿ ತನ್ನ ಗುರುವಾದ ಭರದ್ವಾಜಋಷಿಯ ಸಾನಿಧ್ಯವನ್ನೈದಿಸಿ ವೃತ್ತಾಂತವನ್ನೆಲ್ಲಾ ಬಿನ್ನವಿಸಲಾ ಮಹಾಮುನಿಯು ಈ ರಾಜಪುತ್ರನಂ ಸಮೀಪಕ್ಕೆ ಕರೆದು ಸಾದರದಿಂದ ಎಲೈ, ರಾಜೋತ್ತಮಾ! ನೀನೀ ವಿಪಿನಮಧ್ಯದೊಳು ಗಿಡಗಳ ಮರೆಗಳಲ್ಲಿ ಔತುಕೊಂಡು ನೋಡುತ್ತಲಿದ್ದುದು ಏನುಕಾರಣ? ಇದಂ ವಂಚಿಸದೆ ಯಥಾರ್ಥವಾಗಿ ನಮಗೆ ತಿಳುಹುವವನಾಗೆಂದು ಕೇಳಲಾಮಾತಿಗೆ, ಸತ್ಯಜಿತುವು ಆ ಮಹಾಮಹಿಮೆಯುಳ್ಳ ಮುನಿಪೋತ್ತಮನ ಪಾದಪಂಕೇರುಹಗಳಿಗಭಿವಂದಿಸಿ, ಋಷಿಯಂ ಕುರಿತು ಎಲೈ, ಋಷಿಪುಂಗವನೇ! ನಾನು ಕಳಿಂಗದೇಶದ ರಾಜನ ಉದ್ಯಾನವನದಲ್ಲಿ ಒಬ್ಬಾನೊಬ್ಬ ಸ್ತ್ರೀಯಂ ಜಲಕ್ರೀಡಾಸಮಯದೊಳು ನೋಡಿದವನಾದೆನು, ಅಂದಿನಿಂದ ನನಗೀ ರೀತಿಯಾದ ಚಿತ್ತಭ್ರಮಣವುಂಟಾಗಿರುವುದೆಂದುಸುರಿ ರಾಜಪುತ್ರಿಯ ವಸ್ತ್ರ ಕಂಚುಕಗಳನ್ನಾ ಮುನಿಪೋತ್ತಮನ ಎದುರಿಗೆ ತೋರಸಲಾಗಿ ಮುನಿಶ್ರೇಷ್ಠನು, ಇವನ ಧನುರ್ವಿದ್ಯಾ ಪ್ರೌಢಿಮೆಯುಂ ಈತನ ಸಾಹಸವನ್ನೂ ತತ್ಕಾಲದೊಳು ಈ ರಾಜಪುತ್ರನಿಗೆ ಸಂಭವಿಸಿರುವ ದುಃಖವಂನೋಡಿ, ಎಲೈ ರಾಜನಂದನನೇ! ತೇಜಸ್ವಿಯಾಗಿಯೂ, ಸಾಹಸವುಳ್ಳ ಬಿಲ್ಲಿಗಾರನಾಗಿಯೂ ಸ್ಥೈರ್ಯವುಳ್ಳವನಾಗಿಯೂ ಇರುವ ನೀನು ನಾರೀಮಣಿಗಳೆಂಬ ಮರುಭೂಮಿಗಳನ್ನು ಇಚ್ಛೈಸಿ ಕಾಮಪರವಶನಾಗಿ ಬಳಲುವುದುಚಿತವೆ ಆಹಹ! ರೊಚ್ಚುಗಳಿಂದ ಕೂಡಿದ ಬಚ್ಚಲೆಂಬ ಸ್ತ್ರೀಸ್ವಭಾವಕ್ಕೋಸ್ಕರ ಅಮರೇಂದ್ರ, ನಿಶಾನಾಥರಿಗೆ ಸಂಭವಿಸಿದ ದುರ್ದಶೆಯೇ ಮೊದಲಾದ ಅಪನಿಂದೆಗಳನ್ನು ನೀನು ಕೇಳಲಿಲ್ಲವೇ? ಅಸಹಕರವಾದಂಥಾ ಮೂತ್ರದ್ವಾರಕ್ಕೆ ನೀನು ಹೀಗೆ ಮರುಳಾಗಬಹುದೇ? ಈಗ್ಗೆ ನಿನ್ನಂ ನೋಡಿದರೆ ಹುಚ್ಚನೆಂಬುವುದರಲ್ಲಿ ಸಂಶಯವಿಲ್ಲ. ಚಿಂತಾರಹಿತನಾಗಿ ನೀನು ಕೆಲವುಕಾಲ ಈ ಆಶ್ರಮದೊಳು ನೆಲೆಯಾಗಿದ್ದು ಈ ದೇಹಗಳ ಉತ್ಪತ್ತಿ ಮಾರ್ಗವನ್ನು ಕೇಳಿ ಧರ್ಮಾಧರ್ಮಂಗಳಂ ತಿಳಿದು ಶಬ್ದಭೇದಿನಿಯೆಂಬ ಮಂತ್ರವಂ ನನ್ನಿಂದ ತಿಳಿಯಲ್ಪಟ್ಟು ಹೋದದ್ದೆಯಾದರೆ ನಿನಗೆ ಯಾವದರಲ್ಲಿಯೂ ತೊಂದರೆಯುಂಟಾಗಲಾರದು ಇದರಿಂದ ನೀನು ಪೂಜ್ಯನಾಗುವೆ ಎಂಬದಾಗಿ ಋಷಿಯು ನುಡಿದ ವಚನವಂ ಕೇಳಿ ರಾಜಪುತ್ರನು ತನ್ನ ಮನದೊಳು ತಾನೆ ಯೋಚನೆಯನ್ನು ಮಾಡಲಾರಂಭಿಸಿದನು ಅದೇನಂದರೆ:—

ಓಹೋ? ಇದೇನೋ ಆಶ್ಚರ್ಯವಾಗಿರುವುದು, ನಾನು ಕೋರಿರುವ ಶಬ್ದಭೇದಿನಿ ಎಂಬುವ ಮಹಾಮಂತ್ರವನ್ನೇ ಈ ಋಷಿಯ ಉಪದೇಶಿಸುವೆನೆಂದು ಹೇಳುವನು ಸರ್ವಾಂತರ್ಯಾಮಿಯಾದ ಭಗವಂತನು ನನ್ನಲ್ಲಿ ವಾತ್ಸಲ್ಯದಿಂದ ಈ ವನಮಧ್ಯದಲ್ಲಿ ಋಷಿರೂಪವನ್ನೈದಿ ಬಂದಿರುವನೋ ಏನೋ ಎಂದು ಯೋಚಿಸಿ

ಆ ಮಹಾಋುಷಿಯ ಪಾದಕಮಲಗಳ ಮೇಲೆ ಬಿದ್ದು ಎಲೈ ಮಹಾನುಭಾವನೇ ನನ್ನಮನಸ್ಸಿಗೆ ಸ್ವಸ್ಥವಾಗುವಂತೆ ನನಗೆ ತತ್ವೋಪದೇಶವನ್ನು ಮಾಡಿ ದಿವ್ಯವಾದ ಶಾಸ್ತ್ರ ಮಂತ್ರಸನ್ನು ಕರುಣಾಕಟಾಕ್ಷದಿಂ ತಿಳುಹಿ ನನ್ನನ್ನು ಉದ್ಧಾರ ಮಾಡಬೇಕೆನಲಾಮಾತಿಗೆ ಮುನಿವರ್ಯನಿಂತೆಂದನು.





ಸತ್ಯಜಿತುರಾಯನು.



ಭರದ್ವಾಜಮುಹರ್ಷಿ.

## ಭರದ್ವಾಜಮಹರ್ಷಿ ಸತ್ಯಜಿತುರಾಯನಿಗೆ ಬೋಧಿಸಿದ ಸಾಂಖ್ಯಸೂತ್ರ ವಿವರಣೆ.

ಎಲೈ, ಸತ್ಯಜಿತ್ತುವೇ ಬಾ ಎಂದು ಸಮೀಪದಲ್ಲಾತನನ್ನಾಮುನಿವರ್ಯನು ಕುಳ್ಳಿರಿಸಿಕೊಂಡು ಅಷ್ಟಾಕ್ಷರಿ ಮಂತ್ರ, ಮಂತ್ರಾರ್ಥ, ಮಂತ್ರಮೂಲ, ಮಂತ್ರ ಸಾರಗಳು ಇವುಗಳನ್ನೆಲ್ಲಾ ಆತನಿಗೆ ಬೋಧಿಸಿ, ಎಂಟು ಅಕ್ಷರಗಳಂ ಎಳು ಕಮಲಗಳಲ್ಲಿಯೂ, ನಾದಬ್ರಹ್ಮನಲ್ಲಿಯೂ ನಿಲ್ಲಿಸಿ, ಆ ಕಮಲಗಳನ್ನು ಬಹು ತರದಿಂದ ವರ್ನನೆಯಂ ಮಾಡಿ ಅಧಿದೇವತೆಗಳನ್ನು ತಿಳುಹಿ, ಎಲೈ, ಮಗುವೇ, ಈ ಉಪದೇಶಮಾಡಿದ ಮಂತ್ರಗಳಿಂದ ನೀನು ಪವಿತ್ರವಾದವನಾದೆ. ದೇವತಾರ ಹಸ್ಯವನ್ನು ತಿಳಿದವನಾದೆ. ಮತ್ತು ಮಾಂಸಪಿಂಡವನ್ನು ಮಂತ್ರಪಿಂಡವ ನ್ನಾಗಿ ಮಾಡಿದೆನು. ನಿನಗೀಗ ಇಷ್ಟದೈವದರ್ಶನವಾಗುವುದಕ್ಕೆ ಸಂಶಯ ವಿಲ್ಲ. ಈ ಮಂತ್ರಸಿದ್ಧಿಯಿಂದ ಅನೇಕ ಮಹನೀಯರು ಪುಣ್ಯಲೋಕಗಳನ್ನು ಹೊಂದಿದರು. ನೀನು ಈ ಮಂತ್ರವನ್ನು ಯಾವಾಗಲೂ ಜಪಿಸುತ್ತಿರುವಂಥವ ನಾಗು, ಆದಿಯೊಳು, ಸರ್ವಪರಿಪೂರ್ಣನಾದ ಅದ್ವಯಬ್ರಹ್ಮದಿಂದ ಆಕಾ

ಶವು, ಆ ಆಕಾಶದಿಂದ ವಾಯುವು, ಆ ವಾಯುವಿನಿಂದ ಅಗ್ನಿಯು, ಆ ಅಗ್ನಿಯಿಂದ ಜಲವು, ಉಣಕದಿಂದ ಭೂಮಿಯು ಉಂಟಾಯಿತು. ಆಕಾಶಕ್ಕೆ ಆ ಆಕಾಶಸಂಭಂಧವುಂಟಾಗುವದರಿಂದಲೇ ಜ್ಞಾನವೆಂಬುದು, ಆಕಾಶವು ವಾಯುವಿನಿಂದ ಸೇರ್ರೋಣದರಿಂ ಮನಸ್ಸೆಂಬುವುದು, ಆಕಾಶವು ಬೆಂಕಿಯಿಂದ ಕಲೆಯೋಣದರಿಂ ಬುದ್ಧಿಯೆಂಬುವುದು, ಆಕಾಶ ನೀರಿನ ಸಂಯೋಗದಿಂ ಮನಸ್ಸೆಂಬುವುದು, ಆಕಾಶಕ್ಕೆ ಭೂಸಂಯೋಗದಿಂದ ಅಹಂಕಾರವೆಂಬುವದು ಹುಟ್ಟಿದವು. ಇವುಗಳೆಲ್ಲವೂ ಆಕಾಶ ಸಂಬಂಧಗಳಾದ ಅಂತರಿಂದ್ರಿಯಗಳೆಂದರಿಯಬೇಕು. ಮತ್ತು ಸಾಮಾನ, ವ್ಯಾನ, ಉದಾನ, ಪ್ರಾಣ, ಅಪಾನಗಳೆಂಬೀ ಐದೂ

| | | | | |
|---|---|---|---|---|
| ಜ್ಞಾನ | ಮನಸ್ಸು | ಬುದ್ಧಿ | ಚಿತ್ತ | ಅಹಂಕಾರ |
| ಸಮಾನ | ವ್ಯಾನ | ಉದಾನ | ಪ್ರಾಣ | ಅಪಾನ |
| ಶ್ರೋತ್ರ | ತ್ವಕ್ಕು | ಚಕ್ಷು | ಜಿಹ್ವೆ | ಘ್ರಾಣ |
| ಶಬ್ದ | ಸ್ಪರ್ಶ | ರೂಪ | ರಸ | ಗಂಧ |
| ವಾಕ್ಕು | ಪಾಣಿ | ಪಾದ | ಗುಹ್ಯ | ಪಾಯು |

ವಾಯುಸಂಬಂಧವೆಂತಲೂ, ಶ್ರೋತ್ರ, ತ್ವಕ್, ಚಕ್ಷು, ಜಿಹ್ವೆ, ಘ್ರಾಣ ಇವುಗಳೈದೂ ಅಗ್ನಿಸಂಬಂಧವಂತಲೂ, ಶಬ್ದ, ಸ್ಪರ್ಶ, ರೂಪ, ರಸಗಂಧಗಳೆಂಬೀ ಐದು ಜಲಸಂಬಂಧವೆಂತಲೂ, ವಾಕ್ಕು, ಪಾಣಿ, ಪಾದ, ಗುಹ್ಯ ಪಾಯು ಐದೂ ಪೃಥ್ವೀಸಂಬಂಧಗಳಾದ ಕರ್ಮೇಂದ್ರಿಯಗಳೆಂತಲೂ, ಈ ಇಪ್ಪತ್ತೈದು ತತ್ವಗಳೂ ಕೂಡಿ ಶರೀರವಾಯಿತೆಂತಲೂ ತಿಳಿಯತಕ್ಕದ್ದು.

ಜ್ಞಾನ, ಸಮಾನ, ಶ್ರೋತ್ರ, ಶಬ್ದ, ವಾಕ್ಕು ಇವು ಆಕಾಶಪಂಚಗಳೆಂತಲೂ; ಮನಸ್ಸು, ವ್ಯಾನ, ತ್ವಕ್, ಸ್ಪರ್ಶ ಪಾಣಿ ಇವು ವಾಯುಪಂಚಕವೆಂತಲೂ; ಬುದ್ಧಿ ಉದಾನ, ಚಕ್ಷು, ರೂಪ, ಪಾದ ಇವುಗಳು ಅಗ್ನಿಪಂಚಕಗಳೆಂತಲೂ, ಚಿತ್ತ, ಘ್ರಾಣ, ಜಿಹ್ವೆ, ರಸ, ಗುಹ್ಯ ಇವು ಉದಕಪಂಚಕವೆಂತಲೂ; ಅಹಂಕಾರ, ಅಪಾನ, ಪ್ರಾಣ ಗಂಧ, ಪಾಯು, ಇವುಗಳೈದೂ ಪೃಥ್ವೀ ಪಂಚಕವೆಂದು ಅರಿಯಬೇಕು.

ಶ್ರೋತ್ರಕ್ಕೆ, ವಿಷಯುವು ಶಬ್ದವೆಂಬುವದು, ದಿಕ್ಕುಗಳೇ ಅಧಿದೇವತೆ, ತ್ವಕ್ಕಿಗೆ ವಿಷಯುವು ಸ್ಪರ್ಶವೆಂಬುವುದು, ವಾಯುವೇ ಅಧಿದೇವತೆ. ಚಕ್ಷುಸ್ಸಿಗೆ ವಿಷಯುವು ರೂಪವೆನ್ನುವುದು, ಸೂರ್ಯನೇ ಅಧಿದೇವತೆ. ಜಿಹ್ವೆಗೆ ವಿಷಯುವು

ರಸವೆಂಬುವದು, ವರುಣನೇ ಅಧಿದೇವತೆ. ಘ್ರಾಣಕ್ಕೆ ವಿಷಯವು ಗಂಧವು, ಅಶ್ವಿನೀದೇವತೆಗಳೇ ಅಧಿದೇವತೆಗಳು.

ವಾಕ್ಕೆಂಬುವುದಕ್ಕೆ ವಚನವೇ ವಿಷಯವು. ಅಗ್ನಿಯೇ ಅಧಿದೇವತೆಯು, ಪ್ರಾಣಿಗೆ ದಾನವೇ ವಿಷಯವು, ದೇವೇಂದ್ರನೇ ಅಧಿದೈವವು, ಪಾದಕ್ಕೆ ಗಮನವು ವಿಷಯವು, ವಿಷ್ಣುದೇವರು. ಗುಹ್ಯಕ್ಕೆ ವಿಷಯವು ಆನಂದವು, ಬ್ರಹ್ಮನೇ ಅಧಿದೇವತೆ. ವಾಯುವಿಗೆ ವಿಸರ್ಜನವೇ ವಿಷಯವು, ಮೃತ್ಯುವೇ ಅಧಿದೇವತೆಯು.

ಸಮಾನವಾಯುವು ನಾಸಿಯಲ್ಲಿಯೂ, ಪ್ರಾಣವಾಯುವು ಹೃದಯದೊಳಗೂ ಅಪಾನವಾಯುವು ಗುದಪ್ರದೇಶದಲ್ಲಿಯೂ, ಉದಾನವಾಯು ಕಂಠದೊಳಗೂ, ಶರೀರದ ಸರ್ವಭಾಗದೊಳಗೂ, ವ್ಯಾನವಾಯುವು ನೆಲೆಯಾಗಿರುವುವು. ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯಗಳೆಂಬೀ ಉಪವಾಯುಗಳೈದೂ ಶರೀರವೆಲ್ಲಾ ವ್ಯಾಪಿಸಿರುವುವು. ಕಾಲಾಗ್ನಿಯು ಪಾದಗಳಲ್ಲಿಯೂ, ಜಠರಾಗ್ನಿಯು ಕುಕ್ಷಿಯೊಳಗು, ಶೀತಾಗ್ನಿಯು ಹೃದಯದಲ್ಲಿಯು, ಕೋಪಾಗ್ನಿಯು ನೇತ್ರಗಳಲ್ಲಿ, ಭ್ರೂಮಧ್ಯದಲ್ಲಿ ಜ್ಞಾನಾಗ್ನಿಯು ಉಂಟಾಗಿ, ಈ ಪಂಚಾಗ್ನಿಗಳ ಮಧ್ಯದಲ್ಲಿ ಅಂತರಾತ್ಮನಾದ ಪರಮಾತ್ಮನು ಒಂದೇ ವಿಧವಾದ ರೂಪಿನಿಂದ ಪ್ರಕಾಶಿಸುತ್ತಲಿರುವನು. ಮತ್ತು ತ್ರಿಕೂಟದಲ್ಲಿ ಜಾಗರವು, ಸ್ವಪ್ನವು ಕಂಠದೊಳಗೆ, ಹೃದಯದಲ್ಲಿ ಸುಷುಪ್ತಿಯು, ಈ ಮೂರು ಅವಸ್ಥೆಗಳು ಗೃಹಸ್ಥರಾದವರಿಗೂ, ತುರೀಯ, ತುರೀಯಾತೀತಗಳೆಂಬೀಯೆರಡೂ ಯೋಗಿಗಳಿಗೂ ನಿರ್ಮಿತಗಳಾಗಿರುವುವು, ಪರಮಾತ್ಮನು ಇಂದ್ರಿಯಂಗಳ ಸಾಂಗತ್ಯವಿಲ್ಲದೆ ನಿರ್ಮಲನಾಗಿರೋಣದರಿಂದ ಸುಷುಪ್ತಿಯೆಂಬುವ ಅವಸ್ಥೆಯನ್ನು ಶ್ರೇಷ್ಠವಾದದ್ದನ್ನಾಗಿ ಹೇಳುವರು. ಚಿತ್ತವೆಂಬುವುದು ಪ್ರಾಣವಾಯುವಿನೊಡನೆ ಸೇರಿ ಜಿಹ್ವೇಂದ್ರಿಯ ದ್ವಾರದೊಳು ರಸವನ್ನು ಗ್ರಹಿಸಿ ಗುಹ್ಯೇಂದ್ರಿಯವಸ್ಥೆಗಳೆರಡನ್ನು ಮಥಿಸೋಣದರಿಂದ, ಶುಕ್ಲ, ಶೋಣಿತ ಎಂಬೀ ಎರಡನ್ನು ಉಕ್ಕಿದವುಗಳಾಗಿ, ಬಳಿಕ ಆ ಎರಡೂ ಏಕರೂಪವಾಗಿ ಕಲೆತು ಪಿಂಡಭಾವವನ್ನೈದಿ ಮಣಿಪೂರಕವೆಂಬ ಕಮಲಮಧ್ಯದೊಳು ವಿಷ್ಣುವಿನ ಸಮೀಪದಲ್ಲಿರುವ ಸಮಾನವೆಂಬ ವಾಯುವಿನಿಂದ ರಕ್ಷಿಸಲ್ಪಟ್ಟದ್ದಾಗಿ ಅವಯವಗಳ ಸೇರುವಿಕೆಯಿಂದ ನವಮಾಸಗಳು ಮೂತ್ರಪುರೀಷಸ್ಥಾನಗಳಲ್ಲಿ ವಾಸಮಾಡುತ್ತಾ ವರ್ಧಿಸಿದ ಬಳಿಕಲಾಮೂತ್ರದ್ವಾರವನ್ನು ಭೇದಿಸಿಕೊಂಡು ಹೊರಗೆ ಬಂದದ್ದಾಗಿ ತಾಯಿಯಿಂದ ಪೋಷಿಸಲ್ಪಡುವದು. ಸ್ತ್ರೀಪುರುಷ ಸಂಬಧದೊಳು ತಾಯಿಯ ಶೋಣಿತವು ಅಧಿಕವಾಗಲು ಸ್ತ್ರೀಪಿಂಡವಾಗಿಯು ತಂದೆಯ ಶುಕ್ಲವು ಅಧಿಕವಾದರೆ ಪುರುಷಪಿಂಡವಾಗಿಯೂ, ಎರಡೂ ಸಮಾನವಾದರೆ ನಪುಂಸಕ ಪಿಂಡವಾಗಿಯೂ ಜನಿಸು

ವುದು, ಆ ಶೋಣಿತದಿಂದ ಕೆಂಪುವರ್ಣವೂ, ಶುಕ್ಲದಿಂದ ಕರೀವರ್ಣವು, ಎರಡೂ ಸಮಾನವರ್ಣದಿಂದ ಶ್ಯಾಮಲವರ್ಣವು ಉಂಟಾಗಿ ದೇಹ ಗೃಹ ವಾಸನೆಗಳಿಂದ ಸ್ತ್ರೀಪುರುಷರೂಪದೊಳು ಜನನವಾಗುವದು, ಕೇಳೈ,—ರಾಜಪುತ್ರನೆ ! ಅಂತಪ್ಪ ಅಸಹ್ಯಕರವಾದ ಮೂತ್ರದ್ವಾರಕ್ಕೆ ಅಪೇಕ್ಷೆಯನ್ನಿಟ್ಟು ಯಾತಕ್ಕೆ ಮೋಹಪರವಶ ನಾಗುತ್ತೀಯೆ ಇಂಥಾ ಮೂತ್ರದ್ವಾರದ ಆಶೆಯಿಂದ ಇಂದ್ರ, ಚಂದ್ರ, ಕೀಚಕ, ರಾವಣನೇ ಮೊದಲಾದ ಕಾಮಾಂಧರಾದ ಅನೇಕರು ಬಹಳವಾದ ಕಷ್ಟಗಳನ್ನು ಅನುಭವಿಸಿದವರಾದರು, ಅದನ್ನೆಲ್ಲಾ ನೀನು ಅರಿತವನಲ್ಲವೆ; ಎಂದೀಪ್ರಕಾರವಾಗಿ ಆ ರಾಜನಂದನನಿಗೆ ಸಾಂಖ್ಯಸೂತ್ರಸಾರವನ್ನು ಸಾಂಗವಾಗಿ ತಿಳಿಯಪಡಿಸಿ ಆತನ ಭ್ರಾಂತಿಯಂ ಹೋಗಗೊಳಿಸಿ ನಾನಾವಿಧವಾದ ಧರ್ಮಮಾರ್ಗಗಳನ್ನು ಬೋಧಿಸುತ್ತ ಶಬ್ದಭೇದಿನಿಯೆಂಬ ಮಂತ್ರವನ್ನು ಮಂತ್ರ ಪೂರ್ವಕವಾಗಿ ಆತಂಗೆ ಉಪದೇಶಿಸಿದನು, ಬಳಿಕಲಾರಾಜಪುತ್ರನು ಋಷಿಯಿಂದ ಪೇಳಲ್ಪಟ್ಟವನ್ನೆಲ್ಲಾ ಸಾಂಗವಾಗಿ ಅರಿತವನಾಗಿ ಆ ಮುನಿಪೋತ್ತಮನಿಗೆ ಫಲಕಾಷ್ಠಕುಸುಮಗಳನ್ನು ತಂದುಕೊಡುತ್ತಾ ನಾನಾವಿಧವಾದ ಶುಶ್ರೂಷೆಯನ್ನು ಮಾಡುತ್ತಾ, ಇದ್ದನೆಂಬ ದಾಗಿ ಶ್ರೀಕೃಷ್ಣನು ಪೇಳಲಾಮಾತಿಗೆ ಅರ್ಜುನನು ಆ ಭಗವಂತನಿಗೆ ನಮಸ್ಕರಿಸಿ ಎಲೈ—ಮಹಾತ್ಮನೇ ? ಸಾಂಖ್ಯಸೂತ್ರವೆಲ್ಲವನ್ನು ನಾನು ಕ್ರಮವಾಗಿ ತಿಳಿದವ ನಾದೆನು, ಆದರೆ ಆ ಸತ್ಯಜಿತ್ತುವಿನ ವೃತ್ತಾಂತವು ಮುಂದೆ ಹೇಗಾಯಿತು ? ಮೊದಲು ಕಳಿಂಗ ರಾಜನ ಮಂತ್ರಿಯು ಹೋದ ಸಮಾಚಾರವೇನು ಇದನ್ನೆಲ್ಲ ವಿಸ್ತಾರವಾಗಿ ಎನಗೆ ಅರುಹಬೇಕೆನಲಾಗ ಭಗವಂತನಿಂತೆಂದನು.

ಎಲೈ,—ಅರ್ಜುನನೇ ? ಆ ಸತ್ಯಜಿತುರಾಯನು ಫಲಕಾಷ್ಠಕುಸುಮಗಳಿ ಗೋಸ್ಕರ ಒಂದು ದಿವಸ ಬಹುದೂರವಾಗಿ ಹೋಗಲಾಗಿ ಅಲ್ಲಿ ಮಾರ್ಗಸ್ಥರಾಗ ರುವ ಕೆಲವರನ್ನು ಕಂಡು ಅವರನ್ನು ಕುರಿತು ಅಯ್ಯಾ ನೀವುಗಳು ಯಾವ ಸ್ಥಳ ದಿಂದ ಬಂದಿರಿ ಎಲ್ಲಿಗೆ ಹೋಗುವಿರೆಂದು ಕೇಳಿದನು, ಆ ಮಾತಿಗೆ ಆ ಪಥಿಕರು ಅಯ್ಯಾ ನಾವು ಕಾಶೀದೇಶ ನಿವಾಸಿಗಳು ಮತ್ಸ್ಯದೇಶದ ದೊರೆಯು ಅತಿ ವಿಚಿ ತ್ರವಾದ ಒಂದಾನೊಂದು ಶಾರಿಕಾಯಂತ್ರವನ್ನು ವಿರಚಿಸಿ ಆ ಯಂತ್ರವನ್ನು ಧನುರ್ವಿದ್ಯಾ ಶಕ್ತಿಯಿಂದ ಯಾರು ಹೊಡೆಯುವರೋ ಅಂಥಾವರಿಗೆ ತನ್ನ ಪ್ರಿಯಪುತ್ರಿಯಾದ ಚಂದ್ರರೇಖೆಯೆಂಬವಳನ್ನು ಕೊಟ್ಟು ವಿವಾಹಬೆಳೆಸುವೆ ನೆಂದು ಕಟ್ಟಲೆಯಂ ಮಾಡಿಕೊಂಡು ಸಕಲವಾದ ದೇಶಾಂತರಗಳಲ್ಲಿ ಡಂಗುರ ವನ್ನು ಹೊಡೆಸಿರುವ ಕಾರಣ ಆ ಮಹದುತ್ಸವವನ್ನು ನೋಡುವದಕ್ಕಾಗಿ ನಾವೆ ಲ್ಲರೂ ಆ ಮತ್ಸ್ಯದೇಶಾಧಿಪನ ಕಲ್ಯಾಣ ಪಟ್ಟಣಕ್ಕೆ ಹೋಗುವೆವೆಂದು ಹೇಳಿದ ವರಾದರು.

ಆ ಪಥಿಕರಾಡಿದ ಮಾತುಗಳನ್ನು ಕೇಳಿದ ಸತ್ಯಜಿತುವು ತನ್ನ ವಯೋನುರೂಪಕ್ಕನುಗುಣವಾದ ಕಾಮವಿಕಾರಬುದ್ಧಿಯಿಂದ ಮತಿಗೆಟ್ಟವನಾಗಿ ತಾನಾ ಮತ್ಸ್ಯದೇಶಕ್ಕೆ ಹೋಗಿ ಅಲ್ಲಿನ ಯಂತ್ರವಂ ಭೇದಿಸಿ ತನ್ಮೂಲಕದಿಂದಲಾ ರಾಯನ ಕುವರಿಯಂ ಸ್ವೀಕರಿಸಬೇಕೆಂಬಭಿಲಾಷೆಯಿಂದ ಭರದ್ವಾಜ ಋಷಿಯ ಸಮೀಪಕ್ಕೆ ಹಿಂತಿರುಗಿ ಬಂದು ತಾನು ತಂದಿದ್ದ ಫಲಕಾಷ್ಟಗಳನ್ನಾ ಮಹಾನುಭಾವಂಗಿತ್ತು ಆತನಿಗೆ ನಮಸ್ಕರಿಸಿ ಎಲೈ,—ಮುನೀಂದ್ರನೇ, ನಾನು ಮತ್ಸ್ಯದೇಶಕ್ಕೆ ಹೋಗಿ ಆ ರಾಜನಿಂದ ರಚಿಸಲ್ಪಟ್ಟಿರುವ ಯಂತ್ರವಂ ಭೇದಿಸಲೋಸುಗ ಅಪ್ಪಣೆಯನ್ನು ಕೊಡಬೇಕೆಂದು ಪ್ರಾರ್ಥಿಸಲಾಗಿ ಮುನಿಪೋತ್ತಮನು ಅವನ ಮಾತುಗಳಿಗೆ ನಗುತ್ತಾ ಕಂದಾ? ನೀನು ಎಲ್ಲಿಗೆ ಹೋಗಬೇಕಾದರು ಅದಕ್ಕೆ ತಡೆಯಿಲ್ಲದೆ ಅಪ್ಪಣೆಯನ್ನಿತ್ತಿರುವೆನು, ನಾನು ಉಪದೇಶಿಸಿರುವ ಮಂತ್ರಗಳನ್ನು ಮಾತ್ರ ಎಂದಿಗೂ ಮರೆಯದೆ ಪುನಶ್ಚರಣೆಯೊಳಗೇ ಇಟ್ಟಿರುವಂಥವನಾಗು, ಮತ್ತು ನೀನು ಯಾವ ಸ್ಥಳಕ್ಕೆ ಪೋರಮಟ್ಟಾಗ್ಯೂ ನಿನಗೆ ಜಯವುಂಟಾಗುವದಲ್ಲದೆ ಅಪಜಯವೆಂದಿಗೂ ಸಂಭವಿಸುವದಿಲ್ಲ. ನೀನೀ ಭೂಲೋಕದಲ್ಲಿ ಸಮಸ್ತ ಸುಖಗಳನ್ನೂ ಅನುಭವಿಸುವಂಥವನಾಗಿ ಕಡೆಗೆ ಸಾಕ್ಷಾತ್ ವೈಕುಂಠ ಪದವಿಯನ್ನು ಪಡೆಯುವನಾಗುತ್ತೀಯೆ ಎಂಬದಾಗಿ ಆತನಿಗೆ ಆಶೀರ್ವಚನವನ್ನಿತ್ತು ಕಳುಹಿಸಿದನು.

ಬಳಿಕಲಾ ಸತ್ಯಜಿತು ಮುನೀಂದ್ರಂಗೆ ಅಭಿವಂದಿಸಿ ಆತನ ಅಪ್ಪಣೆಯಂ ತಲೆಯೊಳಾಂತು ಅಲ್ಲಿಂದ ತೆರಳಿ ಮಾರ್ಗಸ್ಥರು ಯಾವ ದಾರಿಯಲ್ಲಿ ಹೋಗುತಲಿದ್ದರೋ ಆ ಮಾರ್ಗವನ್ನೇ ಹಿಡಿದು ಪಯಣದ ಮೇಲೆ ಪಯಣದಿಂದ ತಾನೂ ಮತ್ಸ್ಯದೇಶವನ್ನೇ ಕುರಿತು, ಹೋಗುತ್ತಲಿರಲಾಗಿ ಈ ಸತ್ಯಜಿತುವನ್ನೇ ಹುಡುಕಲೋಸುಗ ದೇಶವನ್ನು ಸಂಚಾರಮಾಡುತಲಿದ್ದ ಕಳಿಂಗದೇಶಾಧಿಪನ ಮಂತ್ರಿಯಾದ ಸುನೀತಿಯು ಅನೇಕ ವನ, ಬೆಟ್ಟ, ಗುಟ್ಟಗಳಲ್ಲಿಯೂ ದೇಶಕೋಶಗಳಲ್ಲಿಯೂ, ಪರ್ಣಶಾಲೆಗಳಲ್ಲಿಯೂ, ಹುಡುಕಿ ಎಲ್ಲಿಯೂ ಕಾಣದೆ ಬಳಲಿ ಬೆಂಡಾಗಿ ಕಡೆಗೆ ತನ್ನೊಳು ತಾನೇ ಚಿಂತಿಸಿದನು, ಹೇಗೆಂದರೆ ಈಗ ಮತ್ಸ್ಯದೇಶದಲ್ಲಿ ನಡೆಯುಹೋಗುವ ಸ್ವಯಂವರ ಮಹೋತ್ಸವಕ್ಕೆ ಬಹುದೂರದೇಶಗಳಿಂದ ಅನೇಕ ರಾಜಾಧಿರಾಜರು ಬಂದು ಸೇರುವರು ನಾನು ಆ ಸ್ಥಳಕ್ಕೆ ಹೋದರೆ ನಾನು ಉದ್ದೇಶಿಸಿ ಬಂದಿರುವ ರಾಜಪುತ್ರನು ಅಲ್ಲಿಯಾದರೂ ಸಿಕ್ಕಬಹುದೆಂದು ನಿಶ್ಚೈಸಿ ಮತ್ಸ್ಯದೇಶವಂ ಕುರಿತು ಹೋಗುತ್ತ ಇರಲಾಗಿ ಮಾರ್ಗಮಧ್ಯದಲ್ಲಿ ಪ್ರಯಾಣಿಕನಾಗಿ ಹೋಗುತಲಿರುವ ಈ ಸತ್ಯಜಿತುವನ್ನು ಕಂಡು ಇವನಾರೊ ರಾಜಪುತ್ರನಂತಿರುವನು. ಇವನನ್ನು ನೋಡಿದರೆ, ಕೇವಲ ಕೃಶಾಂಗನಾಗಿಯೂ ಅತಿ ಸುಂದರನಾಗಿಯೂ ಇರುವನು, ಇದೂ ಅಲ್ಲದೆ ಅಸ್ತ್ರಶಸ್ತ್ರಾದಿಗಳನ್ನು ತರಿಸಿ

ಕೊಂಡು ಏಕಾಂಗಿಯಾಗಿ ಹೋಗುತಲಿದ್ದಾನಲ್ಲದೆ ಅನೇಕ ದಿವಸಗಳಿಂದಲೂ ಕಾಡಿನಲ್ಲಿ ವಾಸಿಸಿದವನಂತೆ ತೋರಿಬರುವದು. ಒಂದುವೇಳೆ ನಮ್ಮ ರಾಜಾಧಿರಾಜನ ಕುವರಿಯ ವಸ್ತ್ರಕಂಚುಕಗಳನ್ನಿವನೇ ಅಪಹರಿಸಿದ್ದವನಾದರೆ ಆ ಸಂಗತಿಯನ್ನು ಇವನೊಳು ವಿಚಾರಿಸುವುದಕ್ಕೆ ಮಾರ್ಗವೇ ತೋರುವದಿಲ್ಲವಲ್ಲ, ಇವನು ಧೀರೋದಾತ್ತನಾಗಿರುವ ಕಾರಣ ರಹಸ್ಯವನ್ನು ಯಾವ ಬಗೆಯಿಂದಲಾದರೂ ಹೊರವಡಿಸಬೇಕೆಂದು ಸ್ವಲ್ಪ ಹೊತ್ತು ಚಿಂತಿಸಿ ಆತನ ಕುದುರೆಯ ಹಿಂಭಾಗದಲ್ಲಿಯೇ ತನ್ನ ಕುದುರೆಯನ್ನು ಬಿಟ್ಟುಕೊಂಡು ಹೋಗುತ್ತಾ ಕಾರಣಾಂತರದಿಂದ ಆತನಲ್ಲಿ ಅತಿವಿನಯ ಭಯಭಕ್ತಿಯನ್ನು ವಿಶ್ವಾಸದಿಂದ ತೋರಿಸುವಂತೆ ನಟಿಸಿ ಆತನೊಡನೆ ಅತ್ಯಂತವಾದ ಸ್ನೇಹವನ್ನು ಅಭಿವೃದ್ಧಿಮಾಡಿ ಅತಿವಿನಯ ನಾನಾ ವಿ[illegible]ಗಳಿಂದಲೂ ನಾನಾ ಕೇಳೀವಿನೋದಗಳಿಗಾಕರವಾದ ಚರಿತ್ರಾದ ತಂತ್ರಗಳಿಂದ [illegible] ಚಿತ್ತವ್ಯಾಪಾರವನ್ನು ವಿಶದವಾಗಿ ತಿಳಿ[illegible]ಡಿಸುತ್ತಾ ಸತ್ಯಜಿತುವಿಗೆ [illegible]ನಂತೆ ನಾನಾ [illegible]ದೊಳು ಸಿಕ್ಕಿದ [illegible] ಉದ್ಯಾನವನ್ನು ನೋಡಿ, ಎಲೈ,—ಸ್ನೇಹಿತನೇ ನೋಡು ಇದು ಎಷ್ಟು ರಮಣೀಯವಾಗಿಯೂ ಶೃಂಗಾರವಾಗಿಯೂ ಇರುವದೆನಲು ಆ ಮಾತನ್ನು ಕೇಳಿದ ಸ್ನೇಹಿತನಾದ ಸತ್ಯಜಿತ್ತುವು ತಟ್ಟನೆ ತಾನು ಹತ್ತಿರುವ ಕುದುರೆಯಂ ನಿಲ್ಲಿಸಿ, ಚತುರ್ದಿಕ್ಕುಗಳನ್ನೂ, ನೋಡಿ, ಆಹಾ ! ಈ ವನವು ಎಷ್ಟು ರಮಣೀಯವಾಗಿದ್ದರೂ ಕಳಿಂಗ ಭೂಪಾಲನ ಉದ್ಯಾನವನಕ್ಕೆ ಎಂದಿಗೂ ಸಮಾನವಾಗಿರದೆಂದು ಹೇಳಲಾಗಿ ಸ್ವಭಾವದಿಂದಲೇ ಮಂತ್ರಿಗಳು ತಂತ್ರಶಾಲಿಗಳಾದ ಕಾರಣ, ಈ ಮಾತಿನಿಂದಲೇ ಆತನ ಇಂಗಿತವನ್ನು ಹಿಡಿದು ಇವನೇ ನಮ್ಮ ರಾಜನ ಉದ್ಯಾನವನಕ್ಕೆ ಪ್ರವೇಶಿಸಿದ್ದನೆಂದೂಹಿಸಿ ಆನಂದಪರವಶನಾಗಿ ಅದಂ ಅಂತರಂಗದೊಳು ನಿಲ್ಲಿಸಿಕೊಂಡು ಕೊಂಚದೂರ ಪಯಣ ಮಾಡಿ, ಎಲೈ—ಚತುರನೇ ಅಲ್ಲಿ ಕಾಣಬಂದ ಸರಸ್ಸನ್ನು ನೋಡು ಇದಂ ನೋಡ ಎನಲಾ ಸತ್ಯಜಿತುವು, ತನ್ನ ತುಟಿಗಳಂ ಹಾಸಿಸಿ ಈ ಸರಸ್ಸು ಅತ್ಯಂತ ರಮಣೀಯವಾದದ್ದೆಂದು ಹೇಳುತ್ತೀಯ, ಇಂತಹ ಸರಸ್ಸುಗಳು ನೂರು ಸೇರಿದಾಗ್ಯೂ ಕಳಿಂಗದೇಶಾಧಿಪನ ಪುತ್ರಿಯು ಕ್ರೀಡೋದ್ಯಾನದ ಸರಸ್ಸಿನಲ್ಲಿ ಒಂದು ಲವಮಾತ್ರವನ್ನಾದರೂ ಹೋಲಲಾರವು, ಎಂಬದಾಗಿ ಹೇಳಲಾಮಾತಿಗೆ ಸುನೀತಿಯು ಪರಮಸಂತುಷ್ಟನಾಗಿ, ಎಲೈ ರಾಜಶ್ರೇಷ್ಠನೇ ! ಒಂದು ವಿಚಿತ್ರವಾದ ವಸ್ತುವನ್ನಾದರೂ ನಾನಿದುವರೆಗೂ ನೋಡಿಲ್ಲ. ಪುರುಷರ ದೃಷ್ಟಿಗೆ ಗೋಚರವಾಗಿ ಸ್ತ್ರೀಯರು ಜಲಕ್ರೀಡೆಯನ್ನಾಡಿದ ಸಮಯವು ತಮಗೆ ಹೇಗೆ ಲಭಿಸಿತು, ಅದರ ವಿಚಿತ್ರವೆಂಥಾದ್ದು ಅದನ್ನೆನಗರುಹಬೇಕೆಂದು ಕೇಳಲಾ ಸತ್ಯಜಿತುವು ಮನದೊಳು ರಾಜವಲ್ಲಭೆಯನ್ನು ನೆನೆಸಿಕೊಂಡು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ,

ಆ ಕ್ರೀಡಾಸರಸ್ಸಿನ ಅಂದಚಂದಗಳನ್ನೆಲ್ಲಾ ವಿಸ್ತಾರವಾಗಿ ತಿಳುಹಲಾಗಿ ಸುನೀತಿಯು ಆತನಂ ಕುರಿತು; ಎಲೈ ಸಖನೇ ನೀನೀಗ ವರ್ಣಿಸುವ ಸಮಯದಲ್ಲಿ ಕಣ್ಣುಗಳಲ್ಲಿ ಅಶ್ರುಧಾರೆಯನ್ನೇತಕ್ಕೆ ಬಿಟ್ಟವನಾದೆ ಎನಲು ಅವಕ್ಕಾಃನು ಅತ್ಯಂತ ದುಃಖಪರವಶನಾಗಿ ಗದ್ಗದಸ್ವರದಿಂದ ರಾಜಪುತ್ರಿಯನ್ನು ಅವಳ ಅಂದ ಚಂದ ಸೊಬಗನ್ನು ವರ್ಣಿಸಿ ಹೇಳಿ, ಕೇಳೈ—ಸಖನೇ ನಾನಾರಾಜಪುತ್ರಿಯ ನಿಮಿತ್ತದಿಂದಲೆ ಚಿತ್ತಭ್ರಮೆಯುಂಟಾದವನಾಗಿ ಭೂಮಿಯನ್ನು ಸುತ್ತುತಲಿರುವೆ ನೆನಲು ಸುನೀತಿಯು ಆತನನ್ನು ಬಹಳವಾಗಿ ಶ್ಲಾಘನೆಯಂ ಮಾಡಿ ರಾಜೋತ್ತಮಾ ನಿನ್ನಂತಾ ಧೈರ್ಯಶಾಲಿಯು ಯಾವನುಂಟು ಮನ್ಮಥನ ಬಾಣಗಳಿಗೆ ಸಿಲುಕದ ಇರುವ ಪುರುಷನು ನೀನೇಸರಿ, ವಿಶ್ವಾಮಿತ್ರ ಮೊದಲಾದ ಮಹಾ ಋಷಿಗಳೆಲ್ಲರೂ ಸ್ತ್ರೀಯರನ್ನು ಕಂಡು ಕಾಮಪರವಶರಾಗಿ ಬಹಳವಾದ ಕಷ್ಟಗಳನ್ನನುಭವಿಸಿದವರು ಇವರಿ ನೀನು ಆ ಸಮಯದಲ್ಲಿ ಧೈರ್ಯವಂ ತಾಳಿ ಹೇಗೆ ಬಂದೆ ಎನಲು, ಆ ದಕ್ಷರಾಜಪುತ್ರನು ಅತಿ ಖಿನ್ನನಾಗಿ ಕುಮರಿಯುಸ್ಸಿಳಿದು ತಾನು ತಂದಿದ್ದ ಪದಗಳನ್ನು ತೆಗದು ಅವನಿಗೆ ತೋರಿಸಿ, ಅವುಗಳಿಗೆ ಮುತ್ತ ಕೊಟ್ಟು ಮರಳಿ ಭದ್ರವಾಗಿ ಅವಂ ಕಟ್ಟಿ ಜಾಮರಯುಮೇಲಿಟ್ಟನು. ಬಳಿಕವಾ ಸುನೀತಿಯು ಆ ಮಹಾರಾಯನಿಗೆ ನಮಸ್ಕರಿಸಿ ಎಲೈ ರಾಜೋತ್ತಮನೆ ನಾನು ಕಳಿಂಗದೇಶಾಧಿಪನ ಮುಖ್ಯಮಂತ್ರಿಯು, ನಿನ್ನ ಅಸ್ತ್ರಶಸ್ತ್ರಗಳ ವಿದ್ಯಾಚಾತುರ್ಯವು ನಮಗೆ ಉತ್ಸಾಹವನ್ನುಂಟುಮಾಡಿದವು ನಮ್ಮ ರಾಜಪುತ್ರಿಯು ನಿನ್ನನ್ನು ಹೊರತು ಅನ್ಯರನ್ನು ವರಿಸುವುದಿಲ್ಲವೆಂದು ಪ್ರತಿಜ್ಞೆಯಂಮಾಡಿ ನಿದ್ರಾಹಾರಗಳನ್ನು ಬಿಟ್ಟಿರುವಳು, ಆದಕಾಗಿ ನಿನ್ನನ್ನು ಹುಡುಕುವದಕ್ಕೋಸ್ಕರ ಆರು ತಿಂಗಳಿಂದಲೂ ಬಹು ದೇಶಗಳನ್ನು ಸಂಚರಿಸಿದೆನು. ಇಂದಿನ ದಿನ ನನ್ನ ಭಾಗ್ಯೋದಯದಿಂದ ನಿನ್ನ ದರ್ಶನವನ್ನೈದಿ ಅತಿ ಸಂತುಷ್ಟನಾದೆನೆಂದು ಆತನಂ ಬಹಳವಾಗಿ ಸ್ತುತಿಸಿ, ಎಲೈ ಮಹಾತ್ಮನೆ ಕಳಿಂಗದೇಶಕ್ಕೆ ಹೋಗೋಣ ಬಾ ಎಂದು ಪ್ರಾರ್ಥಿಸಲು, ಆ ರಾಜಪುತ್ರನೂ ಸುನೀತಿಯನ್ನಾಲಿಂಗಿಸಿಕೊಂಡು ತಾನು ಹೊಂದಿದ ಕಷ್ಟವನ್ನೂ ಮತ್ತು ಭರದ್ವಾಜ ಋಷಿಯ ಕರುಣವನ್ನು ಹೇಳಿ, ಮತ್ಸ್ಯದೇಶಕ್ಕೆ ಹೋಗಿ ಶ್ರೀಗುರುಕಟಾಕ್ಷದಿಂದ ದಾರಿಕಾಯಂತ್ರವಂ ಭೇದಿಸಿ ಆ ಕನ್ಯೆಯಂ ಮದುವೆಮಾಡಿಕೊಂಡು, ಬಳಿಕ ಕಳಿಂಗದೇಶಕ್ಕೆ, ಹೋಗೋಣ, ಅದುವರೆಗೆ ನೀನು ಎನ್ನೊಡನೆ ಅಲ್ಲಿಗೆ ಬಂದು ನನ್ನ ಧನುರ್ವಿದ್ಯಾ ವಿಶಾರದತೆಯನ್ನು ನೋಡೆಂದು ಹೇಳಲಾ ಸುನೀತಿಯು ಆ ಮಾತಿಗೆ ಒಪ್ಪಿ ಎಲೈ ಧೊರೆಯೇ ! ನಮ್ಮ ರಾಜಪುತ್ರಿಯನ್ನು ಪಾಣಿಗ್ರಹಣ ಮಾಡಿಕೊಳ್ಳಬೇಕೆಂದು ಬಹಳವಾಗಿ ಪ್ರಾರ್ಥಿಸಲಾಗಿ, ಆ ಮಾತಿಗೆ ಒಪ್ಪಿ ವಾಗ್ದಾನವನ್ನು ಕೊಟ್ಟು

ಇಬರೂ ಮತ್ಸ್ಯದೇಶವನ್ನು ಕುರಿತು ಹೊರಟು ಅನೇಕ ಪರ್ವತ, ವನ, ದುರ್ಗ ನದಿಗಳನ್ನು ದಾಂಟಿ ಕೆಲವು ದವಸಗಳಲ್ಲಿಯೆ ಆ ದೇಶವನ್ನು ಸೇರಿದರು.

ಆ ಪಟ್ಟಣದಲ್ಲಿ ನಿರ್ಮಿಸಿರುವ ಒಂದಾನೊಂದು ವಿಹಾರಗೃಹದೊಳಗಿಳಿದ್ದು ಕೊಂಡು, ಸ್ವಯಂವರದ ದಿವಸ ಸತ್ಯಜಿತುವು ಸೂರ್‍ಯೋದಯಾತ್ಪೂರ್ವದೊಳೆದ್ದು ಸ್ನಾನಾದಿ ನಿತ್ಯಕರ್ಮಂಗಳಂ ಮುಗಿಸಿದವನಾಗಿ ಭರದ್ವಾಜ ಮಹರ್ಷಿಯ ಕರುಣ ದಿಂದ ಉಪದೇಶವಾದಂಥಾ ಮಂತ್ರೋಚ್ಚಾರಣೆಯಂ ಮಾಡಿ ಈರ್ವರೂ ಸ್ವಯಂ ವರ ಮಂಟಪಕ್ಕೆ ಹೋಗಿ ಅಲ್ಲಿರುವ ಶಾರಿಕಾಯಂತ್ರದ ಸಮೀಪದಲ್ಲಿ ಕುಳಿತು ಕೊಂಡರು ಇಷ್ಟರಲ್ಲಿ ಆ ಸ್ವಯಂವರ ಮಹೋತ್ಸವಕ್ಕೆ ಅನೇಕ ರಾಜಾಧಿರಾಜರು ಅನೇಕ ಸೈನ್ಯಸಮೇತರಾಗಿ ಬಂದು ಸಿಂಹಾಸನಗಳನ್ನು ಮಾಡುತ್ತಾ ಕುಳಿತಿರುವ ಸಮಯದಲ್ಲಿ ಮತ್ಸ್ಯದೇಶಾಧಿಪನ ಮಂತ್ರಿಯು ಆ ಸ್ಥಳಕ್ಕೆ ಬಂದು ಅಲ್ಲಿ ಸೇರಿ ರುವ ರಾಜಾಧಿರಾಜರ ಮಂಡಲಿಯನ್ನು ನೋಡಿ, ಎಲೈ ಪ್ರಭುಗಳಿರಾ! ಇಲ್ಲಿರುವ ಶಾರಿಕಾಯಂತ್ರವನ್ನು ಸಾಹಸದಿಂದ ಭೇದಿಸುವ ಶೂರರು ಈ ಮಹಾಘಂಟಾ ಮಣಿಯನ್ನು ಧ್ವನಿಮಾಡಿ ಒಳಕ್ಕೆ ಪ್ರವೇಶಿಸಿ ಸ್ತಂಭದ ಅಧೋಭಾಗದಲ್ಲಿಟ್ಟಿರುವ ಪೇರ್ಗನ್ನಡಿಯಲ್ಲಿ ಈ ಯಂತ್ರದ ಪ್ರತಿಬಿಂಬವನ್ನು ನೋಡಿ ಒಂದೇ ಬಾಣದಿಂದ ಆ ಯಂತ್ರವನ್ನು ಯಾವನಾದಾಗ್ಯೂ ಹೊಡೆಯುವನಾದರೆ ಅಂತವನನ್ನು ನಮ್ಮ ರಾಜಪುತ್ರಿಯು ವರಿಸುವಳೆಂದು ನುಡಿದನು. ಆ ಮಂಟಪಮಧ್ಯದೊಳಿರುವ ರಾಜರುಗಳೆಲ್ಲರೂ ಆ ಸ್ತಂಭವನ್ನು ಮತ್ತು ಯಂತ್ರವನ್ನು ನೋಡಿ ವಿಸ್ಮಯ ವನ್ನು ಹೊಂದಿ ಓಹೋ ಈ ಯಂತ್ರವನ್ನು ನೋಡುವುದಕ್ಕೆ ದೃಕ್ಕುಗಳೂ ನಿಲ್ಲು ವುದಿಲ್ಲ ಅದರಿಂದ ಕನ್ನಡಿಯಲ್ಲಿ ನೋಡಿ ಹೊಡೆಯುವುದಕ್ಕೆ ಹೇಗಾದೀತು ಇದು ದೇವತೆಗಳಿಗೂ ಅಸಾಧ್ಯವಾಗಿರುವ ಕಾರಣ ನಮ್ಮಂಥವರಿಗೆ ಹೇಗೆ ಸಾಧ್ಯವಾ ದೀತು ? ಈ ರಾಜ್ಯಾಧಿಪನು ನಮ್ಮ ಮಾನಗಳನ್ನಪಹರಿಸುವುದಕ್ಕೆ ಇದನ್ನು ನಿರ್ಮಿಸಿದನಲ್ಲದೆ ಮತ್ತಾವುದಕ್ಕೂ ಕಾಣುವುದಿಲ್ಲ ಇಂಥಾ ಯಂತ್ರವನ್ನು ನಾವು ಎಂದಿಗೂ ನೋಡಿಯೂ ಮತ್ತು ಕೇಳಿಯೂ ಇಲ್ಲ. ಆದುದರಿಂದ ಈ ಧೊರೆಯು ಗರ್ವವನ್ನು ಮುಂದು ರಾಜ್ಯವನ್ನು ದೋಚಿಕೊಳ್ಳೋಣವೆಂದು ಯೋಚಿಸುತ್ತ ಲಿದ್ದರು.

ಅನಂತರದಲ್ಲಿ ಸತ್ಯಜಿತುವು ಮಾಸಿದ ಉಡುಪುಗಳನ್ನು ಧರಿಸಿಕೊಂಡು ಅತ್ಯಂತ ಕೃಶವಾದ ದೇಹವುಳ್ಳವನಾಗಿ, ಅನೇಕ ವಸ್ತ್ರಾಭರಣಂಗಳಿಂದ ಅಲಂ ಕೃತರಾದ ರಾಜಮಂಡಲಿಯ ಮಧ್ಯದಲ್ಲಿ ಸಿಂಹದ ಮರಿಯಂತೆ ಮೆಲ್ಲಮೆಲ್ಲಗೆ ಅವರ ಸಮೂಹವನ್ನು ತಪ್ಪಿಕೊಂಡು ಯಂತ್ರದಸಾಮಿಪ್ಯವನ್ನೈದಿ ಆಘಂಟೆಯನ್ನು ಘಣಘಣವೆಂದು ಬಾರಿಸಿ ಮುಂದಣ ಪ್ರಯತ್ನಕ್ಕಾಗಿ ನಿಂತಿರುವದನ್ನು ಅಲ್ಲಿನ ರಾಜರೆಲ್ಲರೂ ನೋಡಿ, ಓಹೋ ! ಇವನನ್ನು ನೋಡಿದರೆ ಕೃಶವಾದ ಶರೀರ

ವುಳ್ಳವನಾಗಿಯೂ ದರಿದ್ರನಾಗಿಯೂ ತೋರಬಹುದು, ಇವನೀಯಂತ್ರದ ಸಾಮಿಪ್ಯವನ್ನೈದಿರುವದನ್ನು ನೋಡಿದರೆ ಅಡಿಗೆಯ ಮನೆಗೆ ನೊಣವು ಒಳ ಹೊಕ್ಕರೀತಿಯಾಗಿ ಘಟಾನಾಲವಾಯಿತಲ್ಲದೆ ಈ ಅಲ್ಪಮನುಷ್ಯನಿಂದ ಇಂಥ ಮಹತ್ತರವಾದ ಕಾರ್ಯವು ಎಂದಿಗೂ ಸಾಧ್ಯವಾಗಲರಿಯದೆಂದು ತಮ್ಮೊಳು ತಾವೆ ಅಪಹಾಸ್ಯಮಾಡುತಲಿದ್ದರು. ಬಳಿಕಲಾ ಸತ್ಯಜಿತುವು ಆ ರಾಜರ ಎದೆ ಗಳು ಭೇದಿಸುವಂತೆಯೂ, ದಿಕ್ಕುಗಳು ಪ್ರತಿಧ್ವನಿಯಂ ಕೊಡುಹಾಗೂ ಧನು ಷ್ಟಾಂಕಾರವಂ ಮಾಡಿ, ಮನದೊಳು ಮುನಿಶ್ರೇಷ್ಠನನ್ನು ಸ್ಮರಿಸಿ ಬಾಣವನ್ನು ಸಂಧಿಸಿ ಶಬ್ದಭೇದಿನಿಯೆಂಬ ಮಹಾಮಂತ್ರವನ್ನು ಜಪಿಸಿ, ಕನ್ನಡಿಯೊಳಗೆ ನೋಡಿ ಲಕ್ಷ್ಯವನ್ನಿಟ್ಟು ಬಾಣವನ್ನು ಪ್ರಯೋಗಿಸಿದನು. ಆಗಲಾ ಬಾಣವು ಅಘೋರವಾದ ರೂಪವನ್ನು ಹೊಂದಿ ಆ ಶಾರಿಕಾಯಂತ್ರವನ್ನು ಭೂಮಿಯ ಮೇಲೆ ಬೀಳಿಸಿತು ಆ ಮಹದಾಶ್ಚರ್ಯವನ್ನು ನೋಡಿದ ರಾಜರುಗಳೆಲ್ಲಾ ತಮ್ಮ ತಮ್ಮ ಮೂಗುಗಳಮೇಲೆ ಬೆರಳನ್ನಿಟ್ಟುಕೊಂಡು ಅನೇಕ ಪ್ರಕಾರವಾಗಿ ಆತನಂ ಸ್ತುತಿಸಿ ಘೊಳ್ಳೆಂದು ಕೈಚಪ್ಪಾಳೆಯಂ ತಟ್ಟಿದವರಾದರು. ಈ ಅದ್ಭುತ ಸಂತೋ ಷಕ್ಕಾಗಿ ಆಕಾಶದಲ್ಲಿ ದೇವತೆಗಳು ದೇವದುಂದುಭಿಗಳನ್ನು ಬಾರಿಸಿ ಪುಷ್ಪ ವೃಷ್ಟಿಯನ್ನು ಸುರಿಸಿದರು

ತರುವಾಯ ಮತ್ಸ್ಯದೇಶಾಧಿಪನು ಅಪರಿಮಿತವಾದ ಆಶ್ಚರ್ಯಭರಿತನಾಗಿ ಯಂತ್ರಭೇದವಂ ಮಾಡಿದ ಮಹಾತ್ಮನನ್ನು ಬಹಳವಾಗಿ ಸ್ತುತಿಸಿ, ಕಳಿಂಗ ದೇಶಾಧಿಪನ ಮಂತ್ರಿಯ ಮೂಲಕ ಆತನ ವೃತ್ತಾಂತವೆಲ್ಲವನ್ನೂ ತಿಳಿದವನಾಗಿ ಮಂಗಳ ವಾದ್ಯಂಗಳನ್ನು ಧ್ವನಿಗೈಸಿದನು. ಬಳಿಕಲಾ ರಾಜಪುತ್ರಿಯು ಸಾವಿ ರಾರು ದಾಸೀಜನಗಳೊಡನೆಯೂ, ಅನೇಕ ಸ್ತ್ರೀಸಮೂಹದಿಂದಲೂ ಬಂದು ಯಂತ್ರವನ್ನು ಭೇದಿಸಿದ ಸತ್ಯಜಿತುವಿನ ಕಂಠದೊಳು ಪುಷ್ಪಮಾಲಿಕೆಯನ್ನು ಹಾಕಿ ಆತನನ್ನು ವರಿಸಿದಳು. ಉಳಿದ ರಾಜರುಗಳೆಲ್ಲರೂ ತಲೆಗಳಂ ಬಗ್ಗಿಸಿ ಕೊಂಡು ತಮ್ಮತಮ್ಮ ಸ್ವದೇಶಗಳಿಗೆ ತೆರಳಿದವರಾದರು.

ಮತ್ಸ್ಯಭೂಪಾಲನು ಅಳಿಯನನ್ನು ಪಟ್ಟದಾನೆಯ ಮೇಲೆ ಕುಳ್ಳಿರಿಸಿ ಪಟ್ಟಣದೊಳಕ್ಕೆ ಕರೆದುಕೊಂಡು ಹೋಗಿ ಅತ್ಯಂತ ವೈಭವದಿಂದ ಶುಭಮುಹೂ ರ್ತದಲ್ಲ ವಿವಾಹ ಮಹೋತ್ಸವವನ್ನು ನಡೆಸಿದನು. ಐದನೇ ದಿವಸ ರಾತ್ರಿ ಸತ್ಯಜಿತುವು ತನ್ನ ವಲ್ಲಭೆಯಾದ ಚಂದ್ರರೇಖೆಯೊಡನೆ ಪೂರ್ವದ ಚಂದ್ರಮುಖಿಯ ವರ್ತಮಾನವೆಲ್ಲವನ್ನು ತಿಳಿಸಿ ಆಕೆಯ ವಸ್ತ್ರಕಂಚುಗಳನ್ನು ತೋರಿಸಿ, ನೀನೆನಗೆ ದ್ವಿತೀಯ ಭಾರ್ಯೆಯಾದೆಯೆಂದು ಹೇಳಿ ಕಮಲಾಕ್ಷಿಯೊಡನೆ ಸುಖಾನುಭವವನ್ನು ಹೊಂದುತ್ತಾ, ಕೆಲವುದಿವಸಗಳು ಅಲ್ಲಿಯೇ ಇದ್ದು ನಂತರ ಮಾವನು ಕೊಟ್ಟಂಥಾ ವಸ್ತುವಾಹನಗಳನ್ನು ತೆಗೆದುಕೊಂಡು ಹೆಂಡತಿಯನ್ನು ಕರೆದು

ಕೊಂಡು ಸುನೀತಿಯೆಂಬ ಮಂತ್ರಿಸಹಿತನಾಗಿ ಆ ಪಟ್ಟಣವನ್ನು ಬಿಟ್ಟು ಹೊರಟು ಬರುತಲಿದ್ದರು.

ಇಷ್ಟರಲ್ಲಿಯೇ ಮಂತ್ರಿವರ್ಯನಾದ ಸುನೀತಿಯು ತಾನು ಪಟ್ಟಣವನ್ನು ಬಿಟ್ಟ ಬಳಿಕ ನಡೆದ ಸಕಲ ವೃತಾಂತವನ್ನು ತನ್ನ ಪ್ರಭುವಿಗೆ ಪತ್ರಿಕೆಯ ಮುಖಾಂತರ ಬರೆದು ಕಳುಹಿಸಲಾಗಿ ಆ ನರಾಧಿಪನು ಅದರ ವಿಷಯುಗಳೆಲ್ಲವನ್ನು ತಿಳಿದು ಸತ್ಯಜಿತುವಿನ ಅಸ್ತ್ರಶಸ್ತ್ರ ಪ್ರೌಢಿಮೆಗೂ ತನ್ನ ಮಂತ್ರಿಯ ಚಾತುರ್ಯಕ್ಕೂ ಬಹಳ ವಾಗಿ ಸಂತೋಷವನ್ನೈದಿ ಈ ವರ್ತಮಾನವೆಲ್ಲವನ್ನು ತನ್ನ ಪುತ್ರಿಯೊಡನೆ ತಿಳಿಸಿ, ಆ ಅಳಿಯನ ಬರುವಿಕೆಯನ್ನೆ ಇದಿರು ನೋಡುತ್ತಾ ಪಟ್ಟಣವನ್ನೆಲ್ಲಾ ಅತ್ಯಂತ ರಮಣೀಯವಾಗಿ ಅಲಂಕರಿಸಿ ಅನೇಕ ಬಿಡಾರಗಳನ್ನು ಕಲ್ಪಿಸಿ ಬರುವಿಕೆಯನ್ನು ಈಕ್ಷಿಸುತ್ತಲಿದ್ದನು. ಅತ್ತಲಾ ಮಂತ್ರಿಸಹಿತನಾದ ಸತ್ಯಜಿತುವು ಭರದ್ವಾಜಾಶ್ರಮುವನ್ನೈದಿ, ಆ ಮಹಾಋಷಿಯನ್ನು ಕಂಡು ತನ್ನ ಭಾರ್ಯೆಯೊಡನೆ ತಾನೂ ಆ ಮುನಿಗೆ ನಮಸ್ಕರಿಸಿ ನಡೆದ ವೃತ್ತಾಂತವನ್ನೆಲ್ಲಾ ತಿಳುಹಲಾಗಿ ಮುನಿವರ್ಯನು ಇವರಂ ಸಂತೈಸಿ, ಎಲೈ ರಾಜಪುತ್ರನೇ ಇಹಲೋಕದಲ್ಲಿ ಕೀರ್ತಿಯನ್ನು ಪರದಲ್ಲಿ ವಿಷ್ಣು ಸಾಮಿಪ್ಯವನ್ನು ಪಡೆದು ಸುಖಿಯಾಗಿರೆಂದು ಹರಸಿ, ಇನ್ನು ನಿನ್ನಿಷ್ಟ ಬಂದ ಸ್ಥಳಕ್ಕೆ ಪೋಗೆಂದಾಜ್ಞೆಯನ್ನಿತ್ತನು. ತರುವಾಯ ಸತ್ಯಜಿತುವು ಮುನಿಯ ಅಪ್ಪಣೆಯಂ ಸ್ವೀಕರಿಸಿ ಆತಂಗೆ ಪತ್ನಿಸಮೇತನಾಗಿ ನಮಸ್ಕರಿಸಿ, ಅಲ್ಲಿಂದ ಹೊರಟುಬರುತ್ತಿರಲಾಗಿ ಕಳಿಂಗ ಭೂಪಾಲಕನು ಅಳಿಯಮುಂತಾದವರನ್ನು ಮಾರ್ಗದಲ್ಲಿಯೇ ಎದುರುಗೊಂಡು ಅಳಿಯನನ್ನಾಲಿಂಗಿಸಿ ಆತನನ್ನು ಬಹಳವಾಗಿ ಸ್ತುತಿಸಿ, ತನ್ನ ಜೊತೆಯಲ್ಲಿಯೇ ಕರೆದುಕೊಂಡು ಪುರವನ್ನು ಪ್ರವೇಶಿಸಿ ಅತ್ಯುತ್ತಮವಾದ ಬಿಡಾರದಲ್ಲಿಳಿದು, ಚಂದ್ರರೇಖೆಯನ್ನು ಸಾನಂದದಿಂ ಹೊಗಳಿ, ಆಕೆಯನ್ನು ತನ್ನ ಪುತ್ರಿಯ ಅಂತಃಪುರಕ್ಕೆ ಕಳುಹಿ ಲಗ್ನವನ್ನು ನಿಶ್ಚಯಿಸಿ ಶುಭಮುಹೂರ್ತದೊಳು ಅತ್ಯಂತ ವೈಭವದಿಂದ ವಿವಾಹ ಮಹೋತ್ಸವವನ್ನು ನಡೆಸಿ, ಪರಮಾನಂದಭರಿತನಾಗಿ ಸುಖದಲ್ಲಿದ್ದನು.

ವಿವಾಹವಾದ ಐದನೇ ದಿವಸದ ರಾತ್ರಿ ಚಂದ್ರಮುಖಿಯು ಶಯ್ಯಾಗೃಹವನ್ನು ಸೇರಿ, ತನ್ನ ಪ್ರಾಣವಲ್ಲಭನಾದ ಪತಿಗೆ ನಮಸ್ಕಾರವನ್ನು ಮಾಡಿ, ಎಲೈ ಪ್ರಾಣೇಶನೇ ನನ್ನನ್ನು ಪಟ್ಟಮಹಿಷಿಯನ್ನಾಗಿ ನೀನು ಸ್ವೀಕರಿಸಬಹುದೋ ? ಅಥವಾ ಅದಕ್ಕೇನಾದರೂ ಲೋಪವೋ ? ಈ ಅಂಶವನ್ನು ಪೇಳಬೇಕೆಂದು ಕೇಳಲಾಗಿ ಆ ಸತ್ಯಜಿತುವು, ಎಲೈ ಶೋಭನಾಂಗಿಯೇ ಈ ವಿಷಯದೊಳು ನಾನು ಪೂರ್ವದಲ್ಲಿ ಮಂತ್ರಿಪುಂಗವನಾದ ಸುನೀತಿಗೆ ವಾಗ್ದಾನವನ್ನು ಮಾಡಿರುವೆನು, ಅಹಾ ! ನಿನ್ನ ನಿಮಿತ್ತದಿಂದ ಬಹುವಿಧವಾದ ಕಷ್ಟಗಳನ್ನನುಭವಿಸಿ, ಈಮೂಲಕದಿಂದ ಮಹಾಋಷಿಯ ಸಂದರ್ಶನವು, ಅನೇಕ ದೇವತಾರಹಸ್ಯ

ಗಳು ಬಹುವಿಧವಾದ ಅಸ್ತ್ರಶಸ್ತ್ರಗಳ ಮಂತ್ರಂಗಳು ಇವುಗಳೆಲ್ಲವೂ ಪ್ರಾಪ್ತ ವಾದವು ಸರ್ವಾಂಗ ಸುಂದರತ್ವದಿಂದ ಕೂಡಿರುವ ನಿನ್ನ ಯೌವನವು ನನ್ನನ್ನು ಭಿಕ್ಷಗಾರನಂತೆ ಮಾಡಿತೆಂದುಸುರಿ ನಡೆದ ವೃತ್ತಾಂತವನ್ನೆಲ್ಲಾ ಅವಳಿಗೆ ತಿಳುಹಿ ಆ ಈರ್ವರು ಭಾರ್ಯೆಯರೊಡನೆ ಕೆಲವುಕಾಲ ಸುಖವನ್ನನುಭವಿಸುತ್ತಾ ಆರು ತಿಂಗಳ ಪರ್ಯಂತರವು ಅಲ್ಲಿಯೇ ಇದ್ದು ತರುವಾಯ ಈರ್ವರು ಮಾವಂದಿರು ಕೊಟ್ಟ ಚತುರಂಗಬಲವನ್ನು ದಾಸ ದಾಸೀಜನಗಳನ್ನೂ ಅನೇಕ ವಸ್ತ್ರಾಭರಣ ಗಳನ್ನೂ ತೆಗೆದುಕೊಂಡು ಸುನೀತಿ ಎಂಬ ಮಂತ್ರಿಯ ಪುತ್ರರಲ್ಲಿ ಬುದ್ಧಿಶಾಲಿ ಯಾದ ಧರ್ಮನೀತಿ ಎಂಬುವನನ್ನು ತನ್ನ ಮಂತ್ರಿಯನ್ನಾಗಿ ನಿಯಮಿಸಿಕೊಂಡು ಆತನನ್ನೂ ಮತ್ತು ತನ್ನ ಉಭಯ ಭಾರ್ಯೆಯರನ್ನೂ ಕರೆದುಕೊಂಡು ತನ್ನ ಜನ ಪುರವಂ ಕುರಿತು ಬರುತ್ತಾ, ತನ್ನ ಬರುವಿಕೆಯನ್ನು ತನ್ನ ತಂದೆತಾಯಿಗಳಿಗೆ ವರ್ತಮಾನ ಕೊಟ್ಟಿರಲು, ಆ ಜನನೀಜನಕರು ಅತ್ಯಾನಂದಪರವಶರಾಗಿ ಅನೇಕ ವಾದ ಮಂಗಳವಾದ್ಯಗಳೊಡನೆ ಪುತ್ರನಂ ಎದುರುಗೊಂಡು ತಮಗೆ ನಮಸ್ಕರಿ ಸಿದ ಪುತ್ರನ್ನೂ, ಸೊಸೆಯರನ್ನೂ ಆಲಿಂಗಿಸಿ, ಮುದ್ದಿಸಿದವರಾಗಿ ಮಗನನ್ನು ಕುರಿತು, ಎಲೈ ಕಂದಾ! ನೀನು ಭೂಸಂಚಾರಕ್ಕೋಸ್ಕರ ಹೊರಟುಹೋದಾ ರಭ್ಯ ಇಂದಿನವರೆಗೂ ನಡೆದ ವೃತ್ತಾಂತವನ್ನೆಲ್ಲಾ ಕ್ರಮವಾಗಿ ತಿಳುಹಬೇಕೆಂದು ಕೇಳಲಾಮಾತಿಗೆ ಸತ್ಯಜಿತುವು ತಾನು ಹೊರಟಾರಭ್ಯದಿಂದ ನಡೆದ ಸಮಾಚಾರ ಗಳನ್ನೆಲ್ಲಾ ತಿಳಿಸಿ, ಇವಳು ಚಂದ್ರರೇಖೆಯೆಂತಲೂ, ಅವಳು ಚಂದ್ರಮುಖಿ ಎಂಬದಾಗಿಯೂ ಹೇಳಲಾಗಿ, ಆತಂದೆತಾಯಿಗಳು ಬಹುಪ್ರಕಾರದಿಂದ ಸಂತೋ ಷವನ್ನೈದಿ, ಭರದ್ವಾಜ ಮಹರ್ಷಿಯನ್ನು ಬಹಳವಾಗಿ ಸ್ತುತಿಸಿ, ಪುತ್ರನಿಗೆ ರಾಜ್ಯಾಭಿಷೇಕವನ್ನು ಅತಿಸಂಭ್ರಮದಿಂದ ಮಾಡಿಸಿದವರಾದರು.

ತರುವಾಯ ಸತ್ಯಜಿತು ಮಹಾರಾಯನು ಧರ್ಮದಿಂದ ರಾಜ್ಯವನ್ನು ಪರಿ ಪಾಲಿಸುತ್ತಾ, ತನ್ನ ಭುಜಬಲ ಪರಾಕ್ರಮದಿಂದ ಸಮಸ್ತದೇಶಗಳನ್ನು ಜಯಿಸಿ ಸಕಲ ರಾಜರುಗಳನ್ನು ತನ್ನ ಕೈಕೆಳಗೆ ತೆಗೆದುಕೊಂಡು ರಾಜಾಧಿರಾಜನೆನಿಸಿ ಕೊಂಡು ಭೂಮಂಡಲವನ್ನೆಲ್ಲಾ ಪಾಲಿಸುತ್ತಾ ತಂದೆತಾಯಿಗಳನ್ನು, ಯೋಗಿ ಗಳನ್ನೂ, ಜ್ಞಾನಿಗಳನ್ನೂ ಪೂಜಿಸುತ್ತಾ ಧರ್ಮವನ್ನು ನಾಲ್ಕು ಪಾದಗಳಮೇಲೆ ನಿಲ್ಲಿಸಿ, ಅನೇಕದಿವಸಗಳು ರಾಜ್ಯಭಾರವಂ ವಹಿಸಿ ದೇಹಾಂತರದಲ್ಲಿ ಸಾಕ್ಷಾತ್ ಶ್ರೀವೈಕುಂಠ ನಿಕೇತನನಾದ ಪರಬ್ರಹ್ಮನ ಸಾಯುಜ್ಯವನ್ನೈದಿವನು ಎಂದು ಶ್ರೀ ಕೃಷ್ಣನು ಹೇಳಲಾಗಿ ತದೇಕಾಯತ್ತ ಚಿತ್ತನಾಗಿ ಕೇಳಿದ ಪಾರ್ಥನು ಮಹದಾ ಶ್ಚರ್ಯವನ್ನು ಹೊಂದಿ ಎಲೈ ಭಗವಂತನೇ! ಅತ್ಯಂತ ಪಾವನಮಾದ ಈ ಚರಿತ್ರೆಯಂ ಪೇಳಿದಂಥವನಾದೆ, ಇದರಿಂದ ನನ್ನ ಜನ್ಮವು ಸಾಫಲ್ಯವನ್ನೈದಿತು ಇನ್ನು ಬಹಳವಾದ ನಿದ್ರೆಯು ಬಾಧಿಸುತಲಿರುವುದರಿಂದ ಮಲಗಿಕೊಳ್ಳೋ

ಣವೆಂದು ಪ್ರಾರ್ಥಿಸಲಾಗಿ ಆ ಮಾತಿಗೆ ಭಗವಂತನು ಸಮ್ಮತಿಸಿ ಆ ಸೈಕತ ಭೂಮಿಯಲ್ಲೀರ್ವರೂ ಸುಖನಿದ್ರಾನುಭವದೊಳಿರುತ್ತಿದ್ದರು.

ಮೊದಲನೆಯ ಕಥೆ ಸಮಾಪ್ತಂ.



॥ ಶ್ರೀರಸ್ತು ॥

॥ ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ. ॥



## ಶಶಿಬಿಂದುವೆಂಬ ಎರಡನೆ ರಾಜಪುತ್ರನ ಕಥೆ.



ಎರಡನೆ ದಿವಸದ ರಾತ್ರಿ ಕೃಷ್ಣಾರ್ಜುನರಿಬ್ಬರೂ ಯಮುನಾನದಿತೀರದಲ್ಲಿರುವ ಮರಗಳು ದಿಣ್ಣೆಗಳಮೇಲೆ ಕುಳಿತುಕೊಂಡು, ಭೋಜನಾದಿಗಳಂ ತೀರಿಸಿದವರಾಗಿ, ತಾಂಬೂಲಮಂ ಸವಿಯುತ್ತಾ ದಿವ್ಯತರವಾದ ಪರಿಮಳವನ್ನು ಮೈಗಳಿಗೆ ಪೂಸಿಕೊಂಡು, ವಿಧವಿಧವಾದ ಸರಸಲ್ಲಾಪಗಳನ್ನಾಡುತ್ತಾ, ಶ್ರೀಕೃಷ್ಣನನ್ನು ಕುರಿತು, ಅರ್ಜುನನು ಇಂತೆಂದನು,—ಓ ಪುರುಷೋತ್ತಮಾ? ಮೋಕ್ಷಸಾಧನವಾದ ವೇದಾಂತಸಾರಗಳಲ್ಲಿ ಎರಡನೇ ವಿಧವಾದ ಛಾಯಾಪುರುಷ ಲಕ್ಷಣವನ್ನು ನನಗೆ ಚೆನ್ನಾಗಿ ತಿಳಿಯುವಂತೆ ಒಂದು ವಿಚಿತ್ರವಾದ ಕಥೆಯನ್ನು ಪೇಳಿ ಕೃತಾರ್ಥನನ್ನಾಗಿ ಮಾಡಬೇಕೆಂದು ಬಿನ್ನವಿಸಲಾಗಿ, ಆ ದೇವಕೀನಂದನನು ಮಂದಸ್ಮಿತ ಮುಖಾರವಿಂದವುಳ್ಳವನಾಗಿ, ಕೇಳೈ ಇಂದ್ರನಂದನನೇ! ಪೂರ್ವದಲ್ಲಿ ಶಶಿಬಿಂದುವೆಂಬ ಓರ್ವ ರಾಜೋತ್ತಮನಿದ್ದನು. ಆ ಮಹಾರಾಯನ ಕಥೆಯಂ ಲಾಲಿಸುವವನಾಗೆಂದು ಪೇಳಲಾರಂಭಿಸಿದನು,—

ಕೇಳೈ ಅರ್ಜುನನೇ! ಪೂರ್ವದಲ್ಲಿ ವಾರಣಾವತೀ ಪಟ್ಟಣವನ್ನು ಸೂರ್ಯಬಿಂದು ಮಹಾರಾಯನೆಂಬುವನು ಪರಿಪಾಲಿಸುತ್ತಿದ್ದನು. ಆತಂಗೆ ಶಶಿಬಿಂದುವೆಂಬೋರ್ವ ಸುಕುಮಾರನು ಜನಿಸಿದನು. ಆ ರಾಜನ ಮಂತ್ರಿಶಿಖಾಮಣಿಗೆ ನೀತಿಮಂತನೆಂಬ ಮಗನಿದ್ದನು. ಈ ರಾಜಮಂತ್ರಿಗಳ ಪುತ್ರರೀರ್ವರೂ ಬಾಲ್ಯಸ್ನೇಹಿತರಾಗಿ ಸಮಸ್ತ ವಿದ್ಯಾಭ್ಯಾಸವನ್ನು ಮಾಡುತ್ತಾ, ಧನುರ್ವಿದ್ಯಾ ಕೌಶಲ್ಯವನ್ನು ಸಂಪಾದಿಸಿ, ಹದಿನಾರು ವರುಷದ ಯೌವನಸ್ಥರಾಗಿ ಒಂದಾನೊಂದು ದಿವಸ ಈರ್ವರೂ ಭೂಸಂಚಾರ ಮಾಡಬೇಕೆಂದಾಲೋಚನೆಯಂ ಮಾಡಿ ತಮಗೆ ಬೇಕಾದ ಧನಕನಕ ವಸ್ತ್ರಾಭರಣಂಗಳನ್ನು ತೆಗೆದುಕೊಂಡು ತಂದೆತಾಯಿಗಳಿಗೆ ತಮ್ಮ ಪಯಣದ ಸುದ್ಧಿಯನ್ನು ತಿಳಿಯಪಡಿಸದೆ, ಅರ್ಧರಾತ್ರಿಯ ಸಮಯದಲ್ಲಿ ಕುದುರೆಗಳನ್ನು ಹತ್ತಿಕೊಂಡು ಉತ್ತರ ದಿಗ್ಗಮನವುಳ್ಳವರಾಗಿ, ಹೋಗುತ

ದ್ದರು ಬಳಿಕ ವಾರಣಾಧಿಪನು, ಆತನ ಮಂತ್ರಿಯು, ತಮ್ಮ ಮಕ್ಕಳನ್ನು ಣದೆ ನಾಲ್ಕು ದಿಕ್ಕುಗಳಿಗೂ, ದೂತರನ್ನು ಕಳುಹಿಸಿ ಹುಡುಕಿಸುತಲಿದ್ದರು. ತ್ತಲಾ ಶಶಿಬಿಂದುವು ಮತ್ತು ನೀತಿಮಂತನೂ ಘೋರವಾದ ಅರಣ್ಯಗಳಲ್ಲಿ ್ಯಾಘ್ರ, ಭಲ್ಲೂಕ ಮೊದಲಾದ ದುಷ್ಟ ಮೃಗಗಳನ್ನು ಸಂಹರಿಸುತ್ತಾ ವನಗ ಲ್ಲಿರುವ ರಸಭರಿತವಾದ ಫಲಗಳನ್ನು ಭಕ್ಷಿಸುತ್ತಾ, ಉದಕವನ್ನು ಪಾನ ಾಡುತ್ತಾ, ಚಂಪಕವೃಕ್ಷಗಳ ಕೆಳಗೆ ಕುಳಿತುಕೊಂಡು ವಿಶ್ರಾಂತಿ ಮಾಡಿ ೊಳ್ಳುತ್ತಾ, ಕೆರೆಗಳಲ್ಲಿ ಈಜಾಡುತ್ತಾ ಕೆಲವು ದಿವಸಗಳಿಗೆ ವಿಂಧ್ಯಾಟವೀಪ್ರಾಂ ವನ್ನು ಸೇರಿ, ಅಲ್ಲಿ ರಾಜನಂದನನು ಸೂರ್ಯಕಿರಣಗಳ ಝಳಕ್ಕೆ ಬಳಲಿದವನಾಗಿ ಮಾಲವೃಕ್ಷದ ನೆರಳಲ್ಲಿ ಕುಳಿತುಕೊಂಡು ಅತ್ಯಂತ ದಾಹದಿಂದ ಪೀಡಿತನಾಗಿ ಪ್ರನಾದ ಮಂತ್ರಿಪುತ್ರನನ್ನು ನೋಡಿ, ಅಯ್ಯೆ ಅನುಜನೇ ! ನನಗೆ ಬಹಳವಾಗಿ ಾಹವುಂಟಾಗಿರುವದು ಇದರ ಶಮನಕ್ಕಾಗಿ ನೀನು ಎಲ್ಲಿಯಾದರೂ ಹೋಗಿ ಾನಯೋಗ್ಯವಾದ ಜಲವನ್ನು ಶೀಘ್ರದೊಳು ತೆಗೆದುಕೊಂಡು ಬಾ ಎನಲು, ೀತಿಮಂತನು ನೀರನ್ನು ಹುಡುಕುತ್ತಾ ಸ್ವಲ್ಪದೂರ ಹೋಗಿ ಒಂದು ಬಿಲವನ್ನು ಂಡು ಧೈರ್ಯವನ್ನು ತಾಳಿ ಆ ಬಿಲದ ಒಳಹೊಕ್ಕು ಹೋಗುತ್ತಾ ಬರಲು, ಅಲ್ಲಿ ೊಷ್ಟವಾದ ಬೆಳಕು ಕಾಣಬರಲು, ಅದನ್ನು ನೋಡಿ ಭಯಗ್ರಸ್ತನಾಗಿ ಓಹೋ ಂಥಾ ಬೆಳಕು ಇಲ್ಲಿರಲು ಕಾರಣವೇನು ? ಇದನ್ನು ನೋಡಿ ಭಯದಿಂದ ಂತಿರುಗಿ ಹೋಗುವದು ಭೃತ್ಯನಾದ ನನಗೆ ನ್ಯಾಜವಾಗಿರುವುದಿಲ್ಲ. ಪುಣ್ಯ ಂತರಾದ ಮಹಾಪುರುಷರ ಅಗ್ನಿಕುಂಡಗಳಲ್ಲಿ ಹೋಮಾರ್ಥವಾಗಿ ಪ್ರಜ್ವಲಿ ುವ ಅಗ್ನಿ ಛಾಯೆಗಳೇ ಇರಬಹುದೆಂದು ಭಾವಿಸಿ ಮೆಲ್ಲಮೆಲ್ಲನೆ ಮುಂದಕ್ಕೆ ೆಜ್ಜೆ ಇಡುತ್ತಾ ಬರುತ್ತಿರಲು ಅಲ್ಲಿ ಒಬ್ಬಾನೊಬ್ಬ ನಾರೀಮಣಿಯು ಈತನಂ ಂಡು ಎಲೈ ಮನುಜನೇ ? ನೀನೀ ಬಿಲದ್ವಾರದಲ್ಲಿ ಏಕಾಂಗಿಯಾಗಿ ಬರ ಹುದೇ ? ಎಂದು ನುಡಿಯುತ್ತ ಮಂತ್ರಯುಕ್ತವಾದ ಕೊಂಚ ಜಲವನ್ನಾ ನಮೇಲೆ ಎರಚಲಾಗಿ ನೀತಿಮಂತನು ಕಪಿಯಾದನು. ಈ ಸಂಗತಿಯನ್ನಾಕೆಯು ನ್ನ ಒಡತಿಯಾದ ಸಂಪೂರ್ಣಚಂದ್ರಿಕೆಗೆ ತಿಳುಹಿ ನೋಡಿಸಿದವಳಾಗಿ ಪೂರ್ವ ಲ್ಲಿ ಕಟ್ಟಿಹಾಕಿದ್ದ ನಾಯಿ, ಕೋತಿ ಇವುಗಳ ಸಂಗಡ ಈ ನವೀನ ನೀತಿಮಂತ ೋತಿಯನ್ನೂ ಕಟ್ಟಿಹಾಕಿದಳು.

ಅತ್ತಲಾ ಶಶಿಬಿಂದುವು ಬಹಳ ಹೊತ್ತು ನೀತಿಮಂತನ ಬರುವಿಕೆಯನ್ನು ೋಡುತ್ತಾ ಅವನು ಬಾರದೆ ಇರಲಾಗಿ, ಅಲ್ಲಿದ್ದ ಒಂದಾನೊಂದು ನೆಲ್ಲೀಮರ ನ್ನು ಕಂಡು ಇದರ ಫಲಗಳಿಂದಲಾದರೂ ನೀರಡಿಕೆಯನ್ನು ತೀರಿಸಿಕೊಳ್ಳೋಣ ೆಂದು ಯೋಚಿಸಿ ಆ ಫಲಗಳಂ ಕಿತ್ತುಕೊಂಡು ಭಕ್ಷಿಸಿ ಅದರಿಂದ ದಾಹವನ್ನು ಡಗಿಸಿ, ಎಲೈ ತಮ್ಮಾ! ಎಂದು ನೀತಿಮಂತನನ್ನು ಕೂಗುತ್ತಾ ಹತ್ತು

ದಿವಸಗಳವರೆಗೂ, ಆತನು ಹೋದ ದಾರಿಯನ್ನೆ ತಿಳಿಯದೆ ಕುಂಬಾ ವ್ಯಸನ ಪಡುತ್ತಾ ಅವನ ಕುದುರೆಯನ್ನು ತನ್ನ ಕುದುರೆ ಹಿಂದೆ ನಡೆಸಿಕೊಂಡು ಬರುತ್ತ ಕೆಲವು ದಿವಸಗಳಿಗೆ ಒಂದು ನದೀಪ್ರವಾಹವನ್ನು ಕಂಡು, ಅದರ ತೀರದಲ್ಲಿಯೇ ಹೋಗುತ್ತಾ ಆ ಪ್ರವಾಹದಲ್ಲಿ ಕೊಚ್ಚಿಕೊಂಡು ಬರುತ್ತಲಿದ್ದ ಕೂದಲನ್ನು ನೋಡಿ, ಅದನ್ನು ಹಿಡಿದುಕೊಂಡು ಆಶ್ಚರ್ಯವನ್ನು ಹೊಂದಿ ಇದನ್ನು ನೋಡಿದರೆ ಹೆಂಗಸಿನ ಕೂದಲಿನಂತಿರುವದು. ಲೋಕದಲ್ಲಿ ಸ್ತ್ರೀಯರಿಗೆ ಕೂದಲಿನ ಮೇಲೆ ನುಮತೆಯಿರುವುದು ಜಗತ್ಪ್ರಸಿದ್ಧವಾಗಿದೆ, ಇಂಥಾ ಕೂದಲುಳ್ಳ ನಾರೀ ಮಣಿಯ ಸೌಂದರ್ಯವನ್ನೆಷ್ಟು ವರ್ಣಿಸಬಹುದು ? ಇದರ ವೃತ್ತಾಂತವನ್ನು ಯಾರಿಂದ ತಿಳಿಯಲಿ ! ಎಂದು ಬಹಳವಾಗಿ ದುಃಖಿಸುತ್ತಾ ಕೆಲವು ಕಾಲದ ಮೇಲೆ ಭಾಸ್ಕರಋಷಿಯೆಂಬ ಮಹಾಮುನಿಯಂ ಕಂಡು ಆ ಮುನಿಯ ಪಾದ ಕಮಲಗಳಿಗೆರಗಿ ಶುಶ್ರೂಷೆಯನ್ನು ಮಾಡುತ್ತಾ, ಆತನ ಸಮೀಪದಲ್ಲಿಯೇ ಇರುತ್ತ ಲಿದ್ದನು. ಈ ಪ್ರಕಾರ ಕೆಲವು ದಿವಸಗಳನ್ನು ಕಳೆದಾಗ್ಯೂ ವ್ಯಸನವನ್ನು ಮಾತ್ರ ತಪ್ಪದೆ ಅನುಭವಿಸುತ್ತಿರಲಾಗಿ, ಒಂದಾನೊಂದು ದಿವಸ ಆ ಭಾಸ್ಕರ ಮಹರ್ಷಿಯು ರಾಜಪುತ್ರನಂ ಕುರಿತು, ಎಲೈ ನೃಪನಂದನಾ ! ನೀನು ತಂದೆ ತಾಯಿಗಳನ್ನು ತ್ಯಜಿಸಿ, ಪಟ್ಟಣವನ್ನು ಬಿಟ್ಟು, ಏಕಾಂಗಿಯಾಗಿ ಬಂದು ಅಂತ ದುಃಖವುಳ್ಳವನಾಗಿರುವುದಕ್ಕೆ ಕಾರಣವೇನು ? ವಿಸ್ತರಿಸಿ ತಿಳುಹಿಸೆನಲು, ಆ ಮಾತಿಗೆ ರಾಜಪುತ್ರನು ತಾನು ಕಷ್ಟಪಟ್ಟುಕೊಂಡು ಬಂದ ಸಮಾಚಾರವನ್ನೂ ಮತ್ತು ಮಂತ್ರಿಪುತ್ರನ ವಿಯೋಗವನ್ನೂ ಕ್ರಮವಾಗಿ ಹೇಳಿ, ಬಳಿಕಲಾ ಕೂದ ಲನ್ನು ತೆಗೆದು ಋಷಿಶ್ರೇಷ್ಠನಮುಂದೆ ತೋರಿಸಿ, ಇದರ ವೃತ್ತಾಂತವನ್ನೆನಗರು ಹಬೇಕೆಂದು ಹಲವುಬಗೆಯಾಗಿ ದುಃಖಿಸುತ್ತಿರುವ ರಾಜನಂದನನನ್ನು ನೋಡಿ, ಮುನಿವರ್ಯನು ಮುಗುಳುನಗೆಯುಳ್ಳವನಾಗಿ, ಎಲೈ ರಾಜತನಯನೇ ! ಮಂತ್ರಿ ಪುತ್ರನ ವಿಯೋಗದುಃಖವನ್ನೇ ತಡೆಯದ ನೀನು ಈ ಕೂದಲಿನ ನಿಜವಾದ ವೃತ್ತಾಂತವನ್ನು ತಿಳಿಸಿದಮೇಲೂ ಹೇಗೆ ಪ್ರಾಣಗಳನ್ನುಳಿಸಿಕೊಂಡಿರುವೆಯೋ ? ಎನಲು ಅದಕ್ಕೆ ಮುನೀಂದ್ರನೇ ! ನಾನು ಕ್ಷತ್ರಿಯ ಕುಲೋತ್ಪನ್ನನಾಗಿ ಇಂಥ ವಿಚಾರವನ್ನು ಮಾಡದಿದ್ದರೆ ರಾಜಧರ್ಮವಲ್ಲ ಆದಕಾರಣ, ಈ ಸಂಗತಿಯನ್ನು ವಿಶದವಾಗಿ ಎನಗೆ ತಿಳುಹಬೇಕೆಂದು ಆತನ ಪಾದಕಮಲಗಳಮೇಲೆ ಬಿದ್ದು ಪ್ರಾರ್ಥಿಸುತ್ತಲಿರುವುದನ್ನು ನೋಡಿ, ಋಷಿಯು ಕರುಣವನ್ನು ತಾಳ್ದು, ಕೇಳೈ ಪೊಡವಿಪಾಲಾತ್ಮಜನೇ ! ಪೂರ್ವದಲ್ಲಿ ಉಲೂಪಿಯೆಂಬ ದೇವಕನ್ನೆಗೂ ಮರುತ್ತ ರಾಯನೆಂಬ ಕ್ಷತ್ರಿಯೋತ್ತಮನಿಗೂ ವಿಂಧ್ಯಪರ್ವತದಲ್ಲಿ ಗಾಂಧರ್ವವಿವಾಹಾಂತರದಿಂದ ಸಂಗಮ ಉಂಟಾಯಿತು. ಆ ಕ್ಷಣದಲ್ಲಿಯೇ ದೇವಭಾಮಿನಿಯು ಗರ್ಭವಂ

ಧರಿಸಿ ಒಂಭತ್ತು ಘಳಿಗೆಗಳ ಕಾಲದಲ್ಲಿಯೇ ಕೋಟಿಸೂರ್ಯಪ್ರಕಾಶವುಳ್ಳ ಪುತ್ರಿಕಾರತ್ನವನ್ನು ಪ್ರಸವಿಸಿದಳು.

ತರುವಾಯ ಮರುತ್ತಮಹಾರಾಯನು ಉಲೂಪಿಯನ್ನು ಕುರಿತು, ಎಲೈ ಪ್ರಾಣನಾಯಕೀ ? ಈ ಶಿಶುವನ್ನು ನೀನೇ ಪೋಷಿಸಿಕೊಂಡು ಸುಖಿಯಾಗಿರೆಂದು ಆಕೆಯನ್ನೊಡಂಬಡಿಸಿ, ತನ್ನ ಪಟ್ಟಣಕ್ಕೆ ತೆರಳಿದನು. ಅನಂತರ ಉಲೂಪಿಯು ಇಂದ್ರನ ಶಾಪಕ್ಕೆ ಭಯಪಟ್ಟು ದೇವಲೋಕಕ್ಕೆ ತಾನು ಹೋಗುವುದು ಉಚಿತ ವಲ್ಲವೆಂದು ಭಾವಿಸಿ, ದಿವ್ಯಸುಂದರಾಂಗಿಯಾದ ಪುತ್ರಿಯನ್ನು ಅಗಲಿ ಹೋಗಲು ಕಾಲುಗಳು ಬಾರದೆ ಆ ಶಿಶುವಿನ ಮೇಲಣ ವ್ಯಾಮೋಹದಿಂದ ಆ ಪರ್ವತಮಧ್ಯ ದಲ್ಲಿ ಅನೇಕ ದಿವ್ಯರತ್ನಪ್ರಭೆಗಳ ಕಾಂತಿಯೋಪಾದಿಯಲ್ಲಿ ಪ್ರಕಾಶಿಸುತಲಿರುವ ಒಂದು ಬಿಲವಂ ನಿರ್ಮಾಣಮಾಡಿ, ಶಿಶುವಂ ಸಂರಕ್ಷಿಸುವುದಕ್ಕೆ ಮೂರು ಜನ ದಾಸಿಯರನ್ನು ನಿರ್ಮಿಸಿ, ಸಂಪೂರ್ಣಚಂದ್ರಿಕೆಯೆಂದು ಅವಳಿಗೆ ಹೆಸರಿಟ್ಟು ತಾನು ಅಲ್ಲಿಂದ ದೇವಲೋಕಕ್ಕೆ ಹೋಗಿ ಆಗಾಗ್ಗೆ ಆ ಬಿಲದ್ವಾರದೊಳಕ್ಕೆ ಬಂದು ವಿಚಾರಣೆ ತೆಗೆದುಕೊಳ್ಳುತ್ತಲಿದ್ದಳು. ಬಳಿಕಲಾ ಸಂಪೂರ್ಣಚಂದ್ರಿ ಕೆಯು ದಿನದಿನಕ್ಕೆ ಅಭಿವೃದ್ಧಿಯನ್ನೈದುತ್ತಾ ದಿವ್ಯತರವಾದ ಸೌಂದರ್ಯವತಿ ಯಾಗಿ ತಾನು ಮಾನುಷಶರೀರಧಾರಿಗಳಂ ಪಾಣಿಗ್ರಹಣ ಮಾಡಿಕೊಳ್ಳುವುದಿಲ್ಲ ವೆಂದು ಶಪಥವನ್ನು ಮಾಡಿ, ತನ್ನ ದಾಸಿಯರನ್ನು ಕುರಿತು ಇತಃಪರ ಈ ನಮ್ಮ ಬಿಲಕ್ಕೆ ಪ್ರವೇಶಿಸುವ ಮನುಜರನ್ನು ಕೋತಿಗಳನ್ನಾಗಿಯೂ ನಾಯಿಗಳನ್ನಾ ಗಿಯೂ ನೀವು ಮಾಡುತ್ತಿರಬೇಕೆಂದು ಆಜ್ಞಾಪಿಸಿದಳು. ಬಳಿಕ ಸೇವಕರು ಒಡತಿಯ ಅಪ್ಪಣೆಯಂತೆಯೇ ಅಲ್ಲಿ ಬಂದ ಮಾನವರಂ ನಾಯಿ, ಕೋತಿಗಳಾಗಿ ಮಾಡಿ, ಬಹಳವಾಗಿ ಕಟ್ಟಿಹಾಕಿಕೊಂಡಿದ್ದರು. ಕೇಳೈ ರಾಜತನಯನೇ ! ನಿನ್ನ ಸಖನಾದ ಮಂತ್ರಿತನಯನು ಆ ಬಿಲದೊಳು ಸಿಕ್ಕಿರಬಹುದಾಗಿ ತೋರುತ್ತದೆ, ಮತ್ತು ಆ ಸಂಪೂರ್ಣಚಂದ್ರಿಕೆಯು ಸ್ನಾನಮಾಡುವ ಸಮಯದಲ್ಲಿ ನಿನ್ನ ಕೈಗೆ ಸಿಕ್ಕಿರುವ ಈ ಕೂದಲು ತಪ್ಪಿಸಿಕೊಂಡು ಬಂದಿರುವದೆಂದು ಮುನಿಯು ಪೇಳ ಲಾಗಿ ತಕ್ಷಣವೇ ಶಶಿಬಿಂದುವು ಓ ಸಂಪೂರ್ಣಚಂದ್ರಿಕೆಯೇ ? ಎಂದು ಅವಳಂ ಧ್ಯಾನಿಸುತ್ತ ಮೂರ್ಛೆಯನ್ನು ಹೊಂದಿದನು. ಆಗಲಾ ಮುನಿವರ್ಯನು ಆತನ ಮೇಲಣ ಪ್ರೀತಿಯಿಂದ, ಅವನ ಮೂರ್ಛೆಯನ್ನು ಸಂತೈಸಿ ನೈದಡವಿ, ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡು, ಎಲೈ ಅವನೀಂದ್ರ ಪುತ್ರನೇ ! ನಿನ್ನಲಿರುವ ಶೂರತ್ವವು ಈಗ ಎಲ್ಲಿ ಹೋಯಿತು ? ಲೋಕದಲ್ಲಿ ಧೀರರಾದವರು ಈ ಪ್ರಕಾರ ಮನಗುಂದಿ ಮೂರ್ಛೆಯನ್ನು ಪಡೆಯುವರೆ ? ಎಂದು ಧೈರ್ಯವನ್ನು ಹುಟ್ಟಿಸಲಾಗಿ ರಾಜಪುತ್ರನು ಮುನಿಯಪಾದಗಳಿಗೆರಗಿ ಎಲೈ ಮುನಿಯೇ ನನ್ನನ್ನು ಅಗಲಿರುವ ಮಂತ್ರಿತನಯನು ನನಗೆ ಸಿಕ್ಕುವಹಾಗೂ, ಆ ಸಂಪೂರ್ಣಚಂದ್ರಿಕೆಯು ನನ್ನನ್ನೇ

ವರಿಸುವಹಾಗೂ ವರವನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಲಾಗಿ, ಮುನಿಯು, ಎಲೈ ರಾಜತನಯನೇ ! ಶರೀರಭಂಗವನ್ನು ಮರಣವನ್ನು ತಾನು ಸುಲಭವಾಗಿ ತಿಳಿದುಕೊಳ್ಳಬಹುದಾದಂಥ ಛಾಯಾಪುರುಷನ ಲಕ್ಷಣವೆಂಬು ದೊಂದು ದೇವರಹಸ್ಯವಿರುವುದು, ದೃಕ್ಕನ್ನು ನಿಲ್ಲಿಸಿ ದೃಶ್ಯವಾದ ಛಾಯಾಪುರು ಷನಂ ನೋಡಿ, ಅಂಥಾ ಪುರುಷನಲ್ಲಿರುವ ಲಕ್ಷಣಗಳಂ ಸರಿಯಾಗಿ ಹೇಳುವವ ನಾದರೆ ತರುವಾಯ ಯೋಚಿಸುವೆನೆಂದು ಹೇಳಲಾ ರಾಜಪುತ್ರನು, ಎಲೈ ಋಷಿ ಶ್ರೇಷ್ಠನೇ, ಆ ಲಕ್ಷಣವಂ ನನಗೆ ಉಪದೇಶಮಾಡಬೇಕೆಂದು ಪ್ರಾರ್ಥಿಸಲಾಗಿ ಮುನಿಯು ಹೇಳತೊಡಗಿದನು,—



ಶಶಿಬಿಂದುರಾಯನು.



ಭಾಸ್ಕರಮಹರ್ಷಿ.

## ಶಶಿಬಿಂದು ಮಹಾರಾಯನಿಗೆ ಭಾಸ್ಕರಮಹರ್ಷಿ ಹೇಳಿದ ಛಾಯಾಪುರುಷ ಲಕ್ಷಣ.

ಕೇಳೈ, ಪೊಡವಿಪಾಲಕ ತನಯನೆ ! ಸಕಾರ, ಓಕಾರವು; ಬಿಂದುವಿನಿಂದ ಸಹಿತವಾದ ಹಕಾರ ಈ ಉಭಯ ಹಂಸಾಕ್ಷರಗಳಿಂ ಅಚಲಸ್ವಭಾವದಿಂದ ಜಪಿಸುತ್ತಾ ಸೂರ್ಯನಿಗೆ ವಿಮುಖನಾಗಿ ನಿಂತುಕೊಂಡು, ನಿನ್ನ ಶರೀರ ಸಂಬಂಧ ವಾದ ಛಾಯೆಯನ್ನು ನಿಲ್ಲಿಸಿ, ದೃಷ್ಟಿಯು ಚಲನವಾಗದಂತೆ ಆಕಾಶವನ್ನು ನೋಡುವವನಾಗು, ಆ ಕಾಲದಲ್ಲಿ ಸಶರೀರದಿಂದಿರುವಂತೆ ಒಬ್ಬ ಛಾಯಾಪುರು ಷನು ಕಾಣಬರುವನು ಆ ಛಾಯಾಪುರುಷನಿಗೆ ಆ ಸಮಯದಲ್ಲಿ ತಲೆಯಿಲ್ಲದಿ ದ್ದರೆ ಆರುತಿಂಗಳೊಳಗೂ, ಕೈಗಳೂ ಶೂನ್ಯವಾಗಿದ್ದರೆ ಮೂರುತಿಂಗಳಲ್ಲಿಯೂ, ಪಾದಗಳು ಕಾಣದಿದ್ದರೆ ಒಂದು ತಿಂಗಳಲ್ಲಿಯೂ, ನೋಡುವವನಿಗೆ ಮೃತಿ

ಯುಂಟಾಗುವದು. ಮತ್ತು ಆ ಛಾಯೆಯು ಕೆಂಪುವರ್ಣದಿಂದ ಕಂಡುಬಂದರೆ ಸಾಮ್ರಾಜ್ಯಸುಖವು ಹಸುರು ಬಣ್ಣವಾಗಿದ್ದರೆ ಏಕಚಕ್ರಾಧಿಪತ್ಯವು, ಶುಭ್ರವಾಗಿರಲು ದೇಹಸೌಖ್ಯವು, ಕರೀವರ್ಣವಾಗಿದ್ದರೆ ವ್ಯಾಧಿಪೀಡೆಯು ದರಿದ್ರವು, ಮಚ್ಚೆಗಳಾಗಿ ಕಾಣಲು ಅಂಗಹೀನತೆಯು, ಉಂಟಾಗುವುದೆಂದು ಮುನಿವರ್ಯನು ನಿರೂಪಿಸಿ, ಎಲೈ ರಾಜನಂದನನೇ ! ಇದನ್ನು ನೀನು ಚೆನ್ನಾಗಿ ನೋಡಿ ಹೇಳುವನಾಗೆಂದು ಬೋಧಿಸಲು, ರಾಜಪುತ್ರನು ಚಂಚಲಶೂನ್ಯವಾದ ಸ್ಥೈರ್ಯಮಾನಸನಾಗಿ ಋಷಿಯು ಹೇಳಿದ ಮಂತ್ರವನ್ನು ನಿಂತುಕೊಂಡು ಜಪಿಸುತ್ತಾ, ಆ ಛಾಯಾಪುರುಷನನ್ನು ನೋಡಿ, ಮುನಿಯನ್ನು ಕುರಿತು, ಸ್ವಾಮಿಯೇ ! ಬಿಳುಪಿನ ಮೇಲೆ ಕೆಂಪು ಮತ್ತು ಹಳದಿಬಣ್ಣವುಂಟಾಗಿರುವಹಾಗೆ ಕಾಣುತ್ತಿರುವುದೆಂದು ಹೇಳಲಾಮಾತಿಗೆ ಮುನಿವರ್ಯನು ಸಂತೋಷಭರಿತನಾಗಿ ಕಂದಾ ! ನಿನಗೆ ಯಾವ ವಿಧವಾದ ತೊಂದರೆಯೂ, ಭಯವೂ ಸಂಭವಿಸುವುದಿಲ್ಲ. ಚತುಸ್ಸಮುದ್ರವಲಯಿತವಾದ ಭೂಮಂಡಲಕ್ಕೆಲ್ಲಾ ಒಡೆಯನಾಗಿರುವೆ, ಆದಕಾರಣ ನೀನು ಆ ಬಿಲವಂ ಪ್ರವೇಶಿಸಿದರೆ, ಅಲ್ಲಿ ನಿನ್ನಂ ಯಾರೆಂಮು ಕೇಳುವ ದೂತಿಯರ ಕೂಡ ನಾನು ದೇವದೂತನೆಂಬದಾಗಿ ಹೇಳಿ ಅಲ್ಲಿ ಪ್ರಕಾಶಿಸುವ ಬೆಳಕಿನೊಳು ನಿಂತುಕೊಂಡು ಎಲೈ, ಸಂಪೂರ್ಣಚಂದ್ರಿಕೆಯೇ ಬಾ ಎಂದು ಘಟ್ಟಿಯಾಗಿ ಕೂಗುವನಾಗು, ಬಳಿಕಾ ಆಕೆಯು ಬಂದು ನಿನ್ನ ವೃತ್ತಾಂತವನ್ನು ವಿಚಾರಿಸಿ, ನಿನ್ನನ್ನೇ ವರಿಸುವಳೆಂದು ಆಶೀರ್ವದಿಸಿ, ಆ ಬಿಲದ ಗುರುತನ್ನು ಹೇಳಿ ಕಳುಹಿವನೆಂದು ಶ್ರೀವಾಸುದೇವನು ನಿರೂಪಿಸಲಾಗಿ, ಪಾಂಡುನಂದನನು ಪರಮಸಂತೋಷವನ್ನು ಹೊಂದಿ, ಎಲೈ ದೇವನೇ ಯಾವ ಕಾಲದಲ್ಲಿ ಛಾಯಾಪುರುಷನನ್ನು ನೋಡಬೇಕೋ ಅದನ್ನು ತಿಳುಹಿಸಿ ತೋರಿಸಬೇಕೆಂದು ಪ್ರಾರ್ಥಿಸಲಾಗಿ ವಾಸುದೇವ ನಿಂತೆಂದನು—ಕೇಳು ಧರ್ಮಾನುಜನೇ ! ಬೆಳಿಗ್ಗೆ ೮ ಘಳಿಗೆ ಮೇಲೆ ೧೩ ಘಳಿಗೆ ಪರಿಯಂತರವೂ, ಸಾಯಂಕಾಲ ೨೦ ಘಳಿಗೆ ಮೇಲೆ ೨೫ ಘಳಿಗೆ ವರೆಗೂ, ರಾತ್ರಿ ಚಂದ್ರನ ಬೆಳದಿಂಗಳಲ್ಲೂ, ಹಗಲು ಸೂರ್ಯನ ಪ್ರಭೆಯೊಳಗೂ, ಚಂದ್ರಸೂರ್ಯರು ಉಣದ ದಿವಸ ದೀಪದ ಬೆಳಕಿನಲ್ಲಿಯೂ ನೋಡಬಹುದು ಆದರೆ ಮತ್ತೊಂದು ವಿಷಯವೇನೆಂದರೆ—ತನ್ನ ಛಾಯೆಯಲ್ಲಿ ದೃಷ್ಟಿಯನ್ನು ಚಲಿಸದಂತೆ ನಿಲ್ಲಿಸಿ ನೋಡಿದರೆ ತನ್ನ ಸುತ್ತಲೂ ಮಿಂಚಿನೋಪಾದಿಯಲ್ಲಿ ಒಂದು ಪ್ರಭೆಯುಳ್ಳ ಛಾಯೆಯು ಕಾಣಬರುವುದು. ಆ ದೃಷ್ಟಿಯನ್ನು ಪುನಃ ಚಲಿಸದಂತೆ ಪಾರ್ಶ್ವದಲ್ಲಿ ನೋಡುತ್ತಾ ಬಂದರೆ, ಮತ್ತೊಂದು ಬಗೆಯಾದ ಛಾಯೆಯು ಕಾಣುವುದು. ಶರೀರಗಳು ಅಶ್ವತ್ಥವೃಕ್ಷಗಳಾದಕಾರಣ ಇದಕ್ಕೆಲ್ಲಾ ಶ್ರೀಮನ್ನಾರಾಯಣಮೂರ್ತಿಯೇ ಕಾರಣಭೂತನೆಂದು ತಿಳುಹಿ ತೋರಿಸಲಾಗಿ, ಅರ್ಜುನನು ಛಾಯಾಪುರುಷನನ್ನು ನೋಡಿ, ಎಲೈ ಕೃಷ್ಣನೇ ನನ್ನ ಶರೀರಕ್ಕೆ ಪರಮ

ಸುಖವುಂಟಾಗುವುದೆಂದು ಹೇಳಿ ಆತನಂ ಸ್ತುತಿಗೈದು ಎಲೈ ಮಹಾನುಭಾವನೆ ಶಶಿಬಿಂದುಮಹಾರಾಜನು ಋಷಿಯ ಆನುಜ್ಞೆಯಂ ಪಡೆದು ಹೊರಟತರುವಾಯ ನಡೆದ ವೃತ್ತಾಂತವನ್ನು ಕ್ರಮವಾಗಿ ಪೇಳಬೇಕೆಂದು ಪ್ರಾರ್ಥಿಸಲು, ಶ್ರೀಕೃಷ್ಣನು ಹೇಳತೊಡಗಿದನು.

ಕೇಳೈ ಅರ್ಜುನನೇ ! ಶಶಿಬಿಂದುಮಹಾರಾಯನು ಮುನಿಯ ಅನುಜ್ಞೆಯಪ್ರಕಾರ ಆ ಬಿಲನ್ನು ಹೊಕ್ಕು ನಿರ್ಭಯನಾಗಿ ಹೋಗುತ್ತಾ ಎದುರಾಗಿ ಬಂದ ದಾಸೀಜನರಿಗೆ ತಾನು ದೇವದೂತನೆಂದು ಹೇಳಿ, ಅಲ್ಲಿ ನಿಂತುಕೊಂಡು ಎಲೈ ಸಂಪೂರ್ಣಚಂದ್ರಿಕೆಯೇ ! ಬಾ ಎಂದು ಘಟ್ಟಿಯಾಗಿ ಕೂಗಿದನು. ಆ ಧ್ವನಿಯನ್ನು ಶಯ್ಯಾಗೃಹದೊಳಗಿದ್ದ ದೇವಕನ್ಯೆಯು ಕೇಳಿ, ಆಹಾ ! ಇದೇನು ಆಶ್ಚರ್ಯ. ನನ್ನ ನಾಮವನ್ನು ಹಿಡಿದು ಕೂಗುವರಾರೆಂದು ತಕ್ಷಣ ಭ್ರಾಂತಳಾಗಿ ಹೊರಗೆ ಬಂದು ನವರತ್ನಖಚಿತವಾದ ಕಿರೀಟದಿಂದಲೂ, ಭುಜಕೀರ್ತಿಯಿಂದಲೂ, ರತ್ನಹಾರಗಳಿಂದಲೂ ದೇದೀಪ್ಯಮಾನನಾಗಿರುವ ರಾಜನಂದನನನ್ನು ನೋಡಿ, ಅತ್ಯಂತ ಕೋಪಪರವಶಳಾಗಿ ತನ್ನ ದಾಸಿಯರನ್ನು ಕರೆದು ಈ ಮನುಜನು ಎಲ್ಲಿಂದ ಬಂದನು ? ನೀವೀತನನ್ನು ಇಲ್ಲಿಗೆ ಬರಲೀಸಲು ಕಾರಣವೇನೆಂದು ಕೇಳಲಾದೂತಿಯರು ಇವನು ನಮ್ಮೊಡನೆ ದೇವದೂತನೆಂದು ಹೇಳಿದ ಕಾರಣ ಉಪೇಕ್ಷೆಯಿಂದ ಸುಮ್ಮನಿದ್ದೆವೆಂದು ಹೇಳಿ ರಾಜನಂದನನನ್ನು ನೋಡಿ, ಎಲೈ ನರೋತ್ತಮನೇ ! ನೀನು ನಮ್ಮೊಡನೆ ದೇವದೂತನೆಂದು ಹೇಳಿದ ಕಾರಣವೇನೆಂದು ಬೆಸಗೊಳ್ಳಲವಕ್ಕೆ ಭಯರಹಿತನಾಗಿ ತನ್ನ ನಿಜವಾದ ವರ್ತಮಾನವನ್ನು, ದೇವಬೃಂದ ವಂದಿತನಾದ ಭಾಸ್ಕರಮಹರ್ಷಿಯ ವಚನವನ್ನು ವಿಶದವಾಗಿ ತಿಳುಹಲು, ಇಂದುವದನೆಯೂ, ಮತ್ತು ದಾಸಿಯರು ಸಹ ಮುನೀಂದ್ರನ ವಚನವನ್ನಾರಾಜಪುತ್ರನಿಂದ ಕೇಳಿ, ಏನೂ ತೋಚದೆ ಭಯದಿಂದ ಸಂಪೂರ್ಣಚಂದ್ರಿಕೆಯು ಮನಸ್ಸಿನಲ್ಲಿ ತನ್ನ ತಾಯಿಯಾದ ಉಲೂಪಿಯನ್ನು ಧ್ಯಾನಿಸಲು ಉಲೂಪಿಯು ಮನೋವೇಗದಿಂದ ತಕ್ಷಣವೇ ತನ್ನ ಪುತ್ರಿಯ ಬಳಿಗೆ ಬಂದು ಅಲ್ಲಿರುವ ರಾಜನಂದನನನ್ನು ನೋಡಿ ಆತನ ವೃತ್ತಾಂತವೆಲ್ಲವನ್ನು ವಿಚಾರಿಸಿ, ಆತನ ಬಳಿಯಲ್ಲಿದ್ದ ಕೂದಲಂ ತೆಗೆದುಕೊಂಡು ಅದಂ ತನ್ನ ಪುತ್ರಿಕಾರತ್ನಕ್ಕೆ ತೋರಿಸಿ, ಎಲೈ ಕುವರಿಯೇ ! ನೀನೀ ರಾಜೋತ್ತಮನನ್ನು ವರಿಸುವಳಾಗು, ಈತನು ದೇವತೆಗಳಿಗಿಂತಲೂ ಉತ್ತಮನೆಂದು ಅರಿಯುವಳಾಗು, ಈತನು ತಪೋಧನನಾದ ಭಾಸ್ಕರಮಹರ್ಷಿಯನ್ನು ಸೇವಿಸಿ ಆತನಿಂದ ಸಕಲವಾದ ದೇವರಹಸ್ಯಗಳನ್ನೆಲ್ಲಾ ತಿಳಿದು ಪುಣ್ಯಮೂರ್ತಿಯೆಂದೆನಿಸಿಕೊಂಡು ಅತ್ಯಂತ ಕೀರ್ತಿವಂತನಾಗಿ ಲೋಕೈಕವೀರನಾದ ಸೂರ್ಯಬಿಂದುಮಹಾರಾಯನಿಗೆ ಪುತ್ರನಾಗಿ ಶಶಿಬಿಂದುರಾಯನೆಂದು ನಾಮಧೇಯವನ್ನು ಪಡೆದಿರುವನು. ಮತ್ತು ನಮ್ಮಗಳ

ವೃತ್ತಾಂತವನ್ನೆಲ್ಲಾ ಮುನೀಂದ್ರನಿಂದರಿತು ಬಂದ ಮಹಾತ್ಮನು, ನಿನ್ನ ತಲೆಯು ಕೂದಲೇ ಈ ಮಹಾತ್ಮನನ್ನು ಇಲ್ಲಿಗೆ ಬರಮಾಡಿತು, ನೀನು ಕೈಕೊಂಡಿರುವ ಪ್ರತಿಜ್ಞೆಯನ್ನು ಬಿಟ್ಟು ಈತನನ್ನೇ ವರಿಸೆನಲು, ಸಂಪೂರ್ಣಚಂದ್ರಿಕೆಯು ಕಣ್ಣು ಗಳಲ್ಲಿ ನೀರನ್ನು ಸುರಿಸುತ್ತಾ ತಾಯಿಯನ್ನು ನೋಡಿ ಎಲ್ಲೆ ಜನನಿಯೇ ! ನೀನೀ ರೀತಿಯಾಗಿ ಹೇಳಬಹುದೆ ? ಎಂದು ನಿಲುವು ಕನ್ನಡಿಯೊಳು ತನ್ನ ಪ್ರತಿಬಿಂಬ ವನ್ನು ನೋಡಿಕೊಳ್ಳುತ್ತಾ ಆಹಾ ! ಇಂಥಾ ದಿವ್ಯ ಸುಂದರ ದೇಹವಂ ಮನು ಜನಿಗೆ ಹೇಗೆ ಒಪ್ಪಿಸಲಿ ! ಎಂದು ಯೋಚಿಸುತ್ತಿರಲಾಗಿ ತಾಯಿಯು ಉಚಿತ ವಾದ ಮಾತುಗಳಿಂದ ತನಯಳನ್ನು ಸಮಾಧಾನಗೊಳಿಸಿ. ಎಲ್ಲೆ ಪುತ್ರಿಯೇ ! ನೀನು ಮರುತ್ಮಹಾರಾಯನ ದೆಸೆಯಿಂದ ನನ್ನಲ್ಲಿ ಉದ್ಭವಿಸಿದೆಯಾದಕಾರಣ ನೀನು ರಾಜಪುತ್ರಿಯೇ ಹೊರತು ದೇವಕನ್ಯೆಯಲ್ಲ, ಇದರಿಂದ ನಿನ್ನನ್ನು ದೇವ ಪುರುಷರು ವಿವಾಹಮಾಡಿಕೊಳ್ಳಲಾರರು. ಆದುದರಿಂದ ನಾನು ನಿನ್ನನ್ನು ದೇವ ಲೋಕಕ್ಕೆ ಕರೆದುಕೊಂಡುಹೋಗದೆ ಇಲ್ಲಿಯೇ ಬಿಟ್ಟಿರುವೆನು. ಈ ಮರ್ಮವನ್ನು ನೀನು ತಿಳಿಯದಕಾರಣ ದುಃಖಪಡುತಲಿರುವೆ, ನಿನ್ನ ಭಾಗ್ಯೋದಯದಿಂದಲೇ ಭೂಮಂಡಲವನ್ನಾಳುವಂಥ ರಾಜೋತ್ತಮನು ನಿನ್ನನ್ನಪೇಕ್ಷಿಸಿ ಬಂದಿರುವನು, ಇಂಥಾ ಪೊಡವಿಪಾಲನು ಅನೇಕ ಪ್ರಕಾರದಿಂದ ಅಪೇಕ್ಷಿಸಿದರೂ ಲಭಿಸುವಂಥ ವನಲ್ಲವೆಂದು ಹೇಳಲು ಸಂಪೂರ್ಣಚಂದ್ರಿಕೆಯು ತಾಯಿಯ ಮಾತಿಗೆ ಸಮ್ಮತಿ ಸಿದವಳಾಗಿ ಅಕೆಗೆ ನಮಸ್ಕರಿಸಿ, ಎಲ್ಲ ತಾಯಿಯೇ ನಿನ್ನ ಇಷ್ಟಪ್ರಕಾರ ನೆರ ವೇರಿಸಬಹುದೆನಲು, ಉಲೂಪಿಯು ಸಂತೋಷವನ್ನೈದಿ ಮಗಳಿಗೆ ವಸ್ತ್ರಾಭರ ಣಗಳಿಂದ ಅಲಂಕರಿಸಿ, ರಾಜಪುತ್ರನ ಬಳಿಗೆ ಬಂದು, ಎಲೈ, ಪುಣ್ಯಪುರುಷನೇ ! ನೀನು ಉನ್ನತವಾದ ಉಪ್ಪರಿಗೆ ಮನೆಗಳನ್ನು ತ್ಯಜಿಸಿ, ನಮ್ಮ ಭಾಗ್ಯೋದಯ ದಿಂದ ಇಂಥಹ ಗುಹೆಯೊಳಗೆ ಬಂದವನಾದೆಯೆಂದು, ಆತನಿಗೆ ಪನ್ನೀರಿನಿಂದ ಸ್ನಾನವಂ ಮಾಡಿಸಿ ಇಬ್ಬರಿಂದಲೂ ಪ್ರತಿಜ್ಞೆಯನ್ನು ತೆಗದುಕೊಂಡು ಉಭಯತ್ರ ರಿಗೂ ಗಾಂಧರ್ವ ವಿವಾಹವನ್ನು ಮಾಡಿ ಪುತ್ರಿಯಾದ ಸಂಪೂರ್ಣಚಂದ್ರಿಕೆಗೆ ಉಚಿತವಾದ ಬುದ್ಧಿಯನ್ನು ಕಲಿಸಿ, ತನ್ನ ಲೋಕವಾದ ಅಮರಪುರವನ್ನೈ ದಿದಳು.

ಬಳಿಕ ಶಶಿಬಿಂದುಮಹಾರಾಯನು ಮಿಂಚಿನೋಪಾದಿಯೊಳು ಹೊಳೆಯು ತಲಿರುವ ಪೂರ್ಣೇಂದುಮುಖಿಯಾದ ಸಂಪೂರ್ಣಚಂದ್ರಿಕೆಯೊಡನೆ ನಾನಾ ವಿಧ ವಾದ ಕಾಮಕೇಳಿ ಸುಖಾನುಭವಗಳನ್ನನುಭವಿಸುತ್ತಾ, ತನ್ನ ಸ್ನೇಹಿತನಾದ ಮಂತ್ರಿತನಯನನ್ನು ನೆನಸಿ, ದುಃಖಪಡುತಲಿರಲು ಅದಂ ಕಂಡು ಪತ್ನಿಯು ಪತಿಯನ್ನು ಕುರಿತು, ಎಲೈ ಪ್ರಾಣನಾಯಕನೇ ! ಏತಕ್ಕೆ ಈ ಪ್ರಕಾರವಾಗಿ ಶೋಕಿಸುತ್ತೀಯೆ ಎಂದು ಕೇಳಲಾಮಾತಿಗೆ ವಲ್ಲಭನು ಮಂತ್ರಿಪುತ್ರನ ವಿಯೋ

ಗವಂ ತಿಳುಹಲು, ಸತಿಯು ಅಲ್ಲಿರುವ ನಾಯಿ, ಕೋತಿಗಳನ್ನು ಮನುಷ್ಯರನ್ನಾಗಿ ಮಾಡಿಸಿ, ಗಂಡನ ಸಮಿಾಪದೊಳು ನಿಲ್ಲಿಸಲಾಗಿ, ರಾಜಪುತ್ರನು ಮಂತ್ರಿತನಯುನನ್ನು ಕಂಡು, ಅವನನ್ನು ಸಮಿಾಪಕ್ಕೆ ಕರೆದು ಉಳಿದವರನ್ನು ಅವರವರ ಸ್ಥಳಗಳಿಗೆ ಕಳುಹಿಸಿ, ಸಖನಿಗೆ ತನ್ನ ವೃತ್ತಾಂತವನ್ನೆಲ್ಲಾ ತಿಳಿಸಿ, ಆತನ ಸಮಾಚಾರವನ್ನು ಕೇಳಿ ತಮ್ಮ ದೇಶಕ್ಕೆ ಹೋಗಲೆತ್ನಿಸಿ ಭಾರ್ಯೆಯೊಡನೆ ಯೋಚಿಸಲು, ಅವಳು ದೂತಿಯರನ್ನು ಕರೆದು ಅವರವರ ಕುದುರೆಗಳನ್ನು ಹುಡುಕಿತರಿಸಿ ದಾದಿಯರನ್ನು ಕರೆದುಕೊಂಡು ರಾಜಪುತ್ರನನ್ನೂ ಮಂತ್ರಿತನಯನನ್ನೂ ಕುದುರೆಗಳ ಮೇಲೆ ಕುಳ್ಳಿರಿಸಿ, ತನ್ನಲ್ಲಿದ್ದ ವಸ್ತ್ರಾಭರಣಗಳನ್ನು ತೆಗೆದುಕೊಂಡು ತಾನೂ ಕುದುರೆಯಮೇಲೇರಿದವಳಾಗಿ ಎಲ್ಲರೂ ಪ್ರಯಾಣ ಹೊರಟು ಬರುತ್ತ ಮಾರ್ಗದಲ್ಲಿ ದಾರಿಯು ತಪ್ಪಿದಕಾರಣ ಕೆಲವು ದಿವಸಗಳಿಗೆ ಕಾಶ್ಮೀರದೇಶವಂ ಸೇರಿ ಆ ಪಟ್ಟಣದಲ್ಲಿ ಭೋಜನವಿಕ್ರಯಳಾದ ಒಬ್ಬ ಹೆಂಗಸಿನ ಮನೆಗೆ ಹೋಗಿ ಎಲ್ಲರೂ ಭೋಜನವನ್ನು ತೀರಿಸಿಕೊಂಡು, ಆ ಮನೆಯಲ್ಲಿರುವ ಮುದುಕಿಯನ್ನು ಕಂಡು, ಎಲೈ ಮುದುಕಿಯೇ! ಈ ಪಟ್ಟಣಕ್ಕೆ ನಾಲ್ಕು ದಿಕ್ಕುಗಳಲ್ಲಿಯೂ, ಅನೇಕವಾದ ದಂಡು ದಳಗಳು ಮುತ್ತಿ ಅಪರಿಮಿತವಾದ ಮಂಗಳವಾದ್ಯಧ್ವನಿಗಳು ಮೊರೆಯುತಲಿರುವುವು, ಇದರ ಕಾರಣವೇನೆಂದು ಕೇಳಲು, ಆ ಮುದುಕಿಯು ಇಂತೆಂದಳು, ಕೇಳೈ ಪೃಚ್ಛಕನೇ! ಈ ಪಟ್ಟಣದರಸನ ಪ್ರೇಮಪುತ್ರಿಯಾದ ಶಾರದವೇಣಿಗೆ ಸ್ವಯಂವರ ಮಹೋತ್ಸವವಾದಕಾರಣ ನಾನಾ ದೇಶಗಳಿಂದ ಅನೇಕ ಧೊರೆಗಳೂ, ರಾಜಪುತ್ರರೂ ಬಂದಿರುವರು, ಇದಕ್ಕಾಗಿ ಒಂದು ಮತ್ಸ್ಯಯಂತ್ರವನ್ನು ನಿರ್ಮಾಣಮಾಡಿರುವರು. ಆ ಯಂತ್ರವನ್ನು ಯಾವನು ಭೇದಿಸಿ ಹೊಡೆಯುವನೋ ಅವನೇ ರಾಜಪುತ್ರಿಯನ್ನು ಸ್ವೀಕರಿಸಿ ಮೂರುಲೋಕಗಳಲ್ಲಿಯೂ, ಪೂಜ್ಯನಾಗುವನು. ಎಂದು ಹೇಳಲದನ್ನು ಕೇಳಿದ ಶಶಿಬಿಂದುವು ತನ್ನ ಅಂತರಾಭಿಪ್ರಾಯವಂ ಸಂಪೂರ್ಣಚಂದ್ರಿಕೆಗೆ ತಿಳಿಸಿ, ಮಂತ್ರಿತನಯುನನ್ನು ಜೊತೆಯೊಳು ಕರೆದುಕೊಂಡು ಆ ಯಂತ್ರದ ಸಮಿಾಪವನ್ನೈದಿದನು.

ಬಳಿಕ ಯಂತ್ರದ ಸುತ್ತಲೂ ಸೇರಿರುವ ಸಭಾಮಧ್ಯದಲ್ಲಿ ಒಬ್ಬಾನೊಬ್ಬ ಕಾಶ್ಮೀರದೇಶಾಧಿಪನ ಕಡೆಯವನಾದ ಬ್ರಾಹ್ಮಣನು ಬಂದು ಆ ಸಭಾಸದರನ್ನು ಕುರಿತು, ಎಲೈ ಪ್ರಭುಗಳಿರಾ ಈ ಕೆಳಗಿರುವ ನಿಲುವು ಕನ್ನಡಿಯೊಳು ನೋಡಿ ಒಂದೇ ಬಾಣದಿಂದ ಈ ಯಂತ್ರವನ್ನು ಹೊಡೆದ ಸಾಹಸವಂತರನ್ನು ನಮ್ಮ ರಾಜಪುತ್ರಿಯು ವರಿಸುವಳು, ಎಂದು ಘಟ್ಟಿಯಾಗಿ ಕೂಗಿ ಹೇಳಲಾ ಮಾತುಗಳನ್ನು ಕೇಳಿ, ಆಲ್ಲಿ ನೆರೆದಿರುವ ರಾಜರುಗಳಲ್ಲಿ ಕೆಲವರು, ಇದು ದೇವತೆಗಳಿಂದಲೂ ಸಾಧ್ಯವಾಗುವದಿಲ್ಲವೆಂತಲೂ, ಮತ್ತೆ ಕೆಲವರು ಈ ಕಾರ್ಯವು ಘಾಲ

ನೇತ್ರನಿಂದಲೂ ಆಗಲಾರದೆಂತಲೂ, ಇನ್ನೂ ಕೆಲವರು ಲಕ್ಷ್ಯವನ್ನು ಹೇಗೆ ನಿಲ್ಲಿಸುವುದೆಂಬದಾಗಿಯೂ, ಮಾತನಾಡಿಕೊಳ್ಳುತ್ತಾ ಒಬ್ಬರೂ ಯಂತ್ರದ ಬಳಿಗೆ ಹೋಗದೇ ಇದ್ದರು ಆಗ ಶಶಿಬಿಂದುರಾಯನು ತನ್ನ ಮನಸ್ಸಿನಲ್ಲಿ ಭಾಸ್ಕರಮಹರ್ಷಿಯನ್ನು ಧ್ಯಾನಿಸುತ್ತಾ, ಛಾಯಾಪುರುಷನನ್ನು ಲಕ್ಷಿಸಿದ ನನಗೆ ಈ ಲಕ್ಷ್ಯವು ಯಾತಕ್ಕೆ ನಿಲ್ಲಲಾರದೆಂದು ಧೈರ್ಯವನ್ನವಲಂಬಿಸಿ, ಆ ಯಂತ್ರದ ಸಮೀಪಕ್ಕೆ ಹೋಗಿ, ಧನುಷ್ಟಂಕಾರವನ್ನು ಮಾಡಿದನು. ಆಗ ಅಲ್ಲಿರುವ ರಾಜಾಧಿರಾಜರೆಲ್ಲಾ ನೋಡಿ, ಇವನಾವಲೋಕದಿಂದ ಬಂದ ಮಹಾತ್ಮನೋ ಎಂದು ಮಾತನಾಡಿಕೊಳ್ಳುತ್ತಾ ಕಣ್ಣುರೆಪ್ಪೆಗಳನ್ನು ಕೂಡಿಸದೆ ನೋಡುತಲಿದ್ದರು. ಶಶಿಬಿಂದುವು ಬಾಣವನ್ನು ಸಂಧಿಸಿ, ಕನ್ನಡಿಯಲ್ಲಿ ಲಕ್ಷ್ಯವನ್ನು ನಿಲ್ಲಿಸಿಕೊಂಡು ಪ್ರಯೋಗಿಸಲಾಗಿ ಆ ಬಾಣವು ಸದ್ಗುರುವಿನ ಕರುಣಾಕಟಾಕ್ಷದಿಂದ ಅದ್ಭುತರೂಪವನ್ನೈದಿ ಆ ಮತ್ಸ್ಯಯಂತ್ರವನ್ನು ಭೂಮಿಯಮೇಲೆ ಕೆಡಹಿತು. ನಂತರ ರಾಜರುಗಳೆಲ್ಲರೂ ತಮ್ಮ ಮೂಗುಗಳ ಮೇಲೆ ಬೆರಳುಗಳನ್ನಿಟ್ಟುಕೊಂಡು ಆಶ್ಚರ್ಯವನ್ನು ಹೊಂದಿ, ಈತನು ಇಂದ್ರನೋ ? ಚಂದ್ರನೋ ? ವರುಣನೋ ಇಲ್ಲವೇ ಲಕ್ಷ್ಮೀಕಾಂತನೋ ಇವರುಗಳಲ್ಲಿ ಯಾರೋ ಒಬ್ಬನಾಗಿರಬಹು. ಮನುಜಮಾತ್ರದವನಾದರೆ ಎಂದಿಗೂ ಇವನಿಂದ ಈ ಕಾರ್ಯವು ನಡೆಯದೆಂದು ಕೈಗಳನ್ನು ತಟ್ಟುತ್ತಾ ಘೊಳ್ಳೆಂದು ನಗುವಂಥವರಾದರು. ಈ ಅದ್ಭುತ ಸಂತೋಷವನ್ನು ನೋಡುತಲಿದ್ದ ಆಕಾಶದಲ್ಲಿನ ದೇವತೆಗಳು ದೇವದುಂದುಭಿಗಳನ್ನು ಧ್ವನಿಗೈದು ಪುಷ್ಪವೃಷ್ಟಿಗಳನ್ನು ಸುರಿಸಿದರು. ಕಾಶ್ಮೀರದೇಶಾಧಿಪನು ನೀತಿಮಂತನಿಂದ ಶಶಿಬಿಂದುವಿನ ವೃತ್ತಾಂತವನ್ನೆಲ್ಲಾ ತಿಳಿದು ಅಪರಿಮಿತಾನಂದವನ್ನು ಹೊಂದಿ ಮಂಗಳವಾದ್ಯಗಳು ಭೋರ್ಗರೆಯುತ್ತಿರಲಾ ಸಮಯದಲ್ಲಿ ಶಾರದವೇಣಿಯು ಸಾವಿರಾರುಮಂದಿ ದಾಸೀಜನಗಳಿಂದಲೂ, ವಿಪ್ರಸ್ತ್ರೀ ಸಮೂಹದಿಂದ ಕೂಡಿದವಳಾಗಿ, ತನ್ನ ಬಲಗೈಯೊಳು ಪುಷ್ಪಮಾಲಿಕೆಯನ್ನು ತೆಗೆದುಕೊಂಡು ಮಂದಗಮನದಿಂದ ಆ ರಾಜಪುತ್ರನ ಸಮೀಪವನ್ನೈದುತ್ತಿರಲು, ನೋಡುತಲಿದ್ದ ರಾಜಾಧಿರಾಜರೆಲ್ಲರೂ ತಲೆಗಳನ್ನು ಬೊಗ್ಗಿಸಿಕೊಂಡು ಸೃಷ್ಟಿಕರ್ತನನ್ನು ದೂಷಿಸುತ್ತಾ ಮನ್ಮಥನ ಬಾಣಗಳಿಗೆ ಸಿಲುಕಿ ಪೇಚಾಡುತ್ತಾ ಈ ರಾಜಪುತ್ರಿಯನ್ನು ಪಡೆದ ಈ ಸುಕುಮಾರನು ಏನು ಧನ್ಯನೋ ? ಎಂದು ಸ್ತೋತ್ರ ಮಾಡುತಲಿರುವಲ್ಲಿ ಶಾರದವೇಣಿಯು ಶಶಿಬಿಂದುಮಹಾರಾಯನ ಕಂಠದೊಳು ಪುಷ್ಪಹಾರವನ್ನು ಹಾಕಿ ವರಿಸಿದವಳಾಗಲು, ಬಳಿಕ ಧೊರೆಯು ಅಳಿಯನನ್ನು ಪಟ್ಟದಾನೆಯಮೇಲೆ ಕುಳ್ಳಿರಿಸಿ, ಅತ್ಯುತ್ಸಾಹದಿಂದ ಶುಭಮುಹೂರ್ತದಲ್ಲಿ ತನ್ನ ಮಗಳಿಗೂ ಅಳಿಯನಿಗೂ ವಿವಾಹವನ್ನು ಮಾಡಿಸಿದನು.

ತರುವಾಯ ಶಶಿಬಿಂದು ಮಹಾರಾಯನು ಉಭಯಭಾರ್ಯೆಯರೊಂದಿಗೆ ಅಪರಿಮಿತವಾದ ಸುಖಗಳನ್ನನುಭವಿಸುತ್ತಾ ಮೂರು ತಿಂಗಳ ಪರ್ಯಂತರವೂ ಅಲ್ಲಿಯೇ ಇದ್ದು ಬಳಿಕ ಮಾವನಾದ ಕಾಶ್ಮೀರಭೂಪಾಲಕನು ಕೊಟ್ಟ ಧನಕನಕ ವಸ್ತುವಾಹನಗಳನ್ನು ತೆಗೆದುಕೊಂಡು ಉಭಯ ಭಾರ್ಯಾಸಹಿತನಾಗಿ ತನ್ನ ದೇಶಕ್ಕೆ ಬರುತ್ತಾ, ತಮ್ಮ ಆಗಮನವನ್ನು ತಂದೆತಾಯಿಗಳಿಗೆ ತಿಳಿಸಲು ಅವರು ಅತ್ಯಂತ ಸಂತೋಷ ಸಂಭ್ರಮದಿಂದ ಮಂಗಳವಾದ್ಯಂಗಳನ್ನು ಧ್ವನಿಗೈಸಿ ಪುತ್ರನಿಗೆದುರಾಗಿ ಹೋಗಿ ಕರೆದುಕೊಂಡು ಬಂದು ಗೃಹಪ್ರವೇಶವನ್ನು ಮಾಡಿಸಿ, ಸರ್ವರೂ ಸುಖದಲ್ಲಿರುತ್ತಿರಲು, ಒಂದಾನೊಂದು ದಿವಸ ಸೂರ್ಯಬಿಂದುಮಹಾ ರಾಯನು ಪುತ್ರನನ್ನು ಕುರಿತು, ಎಲೈ ನಂದನನೇ ! ನೀನು ಮಂತ್ರಿಪುತ್ರಸಹಿತ ನಾಗಿ ಭೂಸಂಚಾರ ಮಾಡುವುದಕ್ಕೋಸ್ಕರ ಇಲ್ಲಿಂದ ಹೊರಟಾರಭ್ಯ ಇದು ವರೆಗೂ ನಡೆದ ವೃತ್ತಾಂತವನ್ನು ಮತ್ತು ನಿನ್ನ ಉಭಯ ಭಾರ್ಯೆಯರ ಸಮಾ ಚಾರವನ್ನು ಕ್ರಮವಾಗಿ ನನಗೆ ತಿಳಿಸಿ ಸಂತೋಷಪಡಿಸುವವನಾಗೆನಲು ಶಶಿಬಿಂದುವು ತಂದೆಗೆ ನಮಸ್ಕರಿಸಿ ನಡೆದ ವೃತ್ತಾಂತವನ್ನು ತಿಳುಹಿಸಲು ಆ ರಾಯನು ಆಶ್ಚರ್ಯವನ್ನು ಹೊಂದಿ ಪುತ್ರನನ್ನೂ, ಸೊಸೆಯರನ್ನೂ ಮುದ್ದಿಸಿ, ಮುನಿಪೋತ್ತಮನಾದ ಭಾಸ್ಕರಋಷಿಯನ್ನು ಬಹುವಿಧವಾಗಿ ಸ್ತುತಿಸಿ ಸುಖ ದಿಂದಲಿದ್ದನು. ಬಳಿಕ ಶಶಿಬಿಂದುಮಹಾರಾಯನು ನೀತಿಮಂತನನ್ನು ತನ್ನ ಆಪ್ತ ಮಂತ್ರಿಯನ್ನಾಗಿ ನಿಯಮಿಸಿ ರಾಜ್ಯವನ್ನು ಪರಿಪಾಲಿಸುತ್ತಾ ತನ್ನ ಭುಜಬಲ ದಿಂದ ಸಕಲದೇಶಗಳನ್ನು ಜಯಿಸಿ ಚಕ್ರವರ್ತಿಯೆಂದೆನಿಸಿಕೊಂಡು ರಾಜಾಧಿರಾಜ ರಿಂದ ಕಪ್ಪಕಾಣಿಕೆಯನ್ನು ತೆಗೆದುಕೊಳ್ಳುತ್ತಾ ನವಖಂಡ ಮಂಡಲಾಧಿಪನಾಗಿ ಧರ್ಮದಿಂದ ಪ್ರಜೆಗಳನ್ನು ರಕ್ಷಿಸುತ್ತಾ ಋಷಿಗಳನ್ನೂ, ಜ್ಞಾನಿಗಳನ್ನೂ ಸೇವಿ ಸುತ್ತಾ, ತಂದೆತಾಯಿಗಳನ್ನು ಸಲಹುತ್ತಾ ಅನೇಕ ದಿವಸಗಳವರೆಗೂ ರಾಜ್ಯ ಭಾರವನ್ನು ಮಾಡಿ ತರುವಾಯ ಈ ಲೋಕವನ್ನು ತ್ಯಜಿಸಿ ಪುಣ್ಯಲೋಕವನ್ನು ಹೊಂದಿ ಶಾಶ್ವತವಾದ ಕೈವಲ್ಯಾನುಭವದಲ್ಲಿದ್ದನೆಂಬದಾಗಿ ವಾಸುದೇವನು ವಿವರಿಸಲಾಗಿ ಕುಂತೀ ನಂದನನು ಸಂತೋಷದಿಂದ ಶಶಿಬಿಂದುಮಹಾರಾಯ ನನ್ನು ಕೊಂಡಾಡಿ, ಎಲೈ ದೇವದೇವೋತ್ತಮಾ ! ದ್ರೌಪದಿಯ ಸ್ವಯಂವರದಲ್ಲಿ ನಾನು ಹೊಡೆದ ಮತ್ಸ್ಯಯಂತ್ರಕ್ಕಿಂತಲೂ ಆ ಯಂತ್ರವು ಬಲವಾದ್ದೆ ? ಎಂದು ಕೇಳಲು, ಶ್ರೀಕೃಷ್ಣನು ಎಲೈ ಅರ್ಜುನನೇ ! ನೀನು ಭೇದಿಸಿದ ಯಂತ್ರಕ್ಕಿಂತಲೂ ಮೂರುಪಾಲು ಅಧಿಕವಾದದ್ದೆಂದು ಹೇಳಲು, ಅರ್ಜುನನು ಮನನೊಂದು ಖೇದ ವನ್ನು ಹೊಂದಲಾಗಿ, ತಕ್ಷಣದಲ್ಲಿಯೇ ಸರ್ವವ್ಯಾಪಿಯಾದ ಭಗವಂತನು ಇವನ ಇಂಗಿತವನ್ನರಿತು, ಎಲೈ ಅರ್ಜುನನೇ ! ಯುಗಗಳ ವ್ಯತ್ಯಾಸದಿಂದಲೂ ಸದ್ಗುರು ಪುತ್ರನಾಗಿ ಛಾಯಾಪುರುಷನನ್ನು ದರ್ಶನಮಾಡಿದ ಪುಣ್ಯಪುರುಷನಾದುದರಿಂ

ದೆಲ್ಲೂ, ಇವುಗಳೆಲ್ಲಾ ನಿನ್ನಂಥಾ ಪುಣ್ಯಪುರುಷನಿಗೆ ಲಭಿಸುವುದಲ್ಲದೆ ಮತ್ತೆ ಬೇರೆ ಇಲ್ಲವೆಂದು ಸಮಾಧಾನಪಡಿಸಲಾಗಿ ಧರ್ಮಾನುಜನು ಸಂತೋಷವನ್ನು ಹೊಂದಿ ವಾಸುದೇವನೇ ! ಬಹಳ ಹೊತ್ತಾದ್ದರಿಂದ ನಿದ್ರೆಯು ಬಾಧಿಸುತ್ತ ಲಿರುವುದು ಮಲಗೋಣವೆಂದು ಹೇಳಲು, ಭಗವಂತನು ಸಮ್ಮತಿಸಿ, ಈರ್ವರೂ ಶಯನಮಾಡಿ ಸುಖನಿದ್ರೆಯನ್ನು ಅನುಭವಿಸುತ್ತಲಿದ್ದರು.

ಎ ರ ಡ ನೆ ಯ ಕ ಥೆ ಸ ಮಾ ಪ್ತ ಂ .



॥ ಶ್ರೀರಸ್ತು. ॥

॥ ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ. ॥

## ಸೂರ್ಯಸೇನನೆಂಬ ಮೂರನೆ ರಾಜಪುತ್ರನ ಕಥೆ.

ಮೂರನೆಯ ದಿವಸ ರಾತ್ರಿ ಕೃಷ್ಣಾರ್ಜುನರಿಬ್ಬರೂ ಯಮುನಾತೀರದ ಸೈಕತ ಭೂಮಿಯಮೇಲೆ ಕುಳಿತುಕೊಂಡು ತಾಂಬೂಲವಂ ಸವಿಯುತ್ತಾ ಶೀತಳವಾಗಿ ಬೀಸುತಲಿರುವ ಮಂದಮಾರುತದಿಂದ ಸಂತೋಷಪಡುತ್ತ ಅರ್ಜುನನು ಶ್ರೀ ಕೃಷ್ಣನನ್ನು ಕುರಿತು, ಎಲೈ ದೇವದೇವನೇ ! ವೇದಾಂತ ಸಾರಗಳಲ್ಲಿ ಮೂರನೇದಾದ ನಾದಾನಂದ ಪ್ರಭಾವವನ್ನು ಕುರಿತು ವಿಚಿತ್ರವಾಗಿರುವ ಒಂದು ಚರಿತ್ರೆಯನ್ನು ಪೇಳಿ ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದ ಪಾರ್ಥನ ಕುತೂಹಲಕ್ಕೆ ಭಗವಂತನು ಮೆಚ್ಚಿ; ಎಲೈ ಪಾರ್ಥನೆ ! ದೇವರಹಸ್ಯಗಳನ್ನು ಕೇಳುವುದಕ್ಕೂ ತಿಳಿಯುವದಕ್ಕೂ ನೀನೇ ಪುಣ್ಯಾತ್ಮನು. ನಿನ್ನ ಭಾಗ್ಯವನ್ನು ವರ್ಣಿಸಲಳವಲ್ಲವು. ಆದರೆ ನೀನು ನಿರ್ಮಲ ಮನಸ್ಸುಳ್ಳವನಾಗಿ ಸೂರ್ಯಸೇನನೆಂಬ ರಾಜನ ಚರಿತ್ರೆಯನ್ನಾಲಿಸುವವನಾಗೆಂದು ಹೇಳಲಾರಂಭಿಸಿದನು.

ಕೇಳೈ ಅರ್ಜುನನೇ ! ಪೂರ್ವದಲ್ಲಿ ಮದ್ರದೇಶವನ್ನು ಚಂದ್ರಸೇನನೆಂಬ ಇಳೆಯಾಣ್ಮನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಆತನಿಗೆ ರೂಪುರೇಖಾ ಲಾವಣ್ಯಗಳಿಂದ ಕೂಡಿ ಕುಮಾರಕಂಠೀರವನೊಬ್ಬನು ಜನಿಸಿದನು. ಆಗಲಾ ಪೊಡವಿಪಾಲನು ಶಿಶುವಿಗೆ ಜಾತಕರ್ಮ ಮೊದಲಾದ ವೇದೋಕ್ತ ಕರ್ಮಂಗಳನ್ನು ಮಾಡಿಸಿ, ಸೂರ್ಯಸೇನನೆಂಬದಾಗಿ ಹೆಸರಿಟ್ಟು, ಅನೇಕ ಕೋಟಿ ದ್ರವ್ಯಗಳನ್ನು ಜ್ಞಾನಿಗಳಿಗೂ, ಭಕ್ತಿವೈರಾಗ್ಯ ಯೋಗಪರರಾದ ಪುಣ್ಯಪುರುಷರಿಗೂ ದಾನ ಮಾಡಿ, ತನಯನನ್ನು ಅತ್ಯಂತ ಪ್ರೇಮದಿಂದ ಸಲಹುತಲಿದ್ದನು. ಕೆಲವು ದಿವಸಗಳಮೇಲೆ ಪುತ್ರನಿಗೆ ಐದು ಸಂವತ್ಸರಗಳಾಗಲು, ವಿದ್ಯಾಭ್ಯಾಸವನ್ನು ಮಾಡಿಸಲು ಸೂರ್ಯಸೇನನು ಅತಿಚತುರನಾದುದರಿಂದ ದಿನದಿನಕ್ಕೂ ಅಭಿವೃದ್ಧಿ

ಯನ್ನು ಪಡೆಯುತ್ತಾ ಸಕಲ ವಿದ್ಯೆಗಳನ್ನು ಅಭ್ಯಾಸಮಾಡಿ ಪ್ರಾಪ್ತವಯಸ್ಕ ನಾಗಿ ಪ್ರತಿನಿತ್ಯವೂ ಸಂಧ್ಯಾಸಮಯದಲ್ಲಿ ತೇಜಿಯನ್ನು ಹತ್ತಿಕೊಂಡು ಪಟ್ಟಣದ ಬಹಿಃಪ್ರದೇಶಗಳಲ್ಲಿ ಸವಾರಿಮಾಡುತಲಿದ್ದನು. ಈ ಪ್ರಕಾರ ದಿವಸಗಳು ಕಳೆದ ಬಳಿಕ ಒಂದಾನೊಂದು ದಿವಸ ಎಂದಿನಂತೆ ರಾಜಪುತ್ರನು ಕುದುರೇ ಸವಾರಿ ಮಾಡುತ್ತಾ ಇರುವಾಗ ಒಬ್ಬ ವೃದ್ಧಳಾದ ಮುದುಕಯು ಕೈಗೂ ಬಾಯಿಗೂ ಜಗಳವನ್ನು ಬಿಟ್ಟುಕೊಂಡು ಅಯ್ಯೋ ಪ್ರತಿದಿನವೂ ನನ್ನ ಬೆರಣಿ ಗಳನ್ನು ಕುದುರೇಕಾಲುಗಳಿಂದ ತುಳಿಸಿ ಹಾಳುಮಾಡುವವರು ನೀವೇನೋ? ಎಂದು ಘಟ್ಟಿಯಾಗಿ ಶಬ್ದಮಾಡುತ್ತಾ, ಆ ರಾಜಪುತ್ರನ ಸಮೀಪಕ್ಕೆ ಬರುತ್ತಿರ ಲಾಗಿ ಅದನ್ನು ನೋಡಿ ಸೂರ್ಯಸೇನನು ಆಶ್ಚರ್ಯವನ್ನು ಹೊಂದಿ ಕುದುರೆಯನ್ನು ನಿಲ್ಲಿಸಿ ಆ ಮುದುಕಿಯನ್ನು ಕುರಿತು ಎಲೈ ವೃದ್ಧಳೇ! ನೀನು ರೋದನೆಮಾಡು ವುದಕ್ಕೆ ಕಾರಣವೇನೆಂದು ಕೇಳಲಾಗಿ, ಮುದುಕಿಯು ಹೇಳಲಾರಂಭಿಸಿದಳು,—

ಎಲೈ ನೃಪೋತ್ತಮನೇ! ಲಾಲಿಸು, ನಾನು ದಿಕ್ಕಿಲ್ಲದ ವೃದ್ಧ ಮುದುಕಿ ಯಾಗಿ ಈ ಬೈಲುದೇಶದಲ್ಲಿರುವ ಸಗಣಿಯನ್ನೆಲ್ಲಾ ಕೂಡಿಹಾಕಿ ಬೆರಣಿಯನ್ನು ತಟ್ಟಿ ಒಣಗಿದ ಬಳಿಕ ಅದನ್ನು ಮಾರಿಕೊಂಡು ಹೊಟ್ಟೆಹೊರೆದುಕೊಳ್ಳುವ ಅನಾಥಳಾದ ನನ್ನ ಜೀವನಕ್ಕೋಸ್ಕರ ನಾನು ತಟ್ಟಿರುವ ಬೆರಣಿಯು ಪ್ರತಿನಿತ್ಯ ದಲ್ಲಿಯೂ ನಿಮ್ಮ ಕುದುರೆಯ ಹೆಜ್ಜೆಗಳಿಂದ ಪುಡಿಪುಡಿಯಾಗುತ್ತಾ ಬಂದು ಜೀವ ನಕ್ಕೆ ಭಂಗವಾಯಿತು ನಿಮ್ಮ ಕುದುರೆಯ ಸಾಮರ್ಥ್ಯವನ್ನು ನನ್ನ ಬೆರಣಿಯ ಮೇಲೆ ತೋರಿಸಬೇಕೆ? ನಿಮ್ಮ ಪರಾಕ್ರಮ ಸಾಹಸಗಳನ್ನು ದಾಡಿಮ್ಮ ಎಂಬುವ ಅಂಗನೆಯ ಮೇಲೆ ತೋರಿಸಿದರೆ ಅಧಿಕವಾದ ಪ್ರಯೋಜನವುಂಟಾಗುವುದೆಂದು ಧೈರ್ಯದಿಂದ ನುಡಿದಳು. ಆ ಮಾತನ್ನು ಕೇಳಿ ರಾಜಪುತ್ರನು ಮನದೊಳು ಸಂಶಯವನ್ನು ತಾಳ್ದು, ಎಲೈ ಮುದುಕಿಯೇ! ಯಾವಜ್ಜೀವವೂ ಸುಖದಿಂದಿ ರುವಂತೆ ನಿನ್ನ ಜೀವನೋಪಾಯಕ್ಕೆ ಅಧಿಕವಾದ ದ್ರವ್ಯವನ್ನು ಕೊಡುವೆನು, ನೀನು ಹೇಳಿದ ದಾಡಿಮ್ಮ ಎಂಬ ಕನ್ನೆಯ ವೃತ್ತಾಂತವನ್ನು ವಿಸ್ತಾರವಾಗಿ ಹೇಳ ಬೇಕೆನಲಾ ಮಾತಿಗೆ ಮುದುಕಿಯು ಕಣ್ಣುಗಳಲ್ಲಿ ನೀರನ್ನು ಒರಸಿಕೊಳ್ಳುತ್ತಾ, ಕೇಳು ನೃಪಕುಲಲಲಾಮನೇ! ಕೆಲವು ದಿವಸಗಳಕೆಳಗೆ ನಾನು ಅಡಿಗೆಗೆ ಸೌದೆ ಯನ್ನು ತರುವುದಕ್ಕಾಗಿ ಅರಣ್ಯಕ್ಕೆ ಹೋಗಿ ಒಣಗಿದ ಕಟ್ಟಿಗೆಯನ್ನು ತರುತ್ತಾ ಮಾರ್ಗದಲ್ಲಿ ಒಂದು ಕಾಡೆಮ್ಮೆಯನ್ನು ಕಂಡು ಭಯಪಟ್ಟು ಒಂದು ಬಿದಿರು ಪೊದರೆಯಲ್ಲಿ ಔತುಕೊಂಡಿದ್ದೆನು. ಆ ಸ್ಥಳಕ್ಕೆ ಇಬ್ಬರು ಸಿದ್ಧಪುರುಷರು ಬಂದು ಕುಳಿತುಕೊಂಡು ಸಿದ್ಧರಸವನ್ನು ಸೇವಿಸುತ್ತ ಒರ್ವನನ್ನು ಕುರಿತು ಮತ್ತೋರ್ವನಿಂ ತೆಂದನು—ಎಲೈ ಸಿದ್ಧನೇ! ಲೋಕದಲ್ಲಿ ದಾಡಿಮ್ಮ ಎಂಬ ಅಂಗನೆಗೆ ಸಮಾನ ವಾದ ಸ್ತ್ರೀಯು ಇರುವಳೇ? ಎಂದು ಕೇಳಲಾಗಿ ಮತ್ತೊಬ್ಬ ಸಿದ್ಧನೂ ನಾನೂ

ಕೂಡ ಅವಳನ್ನು ನೋಡಿರುವೆನು, ಆದರೆ ಅವಳ ಸಮಾನವಾದ ಸೌಂದರ್ಯ ವತಿಯನ್ನು ಎಲ್ಲಿಯೂ ಕಾಣಲಿಲ್ಲ ಅವಳ ವೃತ್ತಾಂತವನ್ನೆಲ್ಲಾ ನಾನು ಬಲ್ಲೆನು ಕೇಳು, ಸೂರ್‍ಯನ ವರಪ್ರಸಾದದಿಂದ ಅವಳು ನಾಗರಾಜನೆಂಬವನಿಗೆ ಪುತ್ರಿಯಾಗಿ ಜನಿಸಿ ಪೂರ್ವಸಮುದ್ರದ ದಡದಲ್ಲಿ ದಾಡಿಮಾಮರದ ಪುಷ್ಪದಲ್ಲಿರುವಳು ಎಂಬ ದಾಗಿ ಪೇಳಲು, ಮತ್ತೊಬ್ಬನು ನಿಶ್ಚಯವೆಂದು ಮಾತನಾಡಿಕೊಳ್ಳುತ್ತಾ ಇಬ್ಬರೂ ನನಗೆ ಕಾಣಿಸದೆ ಅದೃಶ್ಯರಾದರು. ಬಳಿಕ ನಾನು ಮೆಲ್ಲಮೆಲ್ಲಗೆ ಬಂದು ಮನೆ ಯನ್ನು ಸೇರಿದೆನು ಇದೇ ದಾಡಿಮ ಕನ್ಯೆಯ ಸಮಾಚಾರವೆಂದು ಮುದುಕಿಯು ಹೇಳಲದನ್ನು ಕೇಳಿದ ರಾಜಪುತ್ರನು ಸಂತೋಷಭರಿತನಾಗಿ ಆ ವೃದ್ಧಳನ್ನು ತನ್ನ ಸಂಗಡ ಅರಮನೆಗೆ ಕರೆದುಕೊಂಡು ಪೋಗಿ, ವಿಶೇಷವಾದ ದ್ರವ್ಯವನ್ನು ಕೊಡಿಸಿ, ಅವಳನ್ನು ಮನೆಗೆ ಕಳುಹಿಸಿ, ತಾನು ಅಂತಃಪುರವನ್ನು ಹೊಕ್ಕು, ಆ ದಾಡಿಮ್ಮ ಕನ್ನೆಯನ್ನೇ ಮನದೊಳು ನೆನಸುತ್ತಾ ಕಣ್ಣಿಗೆ ನಿದ್ರೆಯು ಬಾರದೆ ಪರಿತಾಪವನ್ನೈದಿ ಶುಷ್ಕೀಭೂತನಾಗಿರಲು, ಆ ಸಮಯದಲ್ಲಿ ರಾಜಪುತ್ರನ ಪ್ರಾಣಸ್ನೇಹಿತನೊಬ್ಬನು ಅಂತಃಪುರದಲ್ಲಿದ್ದ ರಾಜಪುತ್ರನ ಬಳಿಗೆ ಬಂದು, ಎಲೈ ಸಖನೇ ! ನೀನು ವ್ಯಥೆಪಡುತಲಿರುವ ವೃತ್ತಾಂತವನ್ನು ನನಗೆ ತಿಳುಹಿದರೆ ಸಾಧ್ಯವಾದಮಟ್ಟಿಗೂ ಯುಕ್ತಿಯನ್ನು ಮಾಡಿ ಆ ಕಾರ್ಯವನ್ನು ನೆರವೇರಿಸುವೆ ನೆನಲಾಗಿ ರಾಜಪುತ್ರನು ಕೇಳೈ ಸಖನೇ ! ನನ್ನ ಮನೋವ್ಯಥೆಯನ್ನು ಏನೆಂದು ಹೇಳಲಿ ! ಪೂರ್ವಸಮುದ್ರದ ದಡದಲ್ಲಿರುವ ದಾಡಿಮ ಪುಷ್ಪದೊಳಗಿನ ದಾಡಿಮ್ಮ ಕನ್ನೆಯನ್ನು ನಾನು ಹೇಗೆ ತರಲಿ, ಸಮುದ್ರವನ್ನು ದಾಟುವ ಸಾಮರ್ಥ್ಯವು ಯಾರಿಂದಾದೀತು ! ಎಂದು ನುಡಿದು ದುಃಖಪರವಶನಾಗಲು, ಅವನ್ನು ಕೇಳಿದ ಸಖನು ಸ್ವಭಾವದಿಂದ ಶಿಲ್ಪಿಶಾಸ್ತ್ರಜ್ಞಾನಿಯಾದಕಾರಣ ತನ್ನ ವಿದ್ಯಾಚಾತುರ್ಯ ದಿಂದ ಆತನ ಅಭಿಪ್ರಾಯವನ್ನೂ, ಆ ಅಂಗನೆಯ ವೃತ್ತಾಂತವನ್ನೂ ತಿಳಿದವ ನಾಗಿ ಅಯ್ಯ ಅಣ್ಣನೇ ! ನೀನೀವಿಷಯದಲ್ಲಿ ದುಃಖಪಡಲಾಗದು. ಅದಕ್ಕೆ ಅನುಗುಣವಾದ ಯುಕ್ತಿಯನ್ನು ನಾನು ತೋರಿಸುವೆನೆಂದು ಹೇಳಿ, ಅವನಿಗೆ ಸಂತೋಷವನ್ನುಂಟುಮಾಡಿ, ತನ್ನ ಶಿಲ್ಪಿವಿದ್ಯೆಯ ಸಹಾಯದಿಂದ ಒಂದು, ಕೀಲುಕುದುರೆಯನ್ನು ಮಾಡಿ, ಸ್ನೇಹಿತನಿಗೆ ಅದರ ಮರ್ಮವನ್ನೆಲ್ಲಾ ಬೋಧಿಸಿ, ನಿನ್ನ ಕಾರ್ಯಾನುಕೂಲವನ್ನು ಮಾಡಿಕೊ ಬಾ ಯೆಂದು ನುಡಿದನು.

ಬಳಿಕ ರಾಜನಂದನನು ಸಂತೋಷವನ್ನು ಹೊಂದಿ, ವಿಶೇಷವಾಗಿ ಧನ ವನ್ನೂ ವಸ್ತ್ರಾಭರಣಗಳನ್ನೂ, ಆಯುಧಗಳನ್ನೂ ತೆಗೆದುಕೊಂಡು ಈ ವೃತ್ತಾಂ ತವನ್ನು ತನ್ನ ತಂದೆತಾಯಿಗಳಿಗೆ ತಿಳಿಸದೆ ಕೀಲುಕುದುರೆಯಮೇಲೆ ಕುಳಿತು ಕೊಂಡು ಹೋಗುತಲಿದ್ದನು. ಇತ್ತ ಸೂರ್ಯಸೇನನ ತಂದೆತಾಯಿಗಳು ಮಗನನ್ನು ಕಾಣದೆ ಬಹಳವಾಗಿ ದುಃಖಿಸುತ್ತಾ ನಾಲ್ಕು ದಿಕ್ಕುಗಳಲ್ಲಿಯೂ ಪುತ್ರನನ್ನು

ಹುಡುಕಿಕೊಂಡು ಬರುವಂತೆ ದೂತರನ್ನು ಅಟ್ಟಿದರು. ಅತ್ತಲಾ ತುರಗಾರೂಢನಾದ ರಾಜಪುತ್ರನು ಆಕಾಶಮಾರ್ಗದಲ್ಲಿ ಹೋಗುತ್ತಾ ಮಧ್ಯದೊಳು ಬೌದ್ಧಋಷಿಯ ಆಶ್ರಮದಮೇಲೆ ಬರಲು, ಆ ಮಹಾನುಭಾವನ ಮಹಿಮೆಯಿಂದ ಕುದುರೆಯ ಕೀಲುಗಳು ಕಳಚಿ ಭೂಮಿಗೆ ಬೀಳಲು, ಅದರ ಮೇಲೆ ಕುಳಿತಿದ್ದ ರಾಜಪುತ್ರನು ಮೂರ್ಛಾಗತನಾದನು. ಆ ಸ್ಥಳದಲ್ಲಿ ಸಂಚರಿಸುತ್ತಿದ್ದ ಆ ಮಹರ್ಷಿಯ ಶಿಷ್ಯರುಗಳಲ್ಲೊಬ್ಬನು ಕೀಲುಕಳಚಿ ಬಿದ್ದಿರುವ ಕುದುರೆಯನ್ನೂ ಮೂರ್ಛಾಗತನಾಗಿರುವ ರಾಜಪುತ್ರನನ್ನೂ ನೋಡಿ, ಕನಿಕರದಿಂದ ಸ್ವಲ್ಪ ನೀರನ್ನು ತಂದು ಆತನ ಬಾಯಿಯಲ್ಲಿ ಕೊಂಚಕೊಂಚವಾಗಿ ಹಾಕಿ, ಮೂರ್ಛೆಯಿಂದ ಎಬ್ಬಿಸಿ, ಆತನನ್ನು ಕುರಿತು, ಎಲೈ ರಾಜತನಯನೇ ಇದು ಬೌದ್ಧಮಹರ್ಷಿಯ ಆಶ್ರಮವು ಈ ಆಶ್ರಮದಮೇಲೆ ದೇವ, ಗಂಧರ್ವ, ಯಕ್ಷ, ರಾಕ್ಷಸರ್‍ಯಾರಾದಾಗ್ಯೂ ಹೋದದ್ದೆ ಆದರೆ ಅವರು ಕೆಳಕ್ಕೆ ಬೀಳುವವರಲ್ಲದೆ ಬೇರೆ ಇಲ್ಲ. ನೀನು ಕೀಲುಕುದುರೆಯನ್ನು ಹತ್ತಿ ಬಂದು ಬಹಳ ಕಷ್ಟಪಟ್ಟೆಯೆಂದು ನುಡಿಯಲು, ರಾಜಪುತ್ರನಾತನ ಪಾದಗಳಿಗೆರಗಿ, ತನ್ನ ಕುದುರೆಗೆ ಕಾಲುಗಳು ಕಳೆದುಹೋದದಕ್ಕೆ ಮನಗುಂದಿ, ಅಲ್ಲಿಂದ ಬೌದ್ಧಮಹರ್ಷಿಯ ಬಳಿಗೆ ಹೋಗಿ, ಆತನ ಪಾದಗಳಮೇಲೆ ಬಿದ್ದು, ದಾಡಿಮ್ಮ ಕನ್ಯಕಾ ನಿಮಿತ್ತದಿಂದ ತಾನು ಬಂದ ವಿಶಿಷ್ಟ ವರ್ತಮಾನವನ್ನೂ ತಿಳಿಸಿದನು. ಬಳಿಕಲಾ ತಪೋಧನನಾತನನ್ನು ಸಂತೈಸಿ, ರಾಜತನಯನೇ! ನಿನಗಾನಾರೀರತ್ನವು ಲಭಿಸುವುದು ದುರ್ಲಭವೆಂದು ವಿಚಾರಪಡಬೇಡ, ಸ್ತ್ರೀಯರೊಡನೆ ಭೋಗಿಸುವುದು ಅತ್ಯಲ್ಪಸುಖವು ನಾದಾನಂದವೆಂಬ ನಿತ್ಯವಾದ ವೇದಾಂತಸಾರವುಳ್ಳ ಸುಖವನ್ನು ನೀನು ಕೇಳಿ ಅರಿಯೆಯಾ? ಲೋಕದಲ್ಲಿ ಮಹಾನುಭಾವರಾದ ಪುಣ್ಯಪುರುಷರು ತೆರಳಿದ ದಾರಿಯನ್ನು ಕೇಳಲಿಲ್ಲವೇ? ಅನೇಕ ಪುರಾತನ ಪುರುಷರು ಸ್ತ್ರೀಯರ ನಿಮಿತ್ತದಿಂದ ಕೆಡಲಿಲ್ಲವೇ? ನೀನಾಕೋರಿಕೆಯನ್ನು ತ್ಯಜಿಸುವವನಾಗು. ಆ ಕನ್ನಿಕೆಯನ್ನು ಅನುಕೂಲಪಡಿಸಿಕೊಡುವ ಸಾಮರ್ಥ್ಯವು ನನಗಿಲ್ಲ ನಿನ್ನ ಇಷ್ಟಬಂದಕಡೆಗೆ ಹೋಗೆಂದು ಮುನೀಂದ್ರನು ಹೇಳಲಾಗಿ ರಾಜಪುತ್ರನು ಬಹಳವಾಗಿ ವಿಚಾರಪಟ್ಟು, ವೈರಾಗ್ಯವನ್ನು ಹೊಂದಿ, ಆ ಕನ್ಯೆಯಮೇಲೂ ರಾಜ್ಯದ ಮೇಲೂ ಅಭಿಲಾಷೆಯನ್ನು ತೊರೆದು, ಮುನೀಂದ್ರನಿಗೆ ಶುಶ್ರೂಷೆಯನ್ನು ಮಾಡುತ್ತಾ, ಎಲೈ ಮುನಿಪುಂಗವನೇ! ಈ ಲೋಕವ್ಯಾಪಾರಗಳನ್ನು ತ್ಯಜಿಸುವಂತೆಯೂ, ಶಾಶ್ವತವಾದ ವೈರಾಗ್ಯಮಾರ್ಗವುಂಟಾಗುವಂತೆ ನನಗೆ ನಿತ್ಯಾನಂದ ಸುಖಕರವಾದ ಮೋಕ್ಷಮಾರ್ಗವನ್ನು ದಯಪಾಲಿಸಿ ಪೇಳಬೇಕೆಂದು ಪ್ರಾರ್ಥಿಸಲಾಗಿ, ಮುನಿಯು ವೈರಾಗ್ಯಮಾರ್ಗವನ್ನು ಆಪೇಕ್ಷಿಸುತ್ತಿರುವ ರಾಜನಂದನನಿಗೆ ಹೇಳತೊಡಗಿದನು.



ಸೂರ್ಯಸೇನಮಹಾರಾಯ,



ಬೌದ್ಧಮಹರ್ಷಿ.

## ಸೂರ್ಯಸೇನಮಹಾರಾಯನಿಗೆ ಬೌದ್ಧಮಹರ್ಷಿ ಹೇಳಿದ ನಾದಾನಂದ ಪ್ರಭಾವ.

ಎಲೈ ಪೊಡವಿಪಾಲಕ ತನಯನೇ ! ನಾನು ವಿವೇಕವನ್ನು ಹೇಳಲಾರಂಭಿಸಿದಕಾರಣ ನಿನ್ನ ಮನವು ವೈರಾಗ್ಯಮಾರ್ಗವನ್ನವಲಂಬಿಸುತ ಬಂದಿತು ಈಗ ಚಿತ್ತಚಾಂಚಲ್ಯವನ್ನು ತ್ಯಜಿಸಿ ದೇವರಹಸ್ಯವನ್ನು ಕೇಳುವಂತವನಾಗು ವಿವೇಕಪರರಾದ!ದೇವತೆಗಳೂ ಮತ್ತು ಮಾನುಷಶರೀರಧಾರಿಗಳೂ ನಿತ್ಯಾನಂದವನ್ನನುಭವಿಸಿದಂಥಾ ನಾದಾನಂದ ಪ್ರಭಾವವೆಂಬುದನ್ನು ಹೇಳುವೆನು, ಬುದ್ಧಿರಹಿತರಾದವರು ತಿಳಿಯದೆ ಸ್ತ್ರೀಯರಲ್ಲಿ ಪಡುವ ಸದ್ಯಸ್ಸುಖವನ್ನೇ ಆನಂದವನ್ನಾಗಿ ಭಾವಿಸುವರು. ಆ ಸುಖವು ಕೇವಲ ನಿಂದ್ಯಾವಾದದ್ದು, ಇದು ಜನ್ಮಕಾರಣಕ್ಕೂ ಮತ್ತು ಶರೀರ ಮಾಂಸಾದಿಗಳ ನಾಶಕ್ಕೂ ಕಾರಣಭೂತಗಳಾದ ಅನೇಕ ಸಂಕಟಗಳಿಗೆ ಕಾರಣವಾದದ್ದು. ತ್ರಿಮೂರ್ತಿಗಳಿಂದ ಶ್ಲಾಘಿಸಲ್ಪಟ್ಟ ದೇವಋಷಿಗಣಗಳು ಮತ್ತು ಪುಣ್ಯಪುರುಷರಾದ ಮನುಜರು ನಾದಾನಂದದಿಂದ ಅಮೃತಪಾನವನ್ನು ಮಾಡಿ, ಪರಮಾನಂದವನ್ನನುಭವಿಸಿದರು. ನೀನು ಅಂತಪ್ಪ ನಾದಾನಂದ ಪ್ರಭಾವವನ್ನು ತಿಳಿಯುವವನಾಗೆಂದು ಸಮೀಪದಲ್ಲಿ ಕುಳ್ಳಿರಿಸಿಕೊಂಡು, ಕೇಳೈ ನಿರ್ಮಲಮಾನಸನೇ ! ಓಂ, ಹ್ರೀಂ, ಶ್ರೀಂ, ಹಂ, ಸಂ, ಎಂಬೀ ಪಂಚಾಕ್ಷರೀ ಮಂತ್ರವನ್ನು ಬೋಧಿಸಿ, ಎರಡು ಬೆರಳುಗಳಿಂದ ಅತನ ಕಿವಿಯ ರಂಧ್ರಗಳನ್ನು ಮುಚ್ಚಿ ಜಲಧಿಘೋಷ, ಬ್ರಹ್ಮನಾದ, ವೀಣಾನಾದ, ಮೃದಂಗನಾದ, ಕಿಂಕಿಣಿನಾದ, ತಾಳನಾದ, ಶಂಖನಾದ, ಕಾಹಳನಾದ, ಘಂಟಾನಾದ, ಎಂಬು

ಹತ್ತು ವಿಧವಾದ ನಾದಗಳು ನಿನ್ನಲ್ಲಿ ಸೇರಿಕೊಂಡಿರುವುವು. ಅವುಗಳು ಇರೋಣದರಿಂದ ನಿನಗೆ ಲೇಶವೂ ಸುಖವಿಲ್ಲ. ಅನೇಕರು ಆ ನಾದಗಳನ್ನು ಹೊರಪಡಿಸಲಾರದೆ ತಮ್ಮ ಬೆರಳುಗಳಿಂದ ಮುಚ್ಚಿಕೊಂಡವರಾಗಿ ಆನಂದಸುಖವನ್ನು ಪಡೆಯುವರು. ಅದರಿಂದ ಲೇಶವೂ ಸುಖವಿಲ್ಲ, ಈಡಾಪಿಂಗಳಗಳೆಂಬ ನಾಡಿಗಳಲ್ಲಿ ಸಂಚಾರಮಾಡುವ ಹಂಸೆಯನ್ನು ಅದರ ಸಂಚಾರ ಮಾರ್ಗವನ್ನೂ ನಿರೋಧನಂಗೈದು ಉಳಿದ ಮಾರ್ಗವನ್ನು ವಲಿಯುವಾಗಿ ರಚಿಸಿ, ಬಾಲವಲ್ಲಿ ತುಳಿಯುವ ಸರ್ಪದೋಷಾದಿಯಲ್ಲಿ ಆ ಹೇಳಲ್ಪಟ್ಟ ಹತ್ತುವಿಧ ನಾದಗಳು ಅಲ್ಲಿಂದ ಎದ್ದು ಕಿವಿಯದ್ವಾರದಿಂದ ಮೇಲಕ್ಕೆ ಬಂದು ಧ್ವನಿಗಳನ್ನು ಮಾಡುತ್ತಲಿರುವುವು. ಅಂಥಾ ನಾದಬ್ರಹ್ಮನಲ್ಲಿ ಮನಸ್ಸನ್ನು ಲೀನವಮಾಡಿ, ಕಣ್ಣುಗಳನ್ನು ಚೆನ್ನಾಗಿ ಮುಚ್ಚಿಕೊಂಡು ಭ್ರೂಮಧ್ಯದಲ್ಲಿ ದೃಕ್ಕನ್ನು ನಿಲ್ಲಿಸಿ ನೋಡಿ, ಆನಂದವನ್ನು ಹೊಂದಿ ಹೇಳೆಂದು ಮುನಿಯು ಬೋಧಿಸಲಾ ರಾಜಪುತ್ರನು ಸದ್ಗುರುವನ್ನು ಮನಸ್ಸಿನಲ್ಲಿ ನೆನಸಿ, ಹಂಸಪಂಚಾಕ್ಷರಿಯನ್ನು ಜಪಿಸುತ್ತಾ ಕೇವಲ ವೈರಾಗ್ಯದಲ್ಲಿ ಕುಳಿತುಕೊಂಡು ಊರ್ಧ್ವಕುಂಡಲಿ ಪರ್ಯಂತರವೂ ಪೂರಿಸಿ, ಚಿಕ್ಕನೆ ರೇಚಿಸುತ್ತಾ ಜಪಕುಂಡಲಿಯನ್ನು ಭೇದಮಾಡಿ ಸರ್ಪಕ್ಕೆ ಕಾವನ್ನು ಕೊಡುತ್ತಾ ಈ ರೀತಿಯಾಗಿ ಅಭ್ಯಾಸಿಸಲು, ತರುವಾಯ ನಾದಬ್ರಹ್ಮನು ಎದ್ದು ಝೇಂಕಾರಮಾಡಲಾಗಿ ರಾಜನಂದನನು ದಶವಿಧ ನಾದಗಳನ್ನು ಆಲೈಸುತ್ತಾ ಆನಂದವನ್ನೂ ಮತ್ತು ದಿಗ್ಭ್ರಮೆಯನ್ನೂ ಹೊಂದಿ ಮುನಿಯ ಪಾದಕಮಲಗಳಿಗೆರಗಿ ಎಲೈ ಮಹಾನುಭಾವನೇ! ನಾದಾನಂದ ಸುಖವೆಂಬುದನು ಹೇಳುವುದಕ್ಕೆ ನನಗೆ ಶಕ್ತಿಸಾಲದು ಮಲಗಿರುವಾಗಲೂ, ನಡೆಯುತಲಿದ್ದರೂ, ಕೂತಿದ್ದರೂ ಸಮಸ್ತ ಕಾಲಗಳೊಳಗೂ, ನಾದಾನಂದ ಸುಖವಲ್ಲಿ ಮಗ್ನನಾಗಿರುವೆನು. ಅಂಥಾವಾದ್ಯ ವಿಶೇಷಗಳನ್ನು ನಾನೆಂದಿಗೂ ಕೇಳಲಿಲ್ಲ. ನನ್ನ ಜನ್ಮಾಂತರ ಭಾಗ್ಯೋದಯದಿಂದ ದೇವವಾದ್ಯಗಳನ್ನು ಕೇಳತಕ್ಕ ಪ್ರಾಪ್ತಿಯು ಲಭಿಸಿತು ಎಂಬದಾಗಿ ನುಡಿದನು. ಆ ಮುನಿಯ ಸಾನ್ನಿಧ್ಯದಲ್ಲಿಯೇ ಸೇವಾವೃತ್ತಿಯನ್ನು ಮಾಡಿಕೊಂಡಿದ್ದನೆಂದು ವಾಸುದೇವನು ಹೇಳಲಾಗಿ ಅರ್ಜುನನು ಸಂತೋಷವನ್ನು ಹೊಂದಿ, ಎಲೈ ಭಗವಂತನೇ ನನ್ನೊಳು ದಯಪಿಟ್ಟು ಆ ಮರ್ಮಗಳನ್ನೆಲ್ಲ ಕ್ರಮವಾಗಿ ತಿಳುಹಬೇಕೆಂದು ಪ್ರಾರ್ಥಿಸಲಾಗಿ, ಶ್ರೀಕೃಷ್ಣನು ಆ ಮರ್ಮಗಳು ಅರ್ಜುನನಿಗೆ ತಿಳಿಯಪಡಿಸಲು, ಸ್ವಾಮಿಯನ್ನು ಕುರಿತು ಎಲೈ ಮಹಾನುಭಾವನೇ! ನನ್ನಲ್ಲಿರುವ ಆ ದಶವಿಧ ನಾದಂಗಳನ್ನು ನಾನು ಎಂದಿಗೂ ಅರಿಯದವನಾದೆ, ಈ ದಿನ ನನ್ನ ಪುಣ್ಯಪರಿಪಾಕದ ದೆಸೆಯಿಂದ ಅವುಗಳನ್ನೆಲ್ಲಾ ತಿಳಿದವನಾದೆನು. ಆ ಸೂರ್ಯಸೇನನು ಮುನೀಂದ್ರನ ಸಾನ್ನಿಧ್ಯದಲ್ಲಿದ್ದನೆಂದು ಹೇಳಲಾ

ಯಿತಲ್ಲಾ, ಅಲ್ಲಿಂದ ಮುಂದೆ ನಡೆದ ವೃತ್ತಾಂತವನ್ನು ತಿಳುಹಬೇಕೆಂದು ಕೇಳಿ ಕೊಳ್ಳಲು ಭಗವಂತನಿಂತೆದನು.

ಕೇಳು ಇಂದ್ರನಂದನನೇ ! ಬೌದ್ಧಋಷಿಯು ಸೂರ್ಯಸೇನನನ್ನು ನೋಡಿ ರಾಜತನಯನೇ, ನೀನು ಅಚಲಮಾನಸನಾಗಿ ವೈರಾಗ್ಯಮಾರ್ಗದಿಂದ ನಾದ ಬ್ರಹ್ಮವನ್ನು ಹೊರಪಡಿಸಿದಕಾರಣ ನಿನಗೆ ಮನೋಭೀಷ್ಟವಾದ ದೇವದರ್ಶನವು ಇಷ್ಟಾರ್ಥಸಿದ್ಧಿಯು ಉಂಟಾಗುವುದು. ಇದೂ ಅಲ್ಲದೆ ಉತ್ತಮಗತಿಯೂ ಲಭಿಸುವುದು. ಎಂದು ಆಶೀರ್ವದಿಸಲು, ರಾಜಪುತ್ರನು ಮುನಿಶ್ರೇಷ್ಠನಿಗೆ ಅಭಿವಂದಿಸಿ, ನಾನಾವಿಧಗಳಾದ ಶುಶ್ರೂಷೆಯನ್ನು ಮಾಡುತ್ತಾ, ಫಲಕಾಷ್ಠಾದಿಗ ನ್ನು ತಂದೊದಗಿಸುತ್ತಾ ಒಂದಾನೊಂದು ದಿನಸ ಬಹುದೂರವಾಗಿ ಹೋಗಿ ಅಲ್ಲಿ ಒಂದು ಆಲದವೃಕ್ಷವನ್ನು ಕಂಡು. ಈ ಮರವು ದೇವವೃಕ್ಷದಂತಿರುವುದೆಂದು ಅದರ ವಿಚಿತ್ರಗಳಿಗೆ ಸಂತೋಷಪಟ್ಟು, ಆ ಮರದ ಅಡಿಯಲ್ಲಿಯೇ ಕೊಂಚಕಾಲ ವಿಶ್ರಾಂತಿಯನ್ನು ಹೊಂದುತಲಿದ್ದನು. ಆ ಸಮಯದಲ್ಲಿ ಬಹಳ ವಾವ ಪಕ್ಷಿಗಳ ರೋದನಧ್ವನಿಯನ್ನು ಕೇಳಿ, ನಾಲ್ಕು ದಿಕ್ಕುಗಳನ್ನೂ ಚೆನ್ನಾಗಿ ಈಕ್ಷಿಸುತ್ತಿರಲು ಒಂದು ಸರ್ಪವು ಆ ಮರವನ್ನು ಹತ್ತುತ್ತಿರಲವನ್ನು ಕಂಡು ತುಂಬಾ ಭಯವುಳ್ಳವನಾಗಿ, ಎದ್ದು ನಿಂತು ಈ ಸರ್ಪವು ವೃಕ್ಷದಮೇಲಿರುವ ಪಕ್ಷಿಗಳನ್ನು ಹಿಂಸಿಸುವುದಕ್ಕಾಗಿ ಮರವನ್ನೇರುತ್ತಿರುವುದು, ಇದನ್ನೀಕ್ಷಣದಲ್ಲಿಯೇ ಸಂಹರಿಸಿ ಪಕ್ಷಿವರ್ಗವನ್ನು ರಕ್ಷಿಸದಿರ್ದೊಡೆ ನನ್ನ ಕ್ಷತ್ರಿಯ ಧರ್ಮಕ್ಕೆ ಲೋಪಬರುವುದೆಂದು ತಕ್ಷಣದಲ್ಲಿಯೇ ಆಗ್ನೇಯಾಸ್ತ್ರವನ್ನು ತೊಟ್ಟು ಆ ಸರ್ಪದ ತಲೆಯನ್ನು ಕೆಡಹಿದನು. ತಲೆಯು ಕೆಳಗೆ ಬೀಳುತಲೇ ಅದರ ಕಂಠದಿಂದ ವಿಷಜ್ವಾಲೆಗಳು ಉಕ್ಕಿ ನಾಲ್ಕು ದಿಕ್ಕುಗಳಿಗೂ ಎರಚಿ ಈ ರಾಜನಂದನನ ಮೇಲೂ ಬೀಳಲಾಗಿ ಆತನು ಶೀಘ್ರವಾಗಿ ಸಮೀಪದಲ್ಲಿರುವ ಭಾವಿಗೆ ಹೋಗಿ ಸ್ನಾನವನ್ನು ಮಾಡಿ, ಆ ಜಲವನ್ನು ಪಾನಮಾಡಿ ಬರುವಷ್ಟರಲ್ಲೇ ಶರೀರಕ್ಕೆ ಬಿದ್ದಿದ್ದ ವಿಷಜ್ವಾಲೆಯು ತಲೆಗೇರಿ ಭೂಮಿಯ ಮೇಲೆ ಚೈತನ್ಯಶೂನ್ಯನಾಗಿ ಬಿದ್ದನು.

ಮರದಮೇಲಿದ್ದ ಗಂಡಬೇರುಂಡಪಕ್ಷಿಯ ಮರಿಗಳು ರಾಜಪುತ್ರನ ವ್ಯಾಪಾರವನ್ನೆಲ್ಲ ನೋಡುತಲಿದ್ದಕಾರಣ, ಆಗ ನಿಶ್ಚೇಷ್ಟಿತನಾಗಲು, ಇದೇನು ಕಾರಣವೋ ತಿಳಿಯದು, ನಮ್ಮ ಪ್ರಾಣಗಳನ್ನು ಕಾಪಾಡುವುದಕ್ಕಾಗಿ ಈ ಸರ್ಪವನ್ನು ಕೊಂದರೂ ಅದರ ವಿಷದಿಂದ ಬಿದ್ದಿರಬಹುದು, ಈತನನ್ನು ನೋಡಿದರೆ ಪ್ರಾಣದಿಂದುಳಿಯುವಂತೆ ತೋರುವುದಿಲ್ಲ. ರೆಕ್ಕೆಗಳು, ಶಕ್ತಿಯೂ ಇಲ್ಲದ ಅಸಹಾಯರಾದ ನಾವು ಮಾಡತಕ್ಕದ್ದೇನು, ನಮ್ಮ ತಂದೆತಾಯಿಗಳು ಜಾಗ್ರತೆಯಾಗಿ ಬಂದು, ಈ ಪುಣ್ಯಪುರುಷನ ಪ್ರಾಣವನ್ನು ರಕ್ಷಿಸಿ, ಆತನ ಇಷ್ಟ

ಕಾರ್ಯವನ್ನು ನೆರವೇರಿಸಿಗೂಡುವವರೆಗೂ ನಾವು ಆಹಾರ ಪಾನಗಳನ್ನು ತೆಗೆದು ಕೊಳ್ಳಕೂಡದೆಂದು ಶಬ್ದ ಮಾಡದೆ ಸುಮ್ಮನೆ ಇದ್ದವು. ಅಷ್ಟರಲ್ಲಿಯೇ ತಮ್ಮ ಮರಿಗಳ ಆಹಾರಕ್ಕೋಸ್ಕರ ಹೋಗಿದ್ದ ಗಂಡಭೇರುಂಡ ಪಕ್ಷಿಗಳು ಎರಡು ಮದ್ದಾನೆಗಳನ್ನು ಕೊಂದು ಅವುಗಳನ್ನು ಕಚ್ಚಿಕೊಂಡು ಬಂದು ಆ ಪಕ್ಷಿಗಳಲ್ಲಿ ಹೆಣ್ಣು ಪಕ್ಷಿಯು ಗಂಡು ಪಕ್ಷಿಯನ್ನು ಕುರಿತು, ಎಲೈ ಪ್ರಾಣವಲ್ಲ ಭನೇ ! ಈಗ ನಮ್ಮ ಮರಿಗಳ ಶಬ್ದವು ಕೇಳಿಬರುವುದಿಲ್ಲ ಏನೋ ಸಂಕಟವು ಬಂದೊದಗಿದಂತೆ ಕಾಣುವುದು ಇದುವರೆಗೂ ಇಪ್ಪತ್ತುಸಾರಿ ಮರಿಗಳನ್ನು ಹಾಕಿದಾಗ್ಯೂ ಅವುಗಳಲ್ಲಿ ಒಂದಾದರೂ ನಮಗೆ ದಕ್ಕದಂತೆ ದೈವವು ಮಾಡಿರು ವುದು ಈ ರೀತಿಯಾಗಿ ದೈವಯೋಗದಿಂದ ನಿರಂತರವೂ ನಮಗೆ ದುಃಖವೇ ಪ್ರಾಪ್ತಿಯಾಯಿತು, ಈ ಮರವನ್ನು ಬಿಟ್ಟು ಬೇರೊಂದು ಮರಕ್ಕೆ ಹೋಗಿ ವಾಸಮಾಡೋಣವೆಂದರೆ ಅದನ್ನು ಎಂದಿಗೂ ಕೇಳದೆ ನಮ್ಮ ಹಿರಿಯರು ಹಾಕಿದ ಮರದಂತೆ ಇದನ್ನು ಬಿಡಲಿಲ್ಲವಲ್ಲಾ ಎಂದು ಗಂಡುಪಕ್ಷಿಗೆ ಹೇಳಿ ದುಃಖಿಸುತ್ತಾ ಮರದಮೇಲಕ್ಕೆ ಬಂದು ಶಬ್ದಮಾಡದೆ ಜೀವದಿಂದಿರುವ ಮರಿಗಳನ್ನು ಕಂಡು ಬಹಳವಾಗಿ ಆನಂದವನ್ನೈದಿ, ಅವುಗಳನ್ನು ಸಂತೈಸಿ ಮುದ್ದಿಟ್ಟುಕೊಂಡು, ಎಲೈ ಮರಿಗಳಿರಾ ! ಈ ದಿವಸ ನೀವು ಶಬ್ದಮಾಡದೆ ಕಣ್ಣುಗಳನ್ನು ಮುಚ್ಚಿ ಕೊಂಡಿರುವುದಕ್ಕೆ ಕಾರಣವೇನೆಂದು ಕೇಳಲಾಗಿ, ಅವುಗಳು ನಡೆದ ಸಮಾಚಾರ ವನ್ನೆಲ್ಲಾ ವಿಶದವಾಗಿ ತಿಳಿಸಿ, ಕಣ್ಣುಗಳಲ್ಲಿ ನೀರನ್ನು ಒರಸಿಕೊಳ್ಳಲಾರಂಭಿ ಸಿದವು. ಆ ಮಾತುಗಳನ್ನು ಕೇಳಿದ ವೃದ್ಧಪಕ್ಷಿಗಳು ಸಂತೋಷಪಟ್ಟು, ಮರಿ ಗಳನ್ನು ಸಂತೈಸಿ, ಸತ್ತುಬಿದ್ದಿರುವ ಸರ್ಪವನ್ನು ದೂರವಾಗಿ ತೆಗೆದುಹಾಕಿ ಆ ರಾಜಪುತ್ರನ ಬಳಿಗೆ ಬಂದು ಆತನನ್ನು ನೋಡಿ, ಶರೀರದಮೇಲೆ ಪ್ರಜ್ಞೆ ಇಲ್ಲ ದಿರುವುದನ್ನು ಮರಿಗಳಿಗೆ ತೋರಿಸಿ, ಎಲೈ ಮಕ್ಕಳಿರಾ ! ಈ ಮಹಾನುಭಾವನು ಮರಣವನ್ನೈದಿರುವನು, ನಾಳಿನ ಸೂರ್ಯೋದಯಾತ್ಪೂರ್ವದಲ್ಲಿ ಈತನನ್ನು ಸಂಜೀವನಪರ್ವತಕ್ಕೆ ತೆಗೆದುಕೊಂಡು ಹೋಗಿ ಬದುಕಿಸಿ ತರುವೆವು. ಬಳಿಕ ಈತನು ಬಂದ ಕಾರ್ಯವನ್ನು ನೆರವೇರಿಸಿಕೊಡಲಾಗುವುದು, ನೀವು ಆಹಾರ ವನ್ನು ತೆಗೆದುಕೊಳ್ಳಿರೆಂದು ನುಡಿಯಲಾಗಿ ಮರಿಗಳು ಇಂತೆಂದವು—ಪರಜನರಿಗೆ ನಿಷ್ಕಾರಣವಾಗಿ ಉಪಕಾರಮಾಡಿ, ತಾನು ಮರಣವನ್ನೈದುತ್ತಿರುವಂಥಾ ಮಹಾಪುರುಷನನ್ನು ಬಿಟ್ಟು ನಾವು ಆಹಾರವನ್ನು ತೆಗೆದುಕೊಳ್ಳುವುದು ನ್ಯಾಯವೇ ? ಎಂದು ತಂದೆತಾಯಿಗಳನ್ನೊಪ್ಪಿಸುತ್ತಿರುವಷ್ಟರಲ್ಲಿ ಸೂರ್ಯನು ಉದಯಾದ್ರಿಗೆ ಬರುವುದಕ್ಕೆ ಸೂಚನೆಯಾಗಿ ಅರುಣೋದಯವಾಗುತ್ತಾ ಬರಲು, ಗಂಡುಪಕ್ಷಿಯು ಆ ರಾಜಪುತ್ರನನ್ನು ಸಂಜೀವನ ಪರ್ವತಕ್ಕೆ ತೆಗೆದುಕೊಂಡು ಹೋಗಿ ಅಲ್ಲಿರುವ ದಿವ್ಯೌಷಧಗಳಿಂದ ಅವನನ್ನು ಬದುಕಿಸಿ, ತನ್ನ ವೃತ್ತಾಂತ

ವನ್ನು ತಿಳುಹಿಸಿ, ಆತನು ಮಾಡಿದ ಉಪಕಾರಕ್ಕಾಗಿ ಅವನನ್ನು ಬಹಳವಾಗಿ ಶ್ಲಾಘಿಸಿ ಕರೆದುಕೊಂಡು ಬಂದು ಮಧುರವಾದ ಫಲಗಳನ್ನಾತನ ಆಹಾರಕ್ಕೆ ಒದಗಿಸಿಕೊಟ್ಟು ವಿಷಗ್ರಾಹಿಯುನ್ನುವ ಮೂಲಿಕೆಯಿಂದ ಆ ಕೊಳದ ನೀರನ್ನು ಶುದ್ಧಿಮಾಡಿ, ಆತನು ದಾಹಶಾಂತಿಯನ್ನು ಹೊಂದಿದ ಬಳಿಕ ತಮ್ಮ ಮರಿಗಳು ನಡೆಸಿದ ಸಮಾಚಾರವನ್ನು ತಿಳುಹಲಾಗಿ, ರಾಜತನಯನು ಪಕ್ಷಿವರ್ಗವು ಮಾಡಿದ ಉಪಕಾರಕ್ಕೆ ಕೃತಜ್ಞನಾಗಿ, ಅವುಗಳ ಕೃತಜ್ಞತೆಗೆ ತಾನೂ ಸಂತೈಸಿ, ಮರಿಗಳಿಗೆ ಆಹಾರವನ್ನು ತೆಗೆದುಕೊಂಡ ಬಳಿಕ ಪಕ್ಷಿಗಳು ಆತನ ವರ್ತಮಾನ ವನ್ನೆಲ್ಲಾ ವಿಚಾರಿಸಿ ತಿಳಿದು ಅವನನ್ನು ಕುರಿತು ಇಂತೆಂದವು.

ಕೇಳು ರಾಜೇಂದ್ರತನಯನೇ ! ಬೌದ್ಧಋಷಿಯು ಇರುವ ಆಶ್ರಮದ ಮೇಲೆ ಹಾರಿಹೋಗುವುದಕ್ಕೆ ನಮಗೂ ಕೂಡ ಚೈತನ್ಯವು ಸಾಲದು ಅಂಥಾ ಮಹಾನುಭಾವನ ಕರುಣವನ್ನು ಹೊಂದಿ ನೀನು ಬಂದಿರುವೆ. ದಾಡಿಮ್ಮ ಕನ್ಯೆ ಯನ್ನು ಸಾಧಿಸಿ ತರುವುದು ಬಹಳ ಪ್ರಯಾಸವು. ಸೂರ್ಯನು ಉದಯವಾ ಗುವ ಕಾಲಕ್ಕೆ ಸರಿಯಾಗಿ ಆ ದಾಡಿಮ ಗಿಡವು ಒಂದು ಪುಷ್ಪಸಹಿತವಾಗಿ ಭಾವಿಯಿಂದ ಮೇಲಕ್ಕೆ ಬಂದು ಮಧ್ಯಾಹ್ನದವರೆಗೂ ಬೆಳದು ಸೂರ್ಯನಹತ್ತಿರಕ್ಕೆ ಹೋಗಿ ಬಳಿಕ ಸೂರ್ಯನು ಯಾವ ಪ್ರಕಾರ ಅಸ್ತಗತನಾಗಲು ತಗ್ಗುವನೊ ಅದರಂತೆ ತಗ್ಗುತ್ತಾ, ಆ ಸೂರ್ಯನು ಅಸ್ತಮಿಸುವಕಾಲಕ್ಕೆ ತಾನೂ ನೀರಿನಲ್ಲಿ ಮುಳುಗಿ ಹೋಗುವುದು. ಆ ದಾಡಿಮ ಕನ್ಯೆಯು ಆ ಹುವ್ವಿನಲ್ಲಿರುವಳು. ಆ ಕೊಳದ ಸುತ್ತಲೂ ಹತ್ತುಸಾವಿರ ಘೋರ ರಾಕ್ಷಸರು ಕಾದಿರುವರು. ಆದುದ ರಿಂದ ಭೂಮಿಯಮೇಲಿಂದ ಹೋಗಿ ಸಾಧಿಸಿತರಲು ಆಳವಲ್ಲ ಸೂರ್ಯನವರದಿಂದ ನಾಗರಾಜನೆಂಬುವನಿಗೆ ಜನ್ಮಿಸಿದಕಾರಣ ಗಗನಮಾರ್ಗದೊಳು ಹೋಗಿ ತರುವು ದಕ್ಕೆ ಸೂರ್ಯನೇ ಒಬ್ಬ ಪ್ರತ್ಯಕ್ಷ ಶತ್ರುವಾಗಿರುವನು, ಯಾವ ವಿಧದಿಂದ ಅವಳನ್ನು ಸಾಧಿಸಿ ತೆಗೆದುಕೊಂಡು ಹೋಗಬೇಕೆಂದು ಧೈರ್ಯವನ್ನು ಮಾಡಿ ಯೋಚಿಸಿರುವೆ ? ಎಂದು ಕೇಳಲಾಗಿ ಅವನು ಪ್ರತ್ಯುತ್ತರವನ್ನೀಯಲು ಏನೂ ತೋಚದೆ ಸುಮ್ಮನೆ ಇದ್ದನು. ಆ ಸಮಯದಲ್ಲಿ ಮರಿಗಳು ತಮ್ಮ ತಂದೆ ತಾಯಿಗಳನ್ನು ಕುರಿತು ಈ ಕಾರ್ಯ ಇವನಿಂದ ಅಸಾಧ್ಯವಾದರೂ ನಿಮಗೆ ಸಾಧ್ಯ ವಾಗದೆ ಇರದು ಯಾವರೀತಿಯಿಂದಲಾದರೂ ಇವನ ಕಾರ್ಯವನ್ನು ನೀವು ನೆರ ವೇರಿಸಿಕೊಡಬೇಕೆಂದು ಹೇಳಿದವು ಬಳಿಕ ಪಕ್ಷಿಗಳು ಯೋಚಿಸಿ, ಎಲೈ ರಾಜನೇ ! ನೀನು ಧೈರ್ಯವನ್ನವಲಂಬಿಸಿ, ಆ ಪುಷ್ಪವನ್ನು ಕಿತ್ತು ಭದ್ರವಾಗಿ ನಿನ್ನ ಬೆನ್ನಿಗೆ ಕಟ್ಟಿಕೊಳ್ಳುವವನಾಗು. ನಾವು ನಿನ್ನನ್ನು ಕರೆದುಕೊಂಡು ಹೋಗುವೆವೆಂದು ಹೇಳಿ ಗಂಡುಪಕ್ಷಿಯು ಆತನನ್ನು ತನ್ನ ಮೇಲೆ ಕುಳ್ಳಿರಿಸಿ ಕೊಂಡು ಹೆಣ್ಣುಹಕ್ಕಿಯು ಸೂರ್ಯನಿಗೆ ಅಡ್ಡವಾಗಿ ಅಂತರಿಕ್ಷದಲ್ಲಿ ಅಲ್ಲಿಗೆ

ಹೋಗಲು, ರಾಜಪುತ್ರನು ಅತಿ ಶೀಘ್ರವಾಗಿ ಹುವ್ವನ್ನು ಕೊಯಿದು ಬೆನ್ನಿಗೆ ಕಟ್ಟಿಕೊಳ್ಳಲು, ಪಕ್ಷಿಗಳು ಪುನಃ ಹಿಂತಿರುಗಿ ಬರುವ ಸಮಯದಲ್ಲಿ ರಾಕ್ಷಸರು ಕಂಡು ಈ ಪಕ್ಷಿಗಳು ಓರ್ವ ಮನುಜನನ್ನು ತಂದಿರುವುವು. ಅವನು ಪುಷ್ಪವನ್ನು ಕೊಯಿದು ತೆಗೆದುಕೊಂಡು ಹೋಗುತಲಿದ್ದಾನೆ, ಹಿಡಿಯಿರಿ ! ಹೊಡಿಯಿರಿ ! ಎಂಬುದಾಗಿ ಕೂಗುತ್ತಾ ಪಕ್ಷಿಗಳಿಗೆ ಅಡ್ಡವಾಗಿ ಮುಸಲ, ಮುದ್ಗರ, ಶೂಲ ವೊದಲಾದ ಆಯುಧಗಳ ಸಹಿತ ಬರಲು, ಪಕ್ಷಿಗಳು ಕಂಡು ಅವರನ್ನು ಲಕ್ಷ್ಯ ಮಾಡದೆ ಓಡಿಬರುತ್ತಿರಲು, ರಾಕ್ಷಸರು ಆಯುಧಗಳಿಂದ ಹೊಡೆಯಲಾರಂಭಿಸಿ ದಾಗ್ಯೂ, ಆ ಪಕ್ಷಿಗಳು ತಮಗೆ ತಗಲದಂತೆ ರೆಕ್ಕೆಗಳ ಬಲೀಯದಿಂದ ತಪ್ಪಿಸಿ ಕೊಂಡು ಬರುತ್ತಿದ್ದರೂ ಬಾಧೆಯು ಬಲವಾದಕಾರಣ ರಾಜಪುತ್ರನು ಪಕ್ಷಿಗಳಂ ಸುಮ್ಮನಿರಿಸಿ ತಾನು ಅಸ್ತ್ರವನ್ನು ತೊಟ್ಟು ಅವುಗಳ ಮೂಲಕ ರಾಕ್ಷಸರನ್ನು ಸಂಹರಿಸಿ, ಅವರ ಬಾಧೆಯನ್ನು ತಪ್ಪಿಸಲು ಆ ಪಕ್ಷಿಗಳು ನಿಮಿಷಮಾತ್ರದಲ್ಲಿ ರಾಜಪುತ್ರನನ್ನು ಕರೆದುಕೊಂಡು ತಮ್ಮ ನಿವಾಸಕ್ಕೆ ಬಂದು ರಾಜಪುತ್ರನಿಗೆ ಅತ್ಯಂತ ಮಧುರತರವಾದ ಫಲಗಳನ್ನು ಭಕ್ಷಿಸಲು ಕೊಟ್ಟು ಬಳಿಕ ಓ ದಾಡಿಮ್ಮ ಕನ್ಯೆಯೇ ! ಕೇಳು ನೀನು ಪುಷ್ಪದಿಂದ ಹೊರಗೆ ಬಂದು ಈ ರಾಜತನಯನ ಸೌಂದರ್ಯವನ್ನು ನೋಡು ಇವನು ದೇವೇಂದ್ರನಿಗೆ ಸಮಾನವಾದ ತೇಜಸ್ವಿಯಾಗಿ ರುವನು. ಇವನೇ ನಿನ್ನ ಗಂಡನು, ನಾವು ಗಂಡಭೇರುಂಡ ಪಕ್ಷಿಗಳು ಎಂಬ ದಾಗಿ ಪ್ರಾರ್ಥಿಸಲು, ಆ ನಾರೀಮಣಿಯು ಪುಷ್ಪವನ್ನು ಭೇದಿಸಿಕೊಂಡು ಕೋಟಿಸೂರ್ಯಪ್ರಕಾಶವಾದಂತೆ ಹೊರಗೆ ಬಂದಳು. ಬಳಿಕ ರಾಜಪುತ್ರನು ಮಿಂಚಿನಂತೆ ದೇದೀಪ್ಯಮಾನವಾಗಿ ಪ್ರಕಾಶಿಸುತಲಿರುವ ಕನ್ಯಾರತ್ನವನ್ನು ನೋಡಿ ಮೂರ್ಛಿತನಾದನು.

ಬಳಿಕ ಪಕ್ಷಿಗಳ ಇಷ್ಟಪ್ರಕಾರ ದಾಡಿಮ್ಮಕನ್ಯೆಯು ಆ ರಾಜಪುತ್ರನನ್ನು ಮೂರ್ಛೆಯಿಂದ ಏಳುವಂತೆ ಶೈತ್ಯೋಪಚಾರಗಳನ್ನು ಮಾಡಿ, ಆವನ ಸಕಲ ವೃತ್ತಾಂತಗಳನ್ನು ವಿಚಾರಿಸಿ, ಆತನೊಡನೆ ಪ್ರಿಯವಾದ ಮಾತುಗಳನ್ನಾಡುತ ಲಿದ್ದಳು. ಅಷ್ಟರಲ್ಲೀ ಗಂಡಬೇರುಂಡ ಪಕ್ಷಿಗಳ ಮರಿಗಳು ತಮ್ಮ ತಂದೆ ತಾಯಿಗಳನ್ನು ಕುರಿತು, ನಾವು ಇಷ್ಟು ಮಾತ್ರಕ್ಕೆ ಸಂತೋಷಿಸಕೂಡದು ನಾಗೇಂದ್ರನಿಂದ ಸಂಭವಿಸಬಹುದಾದ ಸಂಕಟಗಳನ್ನು ಮುಂಚಿತವಾಗಿಯೆ ನೀವು ಯೋಚಿಸಿ ! ಎಂಬದಾಗಿ ಹೇಳಲು ಎಲೈ ಮಕ್ಕಳಿರಾ ! ಅದಕ್ಕೆ ನಾವು ನಮ್ಮ ಪ್ರಭುವಾದ ಗುರುತ್ಮಂತನ ಸಾನ್ನಿಧ್ಯವನ್ನು ಕುರಿತು ಹೊರಡಲು ನಿಶ್ಚ ಯಿಸಿರುವೆವೆಂದು ಹೇಳಿದವು. ಅತ್ತಲಾ ಮಾರ್ಗಮಧ್ಯದಲ್ಲಿ ಗಂಡಭೇರುಂಡ ವೆಂಬ ಪಕ್ಷಿಯಿಂದಲೂ, ರಾಜಪುತ್ರನಿಂದಲೂ ಹತಶೇಷರಾದ ರಕ್ಕಸರು ನಾಗ ರಾಜನ ಸಮೀಪಕ್ಕೆ ಹೋಗಿ, ನಡೆದ ವೃತ್ತಾಂತವನ್ನು ವಿಸ್ತಾರವಾಗಿ ಹೇಳಲಾ

ಮಾತನ್ನು ಕೇಳಿ ಮೂರ್ಛೆಯನ್ನು ಹೊಂದಿ, ಸ್ವಲ್ಪ ಹೊತ್ತಿನ ಮೇಲೆ; ಚೇತರಿಸಿ ಕೊಂಡು ತನ್ನ ಕುವರಿಯನ್ನು ನೆನೆದು ದುಃಖಿಸುತ್ತಾ ಏನೂ ತೋರದೆ, ದೇವೇಂದ್ರನ ಸಮೀಪವನ್ನು ಸಾರ್ದು ನಡೆದ ವಿವರವನ್ನಾತಂಗೆ ತಿಳಿಸಿ, ಶೋಕಿಸುತ್ತಿರಲಾಗಿ ಅಮರಾಧಿಪನು ನಾಗರಾಜನನ್ನಾದರಿಸಿ, ಎಲೈ ಸ್ನೇಹಿತನೇ ! ಈ ಕಾರ್ಯವು ಬಹಳ ಆಶ್ಚರ್ಯಕರವಾಗಿರ್ಪುದು ಗಂಡಭೇರುಂಡಪಕ್ಷಿಗಳು ಮನುಜನನ್ನು ಕರತರಲು ಕಾರಣವೇನೆಂದೂಹಿಸಿ, ಆತನು ಎಂಥಾ ಭಾಗ್ಯಪುರುಷನೋ ! ಆ ಪಕ್ಷಿಗಳೂ ಕೂಡ ಸ್ವಲ್ಪವಾದವುಗಳಲ್ಲ. ಅವು ಗರುಡನಿಗೆ ಮಂತ್ರಿಗಳು. ಈ ಪಕ್ಷಿಗಳು ಅವನಿಗೆ ಸಹಾಯವಾಗಿರುವಾಗ ಆ ಗರುತ್ಮಂತನೇ ಎದುರಾಗಿ ಬಂದರೆ ಮಾಡತಕ್ಕದ್ದೇನು. ನೀವು ಪ್ರಕೃತದಲ್ಲಿ ಯುದ್ಧಸನ್ನದ್ಧರಾಗಿಯೂ, ವಿವಾಹಮಾಡಲಿಚ್ಛಿಸುವವರಾಗಿಯೂ ಹೋಗಿ ಗರುಡನು ಬಂದಪಕ್ಷದಲ್ಲಿ ನಾನು ಬಂದು ಸಮಾಧಾನಪಡಿಸಿ, ನಮ್ಮ ಕನ್ಯಾರತ್ನವನ್ನು ಆ ಮನುಜಂಗಿತ್ತು ಮದುವೆಯನ್ನು ಮಾಡೋಣವೆಂದು ಹೇಳಲಾಗಿ ನಾಗರಾಜನು ಒಳ್ಳೆಯದೆಂದು ತನ್ನ ಲೋಕವನ್ನು ಕುರಿತು ತೆರಳಿ ಯುದ್ಧವಿವಾಹಗಳಿಗೆ ಸಿದ್ಧನಾಗಿ ನಾಲ್ಕುಸಾವಿರ ಘೋರಸರ್ಪಗಳನ್ನು ಹಿಂದಿಟ್ಟುಕೊಂಡು ಪ್ರಯಾಣಮಾಡಿ ಬರುತ್ತಲಿದ್ದನು. ರಾಜೇಂದ್ರತನಯನನ್ನು ಕುರಿತು ನಾವು ಗರುತ್ಮಂತನ ಬಳಿಗೆ ಹೋಗಿಬರುವೆವು, ನೀನು ಅತಿಜಾಗರೂಕನಾಗಿರೆಂದು ಆಜ್ಞೆಯನ್ನಿತ್ತು, ಸೂರ್ಯೋದಯಕಾಲಕ್ಕೆ ಸರಿಯಾಗಿ ಕ್ಷೀರಸಮುದ್ರದ ಬಳಿಗೆ ಹೋಗಿ ತಮಗೆ ಅಧಿಪತಿಯಾದ ವೈನತೇಯನ ಪಾದಕಮಲಗಳಿಗೆರಗಿ ತಾವು ಬಂದ ಸಮಾಚಾರವನ್ನು ಹೇಳಿ, ನೀವು ಬಂದು ನಮ್ಮನ್ನು ಕಾಪಾಡಬೇಕೆಂದು ಬಹುವಿನಯದಿಂದ ಪ್ರಾರ್ಥಿಸಿ ಆತನಿಂದ ಅಪ್ಪಣೆಯನ್ನು ಪಡೆದು ಬರುತ್ತಲಿದ್ದವು. ಇಷ್ಟರೊಳಗಾಗಿ ನಾಗೇಂದ್ರನ ಪುರದಿಂದ ಹಾವುಗಳು ಆ ಮನುಜನೆಷ್ಟುಮಾತ್ರದವನೆಂತಲೂ, ಪಕ್ಷಿಗಳನ್ನು ಭಸ್ಮಮಾಡುವೆವೆಂತಲೂ, ಭುಗಿಭುಗಿಲೆಂದು ಉರಿಗಳನ್ನು ದಿಕ್ಕು ದಿಕ್ಕುಗಳಲ್ಲಿಯೂ ವ್ಯಾಪಿಸುತ್ತಾ ಬರುತ್ತಿರುವುದನ್ನು ಸೂರ್ಯಸೇನನು ಕಂಡು ಕೋಪಾಟೋಪದಿಂದ ಬಿಲ್ಲನ್ನು ತೆಗೆದುಕೊಂಡು ಧನುಷ್ಟಾಂಕಾರವನ್ನು ಮಾಡಿ ವಾರುಣಾಸ್ತ್ರವನ್ನು ಪ್ರಯೋಗಿಸಿದನು. ಆ ಅಸ್ತ್ರದಿಂದ ಮಹಾ ಪ್ರವಾಹವುಂಟಾಗಿ ಹಾವುಗಳನ್ನೆಲ್ಲ ದಿಕ್ಕುದಿಕ್ಕಿಗೆ ಹೊಡೆದುಕೊಂಡು ಹೋಗುತ್ತಿದ್ದರೂ ಆ ವಿಷಸರ್ಪಗಳು ಪುನಹ ಒರುತ್ತಿರುವುದನ್ನು ರಾಜಪುತ್ರನು ಕಂಡು, ದಿವ್ಯವಾದ [illegible]ಗಳನು ಪ್ರಯೋಗಿಸಿ, ಅವುಗಳನ್ನೆಲ್ಲಾ ಚೂರುಚೂರು ಮಾಡಿ ಅವುಗಳ ಮಂಡಲಿಯನ್ನೆಲ್ಲ ಸದೆದನು. ಅಷ್ಟರಲ್ಲೇ ಗಂಡಭೇರುಂಡ ಪಕ್ಷಿಗಳು ರಾಜಪುತ್ರನ ಸಮೀಪಕ್ಕೈತಂದು ಈತನಿಗೆ ಬಹಳ ಆಯಾಸವಾಗಿರುವುದೆಂದು ತಿಳಿದು ಗರುಡನನ್ನು ಸ್ಮರಿಸಲಾಗಿ ಗರುಡನು ನಿಮಿಷಮಾತ್ರದಲ್ಲಿ ಆ ಸ್ಥಳಕ್ಕೆ ಬರಲು ಅದನ್ನು ನೋಡಿ ಸರ್ಪ

ಗಳೆಲ್ಲಾ ಘಾಬರಿಪಟ್ಟು ಹೆಡೆಗಳನ್ನೆಲ್ಲಾ ಭೂಮಿಯಮೇಲೆ ಕೊಡಹಿಕೊಂಡು ಬಿದ್ದಿದ್ದವು. ಅಷ್ಟರಲ್ಲೇ ದೇವವಾದ್ಯಗಳಿಂದ ಅಮರಾಧಿಪನು ಅಲ್ಲಿಗೆ ಬಂದು ವೈನತೇಯನನ್ನಾಲಿಂಗಿಸಿಕೊಂಡು, ಎಲೈ ಎನ್ನ ತನಯನೇ! ನಿನ್ನ ಸಖನಾದ ನಾಗರಾಜನನ್ನು ನೋಡುವವನಾಗೆಲು, ವೈನತೇಯನು ನಾಗರಾಜನನ್ನು ನೋಡಿ ಸಖನೇ ಈ ರಾಜಪುತ್ರನು ಬಹುಧೈರ್ಯಸಾಹಸವುಳ್ಳವನು ಅತಿ ಸುಂದರ ನಾಗಿಯೂ, ಬೌದ್ಧಮಹರ್ಷಿಯ ಶುಶ್ರೂಷೆಯನ್ನು ಮಾಡಿ, ನಾದಾನಂದ ರಹಸ್ಯವನ್ನು ಅರಿತವನಾಗಿಯೂ ಇರುವನು ನಿನ್ನ ಪುತ್ರಿಗೆ ತಕ್ಕ ವರನಾಗಿರುವ ಕಾರಣ ಇವರಿರ್ವರಿಗೂ ವಿವಾಹವನ್ನು ಬೆಳಸಿ ನೇತ್ರಾನಂದವನ್ನನುಭವಿಸುವುದು ಉಚಿತವೆಂದು ಹೇಳಲು ನಾಗರಾಜನು ಸಮ್ಮತಿಪಟ್ಟವನಾಗಿ ದಾಡಿಮ್ಮ ಕನ್ಯೆಗೂ ಸೂರ್ಯಸೇನನಿಗೂ ಆ ವಟವೃಕ್ಷದ ತಟಿಯಲ್ಲಿ ವಿವಾಹವನ್ನು ನೆರವೇರಿಸಿ ವಧೂ ವರರನ್ನು ಸನ್ಮಾನಿಸಿ ದಿವ್ಯತರಮಾದ ವಸ್ತ್ರಾಭರಣಗಳನ್ನಿತ್ತು ತಮ್ಮ ತಮ್ಮ ಲೋಕಂಗಳನ್ನು ಕುರಿತು ತೆರಳಿದರು. ಬಳಿಕ ಗಂಡಭೇರುಂಡ ಪಕ್ಷಿಗಳು ರಾಜ ಪುತ್ರನನ್ನು ನೋಡಿ, ಎಲೈ ಪುಣ್ಯಾತ್ಮನೇ! ನಿನ್ನ ಭಾಗ್ಯವನ್ನಿಷ್ಟೆಂದು ವರ್ಣಿಸ ಲಳವು. ಋಷಿಯ ಕರುಣಕಟಾಕ್ಷದಿಂದ ದಾಡಿಮ್ಮ ಕನ್ಯೆಯು, ಪಾವನರಾದ ವೈನತೇಯ ದೇವೇಂದ್ರ ಇವರುಗಳ ದರ್ಶನವೂ ಪ್ರಾಪ್ತವಾದವು! ಎಂದು ಹೇಳಲಾಗಿ, ಆತನಾ ಪಕ್ಷಿಗಳನ್ನು ಕುರಿತು, ಎಲೈ ಪ್ರಾಣಾದಿ ರಕ್ಷಕರೇ! ನಿಮ್ಮ ಸಹಾಯದಿಂದ ಇವುಗಳೆಲ್ಲವೂ ನನಗೆ ಲಭಿಸಿತೆಂದು ಬಹಳವಾಗಿ ಶ್ಲಾಘಿಸಿ, ಕೃತಜ್ಞತೆಯುಳ್ಳ ಪಕ್ಷಿಶಿಖಾಮಣಿಗಳೇ ಬೌದ್ಧಮಹರ್ಷಿಯ ದರ್ಶನ ವನ್ನು ತೆಗೆದುಕೊಂಡು ನನ್ನ ಪಟ್ಟಣಕ್ಕೆ ಹೋಗಬೇಕು. ಇದಕ್ಕಾಗಿ ನಿಮ್ಮ ಸಹಾಯವನ್ನಪೇಕ್ಷಿಸಿರುವೆನೆಂದು ನುಡಿಯಲಾ ಪಕ್ಷಿಗಳು ಅವರನ್ನು ಸಂತೈಸಿ, ತಮ್ಮ ರೆಕ್ಕೆಗಳ ಮೇಲೆ ಕುಳ್ಳಿರಿಸಿಕೊಂಡು ಬಂದು ಋಷ್ಯಾಶ್ರಮದ ಸಮೀಪದ ಲ್ಲಿಳಿಸಿದವು. ಅನಂತರ ದಂಪತಿಗಳೀರ್ವರೂ ಭಯಭಕ್ತಿ ಶ್ರದ್ಧೆಗಳಿಂದ ಮುನಿ ಪೋತ್ತಮನ ಪಾದಗಳಿಗೆರಗಿ ನಡೆದ ವೃತ್ತಾಂತವನ್ನೆಲ್ಲಾ ವಿಸ್ತಾರವಾಗಿ ತಿಳಿ ಸಲು, ಮುನಿಪುಂಗವನು ಸಂತೈಸಿ ನಾದಾನಂದಪ್ರಭಾವದ ದೆಶೆಯಿಂದ ಈ ಕನ್ನೆಯೂ ಮತ್ತು ದೇವತೆಗಳ ದರ್ಶನವೂ ನಿನಗುಂಟಾಯಿತು. ನೀನು ಮಹಾ ಪುಣ್ಯಪುರುಷನು. ನಿನ್ನ ಕೀರ್ತಿಯು ಎಂಟು ದಿಕ್ಕುಗಳಲ್ಲಿಯೂ ವ್ಯಾಪಿಸುವಂತೆ ರಾಜ್ಯವನ್ನು ಪರಿಪಾಲಿಸುತ್ತಾ, ಕಡೆಗೆ ಪುಣ್ಯಲೋಕವನ್ನೈದೆಂದು ಆ ದಂಪತಿಗ ಳೀರ್ವರನ್ನು ಆಶೀರ್ವದಿಸಿ ಅಪ್ಪಣೆಯನ್ನಿತ್ತು ಕಳುಹಿಸಿದನು. ತರುವಾಯ ಗಂಡ ಭೇರುಂಡಪಕ್ಷಿಗಳು ಆ ವಧೂವರರನ್ನು ತಮ್ಮ ಮೇಲೆ ಕುಳ್ಳಿರಿಸಿಕೊಂಡು ಮದ್ರ ದೇಶದ ಸಮೀಪದವರೆಗೂ ಕೊಂಡು ಬಂದು ಅವರನ್ನಲ್ಲಿಳಿಸಿ, ಸೂರ್ಯಸೇನನ ಅಪ್ಪಣೆಯನ್ನು ತೆಗೆದುಕೊಂಡು ಮರಳಿ ತಮ್ಮ ಸ್ಥಾನಕ್ಕೆ ಬಂದು ಸೇರಿದವು.

ತರುವಾಯ ಸೂರ್ಯಸೇನಮಹಾರಾಯನು ತಾನು ಬಂದಿರುವ ವರ್ತಮಾನನ್ನು ತನ್ನ ತಂದೆತಾಯಿಗಳಿಗೆ ಹೇಳಿ ಕಳುಹಲಾಗಿ ಅವರು ಅನೇಕ ಚತುರಂಬಲ ಸಮೇತರಾಗಿ ಮಂಗಳವಾದ್ಯಗಳೊಡನೆ ಇದಿರ್ಗೊಂಡು ಪುತ್ರನನ್ನು ೆದುಕೊಂಡು ಪಟ್ಟಣವನ್ನು ಪ್ರವೇಶಮಾಡಿದ ತರುವಾಯು ತನ್ನ ವೃತ್ತಾಂತವಲ್ಲಾ ಕ್ರಮವಾಗಿ ತಂದೆತಾಯಿಗಳಿಗೂ, ಸ್ನೇಹಿತನಾದ ಶಿಲ್ಪಿಗೂ ತಿಳುಹಿಸಿ, ವರನ್ನು ಸಂತೋಷಗೊಳಿಸಿ, ಅವರುಗಳಿಗೆ ನೇತ್ರೋತ್ಸವವಾಗುವಂತೆ ಪಟ್ಟಣನ್ನೆಲ್ಲಾ ಶೃಂಗರಿಸಿ, ಪುನರ್ವಿವಾಹವನ್ನು ಮಾಡಿಕೊಂಡು ಸರ್ವರಿಗೂ ಪ್ರಿಯಾಗಿ, ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಪುರಜನಗಳಿಗೆ ಸಂತೋಷಕರವಾಗಿ ಕೆಲವು ವಸಗಳು ರಾಜ್ಯಭಾರವನ್ನು ಮಾಡಿ, ಬಳಿಕ ತನ್ನ ಪರಾಕ್ರಮದಿಂದ ದೇಶೇಶಗಳಮೇಲೂ ದಂಡೆತ್ತಿ ಹೋಗಿ ಸಮಸ್ತದೇಶಗಳನ್ನು ಗೆದ್ದು ರಾಜಾಧಿಾಜರಿಂದ ಕಪ್ಪಕಾಣಿಕೆಗಳನ್ನು ತೆಗದುಕೊಳ್ಳುತ್ತಾ ಋಷೀಶ್ವರನ ಅನುಗ್ರಹಂದ ಮಂಡಲಾಧಿಪನಾಗಿಯೂ, ಗುಣಾಢ್ಯನಾಗಿಯೂ, ಲೋಕೈಕವೀರನಾಯೂ ಧರ್ಮೈಕತತ್ಪರನಾಗಿಯೂ, ಲಕ್ಷ್ಮೀ ಕಟಾಕ್ಷಯುಕ್ತನಾಗಿಯೂ, ಾಡಿಮ್ಮ ಕನ್ಯೆಯೊಂದಿಗೆ ಸುಖಾಸುಭವವುಳ್ಳವನಾಗಿಯೂ, ತಂದೆತಾಯಿಳಿಗೂ, ವೃದ್ಧರಿಗೂ ಋಷಿಗಳಿಗೂ ವಂದಿತನಾಗಿಯೂ ಇದ್ದು ನಾನಾನಂದಖವನ್ನನುಭವಿಸುತ್ತಾ, ಬಹುಕಾಲ ರಾಜ್ಯಭಾರವನ್ನು ಮಾಡಿ ದೇಹಾಂತ್ಯಾಳು ಪುಣ್ಯಲೋಕವನ್ನೈದಿ ಪರಮಾನಂದ ಸಾಮ್ರಾಜ್ಯ ಸಾಯುಜ್ಯವಾದೀಮನ್ನಾರಾಯಣನಾಸ್ಥಾನದಲ್ಲಿ ಲೀಲಾವಂತನಾಗಿದ್ದನೆಂದು ಶ್ರೀ ಕೃಷ್ಣನುೀಳಲು, ಅರ್ಜುನನು ಸಂತುಷ್ಟನಾಗಿ ದೇವದೇವೋತ್ತಮನನ್ನು ಕುರಿತು ಎಲ್ಲಿಪವ್ರಕ್ಷಕನೇ ! ಸಕಲ ಪಾಪನಾಶಕರವಾದ ಈ ಕೈವಲ್ಯಮಾರ್ಗವಂ ಕೇಳಿನ್ಮ ಸಾಫಲ್ಯವಾಗಿ ಧರ್ಮ ಸೂಕ್ಷ್ಮಗಳನ್ನು ತಿಳಿದು ಧನ್ಯನಾದೆನು. ನೇತ್ರಗಳಿಗೆದ್ರಾಸುಖವು ಬಾಧಿಸುತಲಿರುವಕಾರಣ ಶಯನ ಮಾಡೋಣವೆಂದು ಹೇಳಿರ್ವರು ಶಯನಿಸಿ ಸುಖನಿದ್ರೆಯನ್ನನುಭವಿಸುತ್ತಲಿದ್ದರು.

ಮೂ ರ ನೆ ಕ ಥೆ ಸಂ ಪೂ ರ್ಣಂ.



॥ ಶ್ರೀರಸ್ತು. ॥

॥ ಶ್ರೀವಾಸುದೇವಾಯ ನಮಃ. ॥

## ಅಗ್ನಿದತ್ತನೆಂಬ ನಾಲ್ಕನೆ ರಾಜಪುತ್ರನ ಕಥೆ

ನಾಲ್ಕನೆದಿನದ ರಾತ್ರಿ ಕೃಷ್ಣಾರ್ಜುನರಿಬ್ಬರೂ ಯಮುನಾ ಪ್ರಾಂತ್ಯದಕತ ಭೂಮಿಯಮೇಲೆ ಕುಳಿತುಕೊಂಡು ತಾಂಬೂಲವನ್ನು ಸವಿಯುತ್ತಾ,

ತಣ್ಣಗೆ ಬೀಸುತಲಿರುವ ಮಲಯಮಾರುತದಿಂದ ಆನಂದವನ್ನೈದಿದ ಮೇಲೆ ಅರ್ಜುನನು ವಾಸುದೇವನನ್ನು ಕುರಿತು, ಪುರುಷೋತ್ತಮನೇ! ಪಂಚಮುದ್ರೆಗಳು ನನ್ನ ಹೃದ್ಗೋಚರವಾಗುವಂತೆ ವಿಚಿತ್ರವಾದೊಂದು ಚರಿತ್ರೆಯನ್ನು ಪೇಳಿ, ನನ್ನನ್ನು ಪಾವನನನ್ನಾಗಿಮಾಡಬೇಕೆಂದು ವಿನಯದಿಂದ ಪ್ರಾರ್ಥಿಸಲು ಪಾರ್ಥನ ಪ್ರಶ್ನೆಗೆ ಭಗವಂತನು ಸಂತುಷ್ಟನಾಗಿ, ಎಲೈ ಅರ್ಜುನನೇ! ಶ್ರದ್ಧಾಸಕ್ತನಾಗಿ ಅಗ್ನಿದತ್ತನೆಂಬ ರಾಜೋತ್ತಮನ ಇತಿಹಾಸವನ್ನು ಕೇಳುವವನಾಗೆಂದು ಹೇಳಲಾರಂಭಿಸಿದನು.

ಎಲೈ, ಪಾಂಡುನಂದನನೇ! ಪೂರ್ವದಲ್ಲಿ ಚಿರಕೀರ್ತಿ ಎಂಬ ಪೊಡವಿಪಾಲನು ಆಂಧ್ರದೇಶವನ್ನಾಳುತ್ತಿದ್ದನು. ಆತನಿಗೆ ಸಕಲವಾದ ರಾಜ್ಯ ಸಂಪತ್ತಿದ್ದರೂ ಸಂತಾನವಿಲ್ಲದಕಾರಣ ದಂಪತಿಗಳಿಬ್ಬರೂ ಬಹಳವಾದ ಪರಿತಾಪವನ್ನು ಹೊಂದುತ್ತಾ ಸಂತಾನಕ್ಕೋಸ್ಕರ ಅನೇಕ ವ್ರತಗಳನ್ನಾಚರಿಸುತ್ತಾ ಬಂದರೂ ಸಂತಾನವಾಗದಿರಲು, ರಾಜ್ಯ, ಧನ, ಕನಕ, ವಸ್ತು ವಾಹನ ಮತ್ತು ತನ್ನ ಶರೀರ ಸುಖದಲ್ಲಿಯೂ ಆಶೆಯನ್ನು ತೊರೆದು ವಿರಕ್ತನಾಗಿ ಕೇವಲ ವೈರಾಗ್ಯಮಾರ್ಗದಿಂದ ನಲವತ್ತು ದಿವಸಗಳು ಅಗ್ನಿದೇವನನ್ನು ಕುರಿತು, ಯಾಗವನ್ನು ಮಾಡಲು, ಅಗ್ನಿವಾಹನನು ಸಂತುಷ್ಟನಾಗಿ ದೊರೆಗೆ ಪ್ರತ್ಯಕ್ಷನಾಗಿ ಎಲೈ ರಾಜೇಂದ್ರನೇ! ನಿನಗೆ ಪುತ್ರೋತ್ಸವವಾಗುವುದೆಂದು ವರವನ್ನು ಕೊಟ್ಟು ಅಂತರ್ಧಾನನಾದನು. ಬಳಿಕ ಚಿರಕೀರ್ತಿಯ ಪತ್ನಿಯು ಗರ್ಭವನ್ನು ಧರಿಸಿ, ನವಮಾಸ ಕಳೆದನಂತರ ಶುಭಲಗ್ನದಲ್ಲಿ ಅತಿ ತೇಜಸ್ವಿಯಾದ ಸುಕುಮಾರನನ್ನು ಹೆತ್ತಳು. ಆಗಲಾ ಇಳೆಯಾಣ್ಮನು ಸಂತೋಷಸಮುದ್ರದಲ್ಲಿ ಮುಳುಗಿದವನಾಗಿ ಗೋ, ಭೂ, ಹಿರಣ್ಯ ದಾನಗಳನ್ನು ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ಶಿಶುವಿಗೆ ಜಾತಕರ್ಮಾದಿಗಳ್ನು ಮಾಡಿಸಿ, ಅಗ್ನಿದತ್ತನೆಂಬಭಿದಾನವನ್ನಿಟ್ಟು ಅತ್ಯಂತ ಪ್ರೇಮದಿಂದ ಸಲಹುತಲಿದ್ದನು. ಶಿಶುವಿಗೆ ಐದು ಸಂವತ್ಸರಗಳಾದನಂತರ ವಿಧ್ಯಾಭ್ಯಾಸವನ್ನು ಮಾಡಿಸಲು, ಅಗ್ನಿದತ್ತನು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಅಭಿವೃದ್ಧಿಯನ್ನೈದುತ್ತಾ ಸಕಲವಾದ ನೀತಿ, ಧರ್ಮಶಾಸ್ತ್ರಗಳನ್ನು ಗ್ರಹಿಸಿದವನಾಗಿ, ಧನುರ್ವಿದ್ಯೆಯಲ್ಲಿ ವಿಶೇಷ ಕುಶಲತ್ವವುಂಟಾಗಿ ದಿವ್ಯಾಸ್ತ್ರಗಳ ಪ್ರಯೋಗಗಳನ್ನು, ದ್ವಂದ್ವ ಸಂಕುಲಾದಿ ಯುದ್ಧಕ್ರಮಗಳನ್ನು, ವಿವಿಧ ವ್ಯೂಹಗಳನ್ನು ಭೇದಿಸುವ ಸಾಮರ್ಥ್ಯವನ್ನು ಕಲಿತವನಾಗಿ ಬಾಲಸೂರ್ಯನಂತೆ ಪ್ರಕಾಶವನ್ನೈದುತ್ತಾ, ತಂದೆಯ ರಾಜಾಸ್ಥಾನದಲ್ಲಿ ಕುಳಿತುಕೊಂಡು ಸಕಲವಾದ ರಾಜನೀತಿಗಳನ್ನೂ ಧರ್ಮಾಧರ್ಮ ಮಾರ್ಗವನ್ನು ತಿಳಿಯುತ್ತಿದ್ದನು.

ಒಂದಾನೊಂದು ದಿವಸ ಚಿರಕೀರ್ತಿಮಹಾರಾಯನು ಮಂತ್ರಿಮೊದಲಾದ ಸಾಮಾಜಿಕರು ಸಹಿತವಾಗಿ ಒಡ್ಡೋಲಗದಲ್ಲಿ ಕುಳಿತಿರುವ ಸಮಯದಲ್ಲಿ ಆ

ಸಭಾಸ್ಥಾನಕ್ಕೆ ಕೆಲವು ಜನ ದೂತರು ಬಂದು ಇಳೆಯಾಣ್ಮನನ್ನು ಕುರಿತು, ಎಲೈ ಪೊಡವಿಪಾಲಕನೇ ! ಕಾಶೀಪಟ್ಟಣವನ್ನಾಳುವ ಶಶಾಂಕಮಹಾರಾಯನು ತನ್ನ ಕುವರಿಯಾದ ಶರತ್ಕಾಲ ಚಂದ್ರಿಕಾಮಣಿಗೆ ಸ್ವಯಂವರವೆಂಬದಾಗಿ ಪ್ರಸಿದ್ಧಿ ಪಡಿಸಿರುವನು, ಆ ರಾಜಪುತ್ರಿಯ ದಿವ್ಯರೂಪ ಸೌಂದರ್ಯಾತಿಶಯಗಳನ್ನು ವರ್ಣಿ ಸುವುದಕ್ಕೆ ಸಹಸ್ರ ಫಣಿಗಳುಳ್ಳ ಆದಿಶೇಷನಿಗೂ ಶಕ್ಯವಲ್ಲ. ಅನೇಕ ದೇಶಗ ಳಿಂದ ಮಂಡಲಾಧಿಪರೆಲ್ಲರೂ ಬರುತ್ತಲಿರುವರು. ತಾವು ತಮ್ಮ ಪುತ್ರನನ್ನು ಕರೆದುಕೊಂಡು ಆ ಮಹಾ ವೈಚಿತ್ರವನ್ನು ನೋಡುವುದಕ್ಕಾಗಿ ದಯಮಾಡಿಸ ಬೇಕೆಂದು ಹೇಳಿ ಅಪ್ಪಣೆಯನ್ನು ಪಡೆದು ಹೊರಟುಹೋದರು. ಆ ಮಾತುಗ ಳನ್ನು ಕೇಳಿದ ಕ್ಷಣವೇ ಅಗ್ನಿದತ್ತನು ತಂದೆಯನ್ನು ಕುರಿತು, ಎಲೈ ಜನಕನೇ ! ದೂತರು ಹೇಳಿದ ವೈಭವಾತಿಶಯವು ನಡೆಯುವ ಸ್ಥಾನಕ್ಕೆ ನಾವೂ ಹೋಗೋ ಣವೆಂದು ಕೇಳಲಾಗಿ, ತಂದೆಯು ಮಗನನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿ ಕೊಂಡು ಮಗುವೇ ! ದೂತರು ಹೇಳಿದ ಮಾತುಗಳನ್ನು ಕೇಳಿ ನೀನು ಹೇಳುತ್ತ ಲಿರುವೆ, ಮುನ್ನೂರು ಅಡಿಗಳ ಎತ್ತರವುಳ್ಳ ಒಂದು ಸ್ತಂಭವನ್ನು ನಿರ್ಮಾಣ ಮಾಡಿ, ಅದರ ಶಿಖರದಲ್ಲಿ ಒಂದು ಶುಕಯಂತ್ರವನ್ನಿಟ್ಟು ಅದರ ಕೆಳಭಾಗದಲ್ಲಿ ಒಂದು ಕನ್ನಡಿಯನ್ನಿರಿಸಿ, ಆ ಕನ್ನಡಿಯೊಳಗೆ ಲಕ್ಷ್ಯವನ್ನಿಟ್ಟು ಒಂದೇ ಬಾಣ ದಿಂದ ಆ ನಿರ್ಮಾಣಯಂತ್ರವನ್ನು ಹೊಡೆದಂಥವನಿಗೆ ತನ್ನ ಪುತ್ರಿಯನ್ನು ಕೊಟ್ಟು ವಿವಾಹವನ್ನೆಸಗುವೆನೆಂದು ನನಗೆ ಪತ್ರಿಕೆಯನ್ನು ಕಳುಹಿಸಿರುವನು, ಆ ಯಂತ್ರವನ್ನು ಹೊಡೆಯುವುದಕ್ಕೆ ಮನುಷ್ಯನು ಶಕ್ತನಲ್ಲ. ನಾವು ಅಲ್ಲಿಗೆ ಹೋಗಿ ಅವಮಾನಪಟ್ಟು ಬರುವುದಕ್ಕಿಂತಲೂ ಸುಮ್ಮನಿರುವುದು ಉಚಿತವೆಂದು ತಿಳಿಯುವವನಾಗು. ಪ್ರಾಣಗಳನ್ನಾದರೂ ತೊರೆಯಬಹುದಲ್ಲದೆ ಮಾನಗಳನ್ನು ಕಳೆದುಕೊಳ್ಳಲಾಗದು. ನೀನು ಬಾಲ್ಯಭಾವದಿಂದ ನುಡಿಯುವವನಾದೆ, ಆ ಕನ್ಯೆಗಿಂತಲೂ ಅತಿಶಯವಾದ ಸುಂದರಾಂಗಿಯನ್ನು ತಂದು ನಿನಗೆ ಮದುವೆ ಮಾಡುವೆನೆಂದು ಹೇಳಿದ ತಂದೆಯನ್ನು ಕುರಿತು ಮಗನಿಂತೆಂದನು.

ತಂದೆಯೇ ! ಲೋಕದಲ್ಲಿ ಮನುಷ್ಯರಿಂದ ನಡೆಯದ ಕಾರ್ಯವೊಂದಾದರೂ ವುಂಟೇ ? ತಾನು ಕಲಿತ ವಿದ್ಯೆಯನ್ನು ಪ್ರಚಾರಪಡಿಸುವುದು ಅಪಕೀರ್ತಿಗೆ ತರ ವಲ್ಲ. ನಿನಗೆ ತಿಳಿಯದ ಧರ್ಮಂಗಳಿರುವವೇ ? ಸೂರ್ಯವಂಶೋತ್ಪನ್ನರಾದ ದೊರೆ ಗಳಿಗೆ ಭಯವೆಂದರೇನು ! ಸರ್ವರಕ್ಷಕನಾದ ಹವ್ಯವಾಹನನ ವರಪ್ರಸಾದದಿಂದ ಲಬ್ಧನಾದ ನನಗೆ ಆ ಯಂತ್ರವನ್ನು ಹೊಡೆಯುವುದು ಅಸಾಧ್ಯವಲ್ಲ. ಅಪ್ಪಣೆ ಯನ್ನಿತ್ತು ನನ್ನನ್ನು ಕಳುಹುವವನಾಗೆಂದು ಬೇಡಲು ರಾಜನು ಎದೆಗುಂದಿ ಕುಪಿತ ಶರೀರವುಳ್ಳವನಾಗಿ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಮಗುವೇ !

ನೀನೀರೀತಿಯಾಗಿ ಮಾತನಾಡಬಹುದೇ ! ನಾನಿದುವರೆಗೂ ಅನೇಕ ಯಂತ್ರಗಳನ್ನು ನೋಡಿಯೂ ಮತ್ತು ಕೇಳಿಯೂ ಇರುವೆನು ಇದು ಅಸಾಧ್ಯವಾದ ಯಂತ್ರ. ಇಂದ್ರಾದಿದೇವತೆಗಳಿಗಾದರೂ ಸಾಧ್ಯವಾದದ್ದಲ್ಲ. ನಿನಗೆ ಅಂಥಾ ಸಾಹಸ ಮಾರ್ಗದ ಕೋರಿಕೆಯು ಉಚಿತವಲ್ಲವೆಂದು ಎಷ್ಟು ವಿಧವಾಗಿ ಶಾಂತ ವಚನಗಳನ್ನು ಹೇಳಿದರೂ ಮಗನು ಕೇಳದೆ ತಂದೆಯನ್ನು ಕುರಿತು ಎಲೈ ಜನಕನೇ ! ನಾನು ಆ ಯಂತ್ರವನ್ನು ಹೊಡೆದು ಆ ಕನ್ಯಾರತ್ನವನ್ನು ಸ್ವಯಂವರದಲ್ಲಿ ವರಿಸಿ ತರುವವರೆಗೂ ಈ ಪಟ್ಟಣವನ್ನು ಪ್ರವೇಶಮಾಡುವುದಿಲ್ಲವೆಂದು ಪ್ರತಿಜ್ಞೆಗೈದು ದಿಗ್ಗನೆದ್ದು ನಿಲ್ಲಲು, ತಂದೆಯು ನೋಡಿ ಬಹಳ ಚಿಂತಾಕ್ರಾಂತನಾಗಿ ಮಗನಮೇಲಣ ವ್ಯಾಮೋಹದಿಂದ ಏನೂ ತೋಚದೆ ತನ್ನ ಪಟ್ಟದರಸಿಯೊಡನೆ ಆಲೋಚನೆಯನ್ನು ಮಾಡಿ, ಚತುರಂಗ ಬಲವನ್ನೂ ರಣಶೂರರಾದ ಭಟರುಗಳನ್ನೂ ಅವನ ಸಹಾಯಕ್ಕೆ ಕೊಟ್ಟು, ಸಾಧ್ಯವಾಗದೇಹೋದರೆ ಪುನಃ ಇಲ್ಲಿಗೆ ಬರುವನಾಗೆಂದು ಮಗನಿಗೆ ಬೋಧಿಸಿ, ಆ ಮಾತನ್ನು ಭಟರಿಗೆ ಆಜ್ಞೆಗೈದು ಆಶೀರ್ವದಿಸಿ ಕಳುಹಿಸಿದನು.

ನಂತರ ಅಗ್ನಿದತ್ತಮಹಾರಾಯನು ಸೇನಾಸಮೇತನಾಗಿ ಪ್ರಯಾಣವನ್ನು ಬೆಳಸಿ, ಕೆಲವು ದಿವಸಗಳಿಗೆ ಕಾಶೀಪಟ್ಟಣವನ್ನು ಸೇರಿ, ಅಲ್ಲಿ ನೆರೆದಿರುವ ರಾಜಾಧಿರಾಜರ ಸಂಸರ್ಗವನ್ನು ತಪ್ಪಿಸಿಕೊಂಡು ಯಂತ್ರದ ಸಮೀಪಕ್ಕೆ ಬಂದನು. ನಂತರ ಕಾಶೀರಾಜನ ಪುರೋಹಿತನೊಬ್ಬನು ಎದ್ದುನಿಂತು ರಾಜಮಂಡಲಿಯನ್ನು ಕುರಿತು, ಎಲೈ ಪ್ರಭುಗಳಿರಾ ! ಇಲ್ಲಿರುವ ಕನ್ನಡಿಯಲ್ಲಿ ಯಂತ್ರವನ್ನು ಲಕ್ಷಿಸಿ, ಒಂದೇಬಾಣದಿಂದ ಹೊಡೆದವನನ್ನು ನಮ್ಮ ರಾಜಪುತ್ರಿಯು ವರಿಸುವಳೆಂದು ಹೇಳಿ ಕುಳಿತುಕೊಂಡನು. ಅಲ್ಲಿನ ರಾಜರುಗಳು ಆ ಮಾತನ್ನು ಕೇಳಿ, ಕನ್ನಡಿಯಲ್ಲಿ ಯಂತ್ರದ ಗುರುತನ್ನು ಹಿಡಿಯಲಾರದೆ ಆಹಾ ! ಇದು ದೇವತೆಗಳಿಗೂ ಅಸಾಧ್ಯವೆಂದು ಹೇಳಿ ಕೇವಲ ದುಃಖಾಕ್ರಾಂತರಾಗಿ ತಲೆಗಳನ್ನು ಬಗ್ಗಿಸಿಕೊಂಡು ಅವರವರ ಬಿಡಾರಗಳಿಗೆ ಹೋಗುತಲಿದ್ದರು. ಈ ಅಗ್ನಿದತ್ತರಾಯನಿಗೂ ಸಾಧ್ಯವಿಲ್ಲದೆ ವಿಚಾರಯುಕ್ತನಾಗಿ ತನ್ನ ಬಿಡಾರವನ್ನು ಸೇರಿ ಹಾ ! ದೈವವೇ ! ತಂದೆಯ ಮಾತನ್ನು ಕೇಳದೆ ಅಜ್ಞಾನದಿಂದ ಪಂಥಮಾಡಿ ಬಂದೆ ಇಲ್ಲಿ ಈ ಯಂತ್ರವನ್ನು ಹೊಡೆಯಲು ದೇವತೆಗಳಿಗೂ ಅಸಾಧ್ಯ. ಬಾಲ್ಯಭಾವದಿಂದ ಹಿರಿಯರನ್ನು ಲಕ್ಷ್ಯಮಾಡದೆ ಬಂದಮೇಲೆ ಕಾರ್ಯವನ್ನು ನೆರವೇರಿಸಿಕೊಳ್ಳದೆ ಹಿಂತಿರುಗಿ ಪಟ್ಟಣಕ್ಕೆ ಹೋಗುವುದಕ್ಕಿಂತಲೂ ಪ್ರಾಣವನ್ನು ಕಳೆದುಕೊಳ್ಳುವುದು ಲೇಸು ಒಂದುವೇಳೆ ತನ್ನ ಪ್ರಾಣವನ್ನು ತಾನೇ ಕಳೆದುಕೊಳ್ಳುವದು ಕೇವಲ ಪಾಪಕಾರ್ಯವೆಂದು ಅನೇಕ ಪುರಾತನರು ಹೇಳುವರು. ಇದಕ್ಕೇ

ನುಮಾಡಬೇಕೆಂದು ಮನಸ್ಸಿನಲ್ಲಿಯೇ ಬಹಳವಾಗಿ ಯೋಚಿಸಿ ದುಃಖಪಟ್ಟು, ಇವೆಲ್ಲಕ್ಕಿಂತಲೂ ಸನ್ಯಾಸಾಶ್ರಮವನ್ನು ತೆಗೆದುಕೊಂಡು ತಪೋವೃತ್ತಿಯಿಂದ ಕಾಲಕಳೆಯುವದೇ ಉತ್ತಮಕಾರ್ಯವೆಂದು ನಿಶ್ಚಯಿಸಿ, ರತ್ನಕಿರೀಟಗಳೇ ಮೊದಲಾದ ಆಭರಣಗಳನ್ನು, ಉಡಿಗೆತೊಡಿಗೆಗಳನ್ನು ತೆಗೆದುಹಾಕಿ, ಹಳೆದಾದ ಜೀರ್ಣವಸ್ತ್ರವಂ ಧರಿಸಿಕೊಂಡು ಧನುರ್ಬಾಣಗಳಂ ಕೈಕೊಂಡು ತನ್ನ ಸೇನಾನಾಯಕರಿಗೂ ಅರಿಯದಂತೆ ಅರ್ಧರಾತ್ರಿಯೊಳೆದ್ದು ಒಂಟಿಯಾಗಿ ಪ್ರಯಾಣಮಾಡತೊಡಗಿದನು. ಬೆಳಗಾದನಂತರ ಸೈನಿಕರು ತಮ್ಮ ರಾಜಪುತ್ರನನ್ನು ಕಾಣದೆ ಆತನ ವಸ್ತ್ರಾಭರಣಗಳಂ ಕಂಡು, ಕೇವಲ ಭಯದಿಂದ ಅವನು ಹೋದದಾರಿಯನ್ನರಿಯದೆ ದುಃಖಪಡುತ್ತಾ, ತಮ್ಮ ಪಟ್ಟಣಕ್ಕೆ ಹಿಂತಿರುಗಿ ಬರುತಲಿದ್ದರು.

ಅತ್ತಲಾ ಅಗ್ನಿದತ್ತನು ಘೋರವಾದ ಅರಣ್ಯದಲ್ಲಿ ನಡೆದು ಹೋಗುತ್ತಾ ಕಾಲುಗಳಲ್ಲಿ ತಗುಲಿದ ಮುಳ್ಳುಗಳ ಬಾಧೆಗೆ ವ್ಯಸನಪಡುತ್ತಾ, ಬಿಸಲಿನ ಜ್ವಾಲೆಗೆ ಪರಿತಪಿಸಿ, ಬಳಲಿ ನಡೆಯಲಾರದೆ, ಮರಗಳ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಾ, ಕೆಲವು ದಿವಸಗಳಿಗೆ ಜಟಿಲನೆಂಬ ಮಹರ್ಷಿಯ ಆಶ್ರಮಕ್ಕೆ ಬಂದು ಆತನನ್ನು ನೋಡಿ ನಮಸ್ಕರಿಸಿ, ಎಲೈ ಮಹರ್ಷಿಯೇ ! ನಾನು ದಿಕ್ಕಿಲ್ಲದ ರಾಜನಂದನನು, ಮೋಕ್ಷವನ್ನಪೇಕ್ಷಿಸಿ ಬಂದಿರುವೆನು. ನಿಮ್ಮ ಶಿಷ್ಯರಲ್ಲಿ ನನ್ನನ್ನು ಒಬ್ಬನನ್ನಾಗಿ ಭಾವಿಸಿಕೊಳ್ಳಬೇಕೆಂದು ವಿನಯದಿಂದ ಪ್ರಾರ್ಥಿಸಲು, ಆ ಋಷಿಶ್ರೇಷ್ಠನು ರಾಜನಂದನನ ಬಾಲ್ಯಾವಸ್ಥೆಯನ್ನು ನೋಡಿ, ತಪೋವೃತ್ತಿಯು ಸುಲಭವೆಂದೆಣಿಸಿ ನೀನು ಬಂದಿರುವಹಾಗೆ ತೋರುವುದು. ಅಯ್ಯೋ ! ಅದು ಮಹಾಕಷ್ಟ. ನಮ್ಮಂಥಾವರೇ ನಿಜವನ್ನು ತಿಳಿಯದೆ ಅನೇಕ ಯುಗಗಳಿಂದಲೂ ಈ ಘೋರಾರಣ್ಯದಲ್ಲಿ ಕಾದಿರುವೆವು ನೀನು ಸುಕುಮಾರನಾದುದರಿಂದ ಬಂದ ದಾರಿಯನ್ನೆ ಹಿಡಿದು ಹೋಗುವವನಾಗೆನಲು, ರಾಜಪುತ್ರನು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಮುನೀಂದ್ರನೇ ! ನಾನೀ ಸ್ಥಳದಿಂದ ಮತ್ತೆಲ್ಲಿಗೂ ಹೋಗಲಾರೆ. ಮೋಕ್ಷಾಪೇಕ್ಷೆಯುಳ್ಳವನಾಗಿ ಬಹಳವಾದ ಕಷ್ಟಗಳನ್ನನುಭವಿಸಿದೆನು. ನೀವು ಉಪೇಕ್ಷಿಸುವವದಾದರೆ ಇನ್ನು ಪ್ರಾಣವನ್ನು ತೊರೆದುಕೊಳ್ಳುವದೆ ನಿಜವೆನಲು ಮುನಿಯು ಆತನ ಮನೋನಿಶ್ಚಯವನ್ನು ತಿಳಿದು ದಯಾರಸಪೂರಿತನಾಗಿ ಅತನನ್ನು ಸಮೀಪದೊಳು ಕುಳ್ಳಿರಿಸಿಕೊಂಡು, ಎಲೈ ರಾಜಪುತ್ರನೇ ! ಲಾಲಿಸು, ಪಾವನತರಗಳಾದ ಪಂಚಮುದ್ರೆಗಳನ್ನು ತಿಳಿಸುವೆನು. ಸಾಕ್ಷಾತ್ಪರಶಿವ ಮೂರ್ತಿಯು ನಿನಗೆ ಇಷ್ಟಸಿದ್ಧಿಯನ್ನು ಅಪವರ್ಗವನ್ನು ಕೊಡುವೆನೆಂದು ನುಡಿದು ಆ ಮಹರ್ಷಿಯು ಬೋಧಿಸಲಾರಂಭಿಸಿದನು.



ಅಗ್ನಿದತ್ತಮಹಾರಾಯ.



ಜಟಿಲಮಹರ್ಷಿಯು.

## ಅಗ್ನಿದತ್ತಮಹಾರಾಯನಿಗೆ ಜಟಿಲಮಹರ್ಷಿಯು ಹೇಳಿದ ಪಂಚಮುದ್ರೆಗಳ ಪ್ರಭಾವ

ಎಲೈ ಅಗ್ನಿದತ್ತನೇ ! ಶ್ರದ್ಧಾಸಕ್ತನಾಗಿ ದೇವತಾರಹಸ್ಯವನ್ನು ಲಾಲಿಸು ಪಂಥಾವನಾಗು ಪ್ರಾಚೀನರು ಗುರುಮುಖದಿಂದ ನಮಶ್ಶಿವಾಯ ಎಂಬುವ ಪಂಚಾಕ್ಷರೀ ಮಂತ್ರವನ್ನು ಗ್ರಹಿಸಿದವರಾಗಿ ಶಾಶ್ವತಮಾದ ಪುಣ್ಯಲೋಕಗಳನ್ನೈದಿದರು, ನೀನು ಅದನ್ನು ಅರಿಯುವನಾಗೆಂದು ಆ ಪಂಚಾಕ್ಷರಗಳಿರುವ ಸ್ಥಾನಗಳನ್ನು ತೋರಿಸಿ, ಓಂಕಾರದಲ್ಲಿ ನಿಲ್ಲಿಸಿ, ಆ ಪ್ರಣವ ಸ್ವರೂಪವನ್ನು ವರ್ಣಿಸಿ, ಮಾನಸ ಪುತ್ರನೇ ! ಪದ್ಮಾಸನದಲ್ಲಿ ಕುಳಿತುಕೊಂಡು ಸೊಂಟವನ್ನು ನಿಲ್ಲಿಸಿ, ಮುಖವನ್ನು ಬೊಗ್ಗಿಸಿಕೊಂಡು ಕಣ್ಣುಗಳನ್ನು ತೆರೆದು ಮೂಗಿನ ಕೊನೆಯಮೇಲೆ ದೃಷ್ಟಿಯನ್ನು ನಿಲ್ಲಿಸಿನೋಡಿ ಅದರಲ್ಲಿ ಕಾಣುವ ವಿಶೇಷಗಳನ್ನು ಹೇಳು, ಇದೆ ಭೂಚರಮುದ್ರೆ ಎಂತಲೂ, ಇದಕ್ಕೆ ಪೃಥಿವಿಯೇ ಅಧಿದೇವತೆ ಎಂಬದಾಗಿ ತಿಳಿಯುವವನಾಗು ಎಲೈ ಮಾನಸಪುತ್ರನೇ ! ಪದ್ಮಾಸನದಲ್ಲಿ ಕುಳಿತು ಸೊಂಟವನ್ನೆತ್ತಿ, ಮೇಲ್ಮುಖವಾಗಿ ಕಣ್ಣುಗಳನ್ನು ಮುಚ್ಚಿಕೊಂಡು ತ್ರಿಕೂಟಸ್ಥಾನದಲ್ಲಿ ದೃಷ್ಟಿ ಇರಿಸಿದರೆ ಅದು ಅಂತರ್ಖೇಚರಿ ಕಣ್ಣುಗಳನ್ನು ತೆರೆದು ನೋಡಿದರೆ ಬಹಿರ್ಖೇಚರಿಯು, ಈ ಉಕ್ತವಾದ ಎರಡು ವಿಧಗಳನ್ನು ನೋಡಿ ಹೇಳು ಇವು ಖೇಚರೀಮುದ್ರೆ. ಇದಕ್ಕೆ ಆಕಾಶವು ಆಧಿದೇವತೆಯಾಗಿರುವದು. ಎಲೈ ರಾಜಪುತ್ರನೇ ! ಪದ್ಮಾಸನದಲ್ಲಿಯೇ ಕುಳಿತುಕೊಂಡು ಸೊಂಟವನ್ನೆತ್ತಿ ಮುಖವನ್ನು ಸಮನಾಗಿ ನಿಲ್ಲಿಸಿಕೊಂಡು ಕಣ್ಣುರೆಪ್ಪೆಗಳೆರಡೂ ಸೇರದಂತೆ ನಿಲ್ಲಿಸಿ

ಕೊಂಡು ನೀಲಪ್ರಭೆಯಂತೆ ಹೊರಡುವ ಪ್ರಕಾಶವನ್ನು ಅಂತ್ಯವಳಿಗೆ ಸೇರಿಸಿ ಒಳಗಡೆಯಲ್ಲಿ ನೋಡುವವನಾಗು, ಇದೇ ಅಂತರ್ಲಕ್ಷ್ಯ ಮುದ್ರೆ, ಇದಕ್ಕೆ ಚಂದ್ರ ಸೂರ್ಯರಿಬ್ಬರೂ ಅಧಿದೇವತೆಗಳೆಂಬದಾಗಿ ತಿಳಿಯುವವನಾಗು. ಕೇಳೌ ಪುಷ್ಯಾತ್ರನೇ ! ಪದ್ಮಾಸನದಲ್ಲಿ ಕುಳಿತವನಾಗಿ ಸೊಂಟವನ್ನೆತ್ತಿ ಆರು ಬೆರಳುಗಳಿಂದ ಕಿವಿಗಳನ್ನು ಮೂಗಿನ ರಂಧ್ರಗಳನ್ನೂ ಮುಚ್ಚಿಕೊಂಡು ಪ್ರಾಣಾಪಾನಗಳನ್ನು ಒಂದಾಗಿ ಸೇರಿಸಿ, ತ್ರಿವೇಣಿ ಸಂಗಮದಿಂದ ಕೂಡಿದ ದೃಷ್ಟಿಯೊಡನೆ ಹಂಸವನ್ನು ಸೇರಿಸಿ ನೋಡುವವನಾಗು, ಇವು ಷಣ್ಮುಖಿಮುದ್ರೆ, ಇದಕ್ಕೆ ಗುರುವೆ ಅಧಿದೇವತೆ. ಎಲೈ ಶಿಷ್ಯನೇ, ಎಡದಕಾಲಿನ ಹಿಮ್ಮಡಿಯನ್ನು ಗುದಸ್ಥಾನದ ಕೆಳಗಡೆಯಲ್ಲಿಯೂ, ಮತ್ತೊಂದುಕಾಲಿನ ಹಿಮ್ಮಡಿಯನ್ನು ತೊಡೆಗಳ ಸಂದಿನೊಳಗೂ ಇಟ್ಟುಕೊಂಡು ತೊಡೆಗಳಮೇಲೆ ಕೈಗಳನ್ನಿಟ್ಟು ಸೊಂಟವನ್ನು ಸರಿಯಾಗಿ ನಿಲ್ಲಿಸಿಕೊಂಡು ಪ್ರಾಣಾಪಾನಗಳನ್ನು ಒಂದಾಗಿ ಸೇರಿಸಿ, ಹಂಸವನ್ನು ತ್ರಿವೇಣೀ ಸಂಗಮದಲ್ಲಿ ನಿಲ್ಲಿಸಿ ನೋಡು, ಇದೇ ಶಾಂಭವೀ ಮುದ್ರೆ ಇದಕ್ಕೆ ಸಾಕ್ಷಾತ್ ಪರಶಿವನು ಅಧಿದೇವತೆ ಎಂಬದಾಗಿ ಮುನೀಂದ್ರನು ಪಂಚಮುದ್ರೆಗಳ ಧರ್ಮಗಳನ್ನು ನಿರೂಪಿಸಿ, ಮೇಲೆ ಹೇಳಿದವುಗಳನ್ನೆಲ್ಲಾ ಪರೀಕ್ಷಿಸಿ, ತಿಳಿಯುವನಾಗೆಂದು ರಾಜತನಯನಿಗೆ ಅನುಗ್ರಹಿಸಲಾಧೀರನು ವೈರಾಗ್ಯದಿಂದ ಸಮಾಧಿಯೊಳು ನಿಂತು ಒಂದೊಂದು ಮುದ್ರೆಯನ್ನು ಪರೀಕ್ಷಿಸಿ ನೋಡುತ್ತಾ ಅವುಗಲ್ಲಿ ತೋರಿದವುಗಳನ್ನೆಲ್ಲಾ ನೋಡಿದವನಾಗಿ ಆಶ್ಚರ್ಯವನ್ನು ಹೊಂದಿ, ಮುನಿಯ ಪಾದಕಮಲಗಳಿಗೆರಗಿ ಮಹಾನುಭಾವನೇ ಪಂಚಮುದ್ರೆಗಳೊಳಗೆ ಭೂಚರಿಮುದ್ರೆ ಎಂಬುದರಿಂದ ಸೂರ್ಯಚಂದ್ರರ ಬಿಂಬಗಳು ಕ್ಷಣಮಾತ್ರವೂ ನಿಲ್ಲಲಾರದೆ ಆಗಾಗ್ಗೆ ಚಲಿಸುತಲಿರುವುದೇ ಹೊರತು ಸ್ಥಾಯೀಭಾವದಲ್ಲಿಲ್ಲ. ಆದಕಾರಣ ಭೂಚರೀಮುದ್ರೆಯಿಂದ ಪ್ರಯೋಜನವೆ ಕಾಣುವುದಿಲ್ಲ ಖೇಚರೀಮುದ್ರೆಯು ಬಹಳ ಕಷ್ಟವಾದಾಗ್ಯೂ ನಾನಾವರ್ಣಗಳಾದ ಥಳಥಳಿಸುವಿಕೆಯೂ ಮಂಡಲತ್ರಯವೂ, ವಿಚಿತ್ರಗಳಾದ ವರ್ಣಗಳೂ ಕಾಣಬರುವವು ಅಂತರ್ಲಕ್ಷ್ಯವಾದ ಮುದ್ರೆಯು ಅದ್ಭುತಾನಂದವಾಗಿರುವುದು. ಷಡಾಧಾರಗಳಾಗಿಯೂ ನಾನಾವಿಧ ಥಳಥಳ್ಯಗಳಾಗಿಯೂ ಅರುಬಣ್ಣಗಳಾಗಿಯೂ ಇರುವದರಿಂದ ಅತ್ಯಂತ ಪ್ರಕಾಶವು ತೋರಿಬರುವುದು. ಷಣ್ಮುಖಿ ಮುದ್ರೆಯು ಕೇವಲ ಕಷ್ಟಸಾಧ್ಯವಾಗಿರುವುದಲ್ಲದೆ ಭೇರಿ ಇಲ್ಲ ಬಹುಪ್ರಕಾರವಾದ ಹತ್ತುನಾದಗಳನ್ನು ಕೇಳುತ್ತಾ ನಾನಾಬಗೆಯಾದ ಥಾಳಥಳ್ಯಗಳನ್ನೂ ಚಿತ್ಕಳೆಯನ್ನೂ ದಾಟಿ, ಷಡಾಧಾರಗಳನ್ನತಿಕ್ರಮಿಸಿ, ಜ್ಯೋತಿಪ್ರಕಾಶದಲ್ಲಿ ನಿಂತುಕೊಂಡು ಚೆನ್ನಾಗಿ ಈಕ್ಷಿಸಿದೆನು ಶಾಂಭವೀ ಮುದ್ರೆಯನ್ನು ಪರೀಕ್ಷಾಮಾರ್ಗದಿಂದ ಹಿಡಿಯಲಸಾಧ್ಯ. ಆದರೂ ಇದು ಎಲ್ಲಾ ಮುದ್ರೆಗಳಿಗಿಂತಲೂ ಶ್ರೇಷ್ಠವಾದದ್ದೆಂದು ಹೇಳಬಹುದು. ಇದು ಅಪರಿಮಿತಾನಂದಪ

ನ್ನುಂಟುಮಾಡುತ್ತಾ ಸೂರ್ಯಚಂದ್ರರ ಕಾಂತಿಗಳಿಗಧಿಕವಾದಂಥಾ ದಿವ್ಯತರ ಮಾದ ಜ್ಯೋತ್ಸ್ನಾವಿಸ್ತಾರವು ಸಂಭವಿಸಿತು. ಎಂದೀರೀತಿಯಾಗಿ ನುಡಿದ ಶಿಷ್ಯನ ವಚನಗಳಿಗೆ ಋಷಿಶ್ರೇಷ್ಠನು ಸಂತೋಷಮಾನಸನಾಗಿ ಆತನನ್ನು ಆಲಿಂಗಿಸಿ ಮುದ್ದಿಡಲು ರಾಜಸೂನುವು ಆ ಮಹಾನುಭಾವಂಗೆ ಶುಶ್ರೂಷೆಯಂ ಮಾಡುತ್ತಾ ಅಲ್ಲಿಯೇ ಸಮಾಧಿನಿಷ್ಠಾತತ್ಪರನಾಗಿರುತಲಿದ್ದನು. ಈ ಅಂತರಾಳದಲ್ಲಿ ಅಗ್ನಿ ದತ್ತನನ್ನು ಕಾಣದೆ ದುಃಖಿತರಾದ ಅವನ ಸೈನಿಕರು ತಮ್ಮ ಪಟ್ಟಣವನ್ನು ಸೇರಿ ಚಿರಕೀರ್ತಿರಾಯನಿಗೆ ನಡೆದ ವೃತ್ತಾಂತಗಳನ್ನು ಬಿನ್ನೈಸಲಾಗಿ ಆತನು ಪತ್ನೀಸ ಮೇತನಾಗಿ, ಪುತ್ರನ ವಿಯೋಗದುಃಖವನ್ನು ತಡೆಯಲಾರದೆ ನಿರಾಹಾರಗಳನ್ನು ತ್ಯಜಿಸಿ, ಅಗ್ನಿಯನ್ನು ಕುರಿತು ಯಜ್ಞವನ್ನು ಮಾಡಲು ಅಗ್ನಿದೇವನು ಪ್ರತ್ಯಕ್ಷ ನಾಗಿ, ಎಲೈ ಭೂಪಪಾಲಕನೇ ! ನಿನ್ನ ತನಯನು ಜಟಿಲಮಹರ್ಷಿಯ ಆಶ್ರ ಮವನ್ನು ಸೇರಿ ಆ ಮುನೀಂದ್ರನ ಬಳಿಯಲ್ಲಿ ತಪೋನಿಷ್ಠನಾಗಿರುವನೆಂದು ಹೇಳಿ ಅಂತರ್ಧಾನನಾದನು. ತರುವಾಯ ಚಿರಕೀರ್ತಿರಾಯನು, ಅಷ್ಟಕ್ಕೆ ಸ್ವಲ್ಪ ಸಂತೋಷಪಟ್ಟವನಾಗಿ, ಧೈರ್ಯವನ್ನವಲಂಬಿಸಿ, ತನ್ನ ಪಟ್ಟಣದಲ್ಲಿರುವ ಚತು ರಂಗಬಲವನ್ನು ನಾಲ್ಕುಭಾಗಗಳಾಗಿ ವಿಂಗಡಿಸಿ, ಅವರನ್ನು ಕುರಿತು ಎಲೈ ಸೈನಿ ಕರಿರಾ ! ನೀವು ತಕ್ಷಣವೇ ಇಲ್ಲಿಂದ ತೆರಳಿ ಜಟಿಲಮಹರ್ಷಿಯ ಆಶ್ರಮವು ಎಲ್ಲಿ ರುವುದೋ ತಿಳಿದು ಆ ಮುನಿಯ ಸಮೀಪದಲ್ಲಿ ತಪೋವೃತ್ತಿಯನ್ನನುಸರಿಸುತಲಿ ರುವ ನನ್ನ ಪುತ್ರನಾದ ಅಗ್ನಿದತ್ತನನ್ನು ಕರೆತರಬೇಕೆಂದು ನಿಯಮಿಸಿ, ನಾಲ್ಕು ದಿಕ್ಕುಗಳಿಗೂ ಕಳುಹಿಸಿದನು. ಈ ಸೈನಿಕರಲ್ಲಿ ಪಶ್ಚಿಮೋತ್ತರದಿಕ್ಕುಗಳನ್ನು ಕುರಿತು ಹೋದವರು, ಅನೇಕ ಬೆಟ್ಟಗುಡ್ಡಗಳನ್ನು, ಗುಹೆಗಳನ್ನು ಋಷ್ಯಾಶ್ರ ಮಗಳನ್ನು ತಿರುಗುತ್ತಾ ಆರುತಿಂಗಳಿಗೆ ಜಟಿಲಮಹರ್ಷಿಯ ಆಶ್ರಮವನ್ನು ಸೇರಿ, ಆ ಮುನಿವನ ಸಮೀಪದಲ್ಲಿ ತಪೋನಿಷ್ಠನಾಗಿರುವ ಅಗ್ನಿದತ್ತನನ್ನು ಕಂಡು ಇವನೇ ನಮ್ಮೊಡೆಯನ ತನಯನೆಂದು ಗುರ್ತಿಸಿ, ಋಷಿಗೆ ಅಭಿನಂದಿಸಿ ಆತನಿಗೆ ಈ ರಾಜನಂದನನ ತಂದೆತಾಯಿಗಳು ಇವನಿಗಾಗಿ ಪಡುತಲಿರುವ ದುಃಖವನ್ನೂ, ಅಗ್ನಿಯ ವರದಿಂದ ಜನಿಸಿದ ವರ್ತಮಾನವನ್ನೂ, ಪುನಃ ಇವನು ಇಲ್ಲಿರುವ ವೃತ್ತಾಂತವನ್ನು ಅಗ್ನಿದೇವರ ಮುಖದಿಂದ ತಿಳಿದ ಸಮಾಚಾರಗಳನ್ನೆಲ್ಲಾ ವಿಸ್ತಾರವಾಗಿ ತಿಳಿಸಲು ಆ ಮುನಿಪನು ಆಶ್ಚರ್ಯವನ್ನು ಹೊಂದಿ, ರಾಜತನ ಯನನ್ನು ಕರೆದು, ಎಲೈ ರಾಜಪುತ್ರನೇ ! ನೀನು ಸೂರ್ಯವಂಶೋತ್ಪನ್ನನಾಗಿಯೂ ಯಾರೂ ದಿಕ್ಕಿಲ್ಲನೆಂದು ನನ್ನೊಡನೆ ಸುಳ್ಳುಮಾತುಗಳನ್ನಾಡಿದವನಾದೆ. ಆದರೆ ಸುಳ್ಳುಹೇಳುವ ದೋಷಕ್ಕಿಂತ ಅಧಿಕವಾದ ದೋಷವೆ ಲೋಕದಲ್ಲಿಲ್ಲ. ನಿನ್ನ ತಂದೆತಾಯಿಗಳು ನಿನ್ನ ನಿಮಿತ್ತ ಪ್ರಾಣಗಳನ್ನು ತೊರೆದುಕೊಳ್ಳುವದಕ್ಕೆ ಸಿದ್ಧ ರಾಗಿರುವರಂತೆ, ಜಾಗ್ರತೆಯಾಗಿ ಈ ಸೇನಾನಾಯಕರ ಜೊತೆಯಲ್ಲಿ ಹೋಗೆಂದು

ಹೇಳಲಾಗಿ, ರಾಜಪುತ್ರನು ಋಷಿಯ ಪಾದಗಳಿಗೆರಗಿ, ಎಲೈ ಮುನಿಯೇ! ತಮ್ಮ ಕಟಾಕ್ಷಕ್ಕೆ ಪಾತ್ರನಾದ ನನಗೆ ಅನೃತದೋಷವು ಸಂಭವಿಸಲಾರದು. ನಾನು ಕಾಶೀರಾಜನ ಪುತ್ರಿಯಾದ ಶರಚ್ಚಂದ್ರಿಕಾಮಣಿಯನ್ನು ವಿವಾಹಮಾಡಿಕೊಳ್ಳದೆ ನಮ್ಮ ಪಟ್ಟಣಪ್ರವೇಶವನ್ನು ಮಾಡುವದಿಲ್ಲವೆಂದು ನಮ್ಮ ತಂದೆಯ ಸನ್ನಿಧಿಯಲ್ಲಿ ಪ್ರತಿಜ್ಞೆಯಂ ಮಾಡಿಕೊಂಡು ಬಂದಿರುವೆನು. ವಿಫಲಯತ್ನವುಳ್ಳವನಾಗಿ ಜನನೀಜನಕರಿಗೆ ಮುಖವಂ ತೋರಿಸುವುದಿಲ್ಲ. ನನಗೆ ರಾಜ್ಯವು ಮತ್ತು ಅಲ್ಪವಾದ ಸುಖಗಳು ಅವಶ್ಯಕವಿಲ್ಲವೆಂದು ಹೇಳಲು ಆ ತಪೋಧನನು ಎಲೈ ರಾಜನಂದನನೇ! ನಿನ್ನ ಪಾಪರಾಶಿಗಳೆಲ್ಲಾ ಕಳೆದು ಪವಿತ್ರನಾಗಿರುವೆ, ಪಂಚಮುದ್ರೆಗಳನ್ನಭ್ಯಸಿಸಿದ ಬಳಿಕ ಪಂಚಭೂತಗಳು, ಸೂರ್ಯಚಂದ್ರರೂ ಪರಮೇಶ್ವರನೂ ಇವರೆಲ್ಲರೂ ನಿನಗೆ ಸಹಾಯಕರಾಗಿರುವರು. ನೀನು ಸಂಶಯ ಪಡದೆ ಆ ಯಂತ್ರವನ್ನು ಹೊಡೆದು ಶರಚ್ಚಂದ್ರಿಕಾಮಣಿಯನ್ನು ವಿವಾಹವನ್ನು ಮಾಡಿಕೊಳ್ಳೆಂದು ಅನುಗ್ರಹಿಸಲಾಗಿ, ರಾಜಪುತ್ರನು ಆ ಮಹರ್ಷಿಯ ಅಪ್ಪಣೆಯನ್ನು ಪಡೆದು ತನ್ನ ಸೈನ್ಯಗಳನ್ನು ಕರೆದುಕೊಂಡು ಕಾಶೀಪುರವನ್ನು ಕುರಿತು ತೆರಳಿದನು.

ಇಷ್ಟರಲ್ಲಿ ಕಾಶೀದೇಶಾಧಿಪನಾದ ಶಶಾಂಕಮಹಾರಾಯನು ತಾನು ನಿಯಮಿಸಿದ ಶುಕಯಂತ್ರವನ್ನು ಹೊಡೆಯುವುದಕ್ಕೆ ಮನುಷ್ಯರಿಗೆ ಶಕ್ಯವಿಲ್ಲವೆಂದು ತಿಳಿದು ಕೇವಲ ವಿಚಾರಪರನಾಗಿ ತನ್ನ ಸಭೆಯವರನ್ನು ಕುರಿತು, ಎಲೈ ಮಂತ್ರಿ ಮೊದಲಾದ ಸಾಮಾಜಿಕರೇ ನನ್ನ ಪುತ್ರಿಯಾದ ಶರಚ್ಚಂದ್ರಿಕೆಯ ಸ್ವಯಂವರವು ಎರಡುವರ್ಷಗಳ ಹಿಂದೆಯೇ ಪ್ರಕಟಿಸಲ್ಪಟ್ಟಿತು ರಾಜರುಗಳೆಲ್ಲರೂ ಅದನ್ನು ಹೊಡೆಯಲಾರದೆ ಖಿನ್ನರಾಗಿ ವಿಮುಖರಾದರು. ಇದಕ್ಕೆ ನಾವೇನು ಮಾಡಬೇಕೆಂಮ ಕೇಳಲು, ಆತನ ಮಂತ್ರಿಯೋರ್ವನು ಸಾವಕಾಶದಿಂದ ಯೋಚಿಸಿ, ರಾಜನನ್ನು ಕುರಿತು, ಧೊರೆಯೇ! ನಿನ್ನ ಪ್ರಯತ್ನವು ಸಿದ್ಧಿಸುವುದಕ್ಕೆ ಸಂಶಯವಿಲ್ಲ, ತ್ವರೆಮಾಡಬೇಡ, ಮೂರುಸಂವತ್ಸರಗಳವರೆಗೂ ನಿಧಾನಿಸುವುದುಚಿತವೆನಲು ರಾಜನು ಸಮ್ಮತಿಸಿ ಬೇಕಾದ ಮಹೋತ್ಸವಗಳನ್ನು ನಡೆಸುತ್ತಲಿದ್ದನು. ಆಗಲಾ ಅಗ್ನಿದತ್ತನು ಅಲ್ಲಿಗೆ ಬಂದು ಯಂತ್ರದ ಸಾಮಿಪ್ಯವನ್ನು ಹೊಂದುತ್ತಿರಲಾಗಿ ಇತರ ದೇಶದ ರಾಜರೆಲ್ಲರೂ ನೋಡುತ್ತಾ ವಿಸ್ಮಯಪಟ್ಟು, ಓಹೋ! ಇವನು ಓರ್ವ ಮುನಿನಂದನನಂತಿರುವನು, ಕೃಷ್ಣಾಜಿನ ದಂಡಕಮಂಡುಲ ಜಟಾವಲ್ಕಲಗಳನ್ನೂ ನಾರುಶೀರೆಗಳನ್ನೂ ಧರಿಸಿ, ತೇಜೋವಂತನಾಗಿದ್ದಾನೆ, ಈ ಸನ್ಯಾಸಿಯು ಅಸ್ತ್ರಶಸ್ತ್ರಗಳನ್ನು ಧರಿಸಿ, ಯಂತ್ರಭೇದಕ್ಕೆ ಹೋಗುತ್ತಿರುವುದು ಆಶ್ಚರ್ಯಕರವಾಗಿರುವುದು. ಈ ಶರಚ್ಚಂದ್ರಿಕೆಯು ಈತನನ್ನು ವರಿಸಿ ಇವನ ವಶವಾಗುವಳೋ ಏನೋ ಎಂದು ಕೆಲವರು ವ್ಯಸನಪಡುತ್ತಲೂ, ಮತ್ತೆ ಕೆಲವರು

ಈತನು ತ್ರಿಮೂರ್ತಿಗಳಲ್ಲಿ ಒಬ್ಬನು ಈ ವೇಷವನ್ನು ಧರಿಸಿ ಬಂದಿರುವನೋ ಏನೋ ಎಂದು ಮಾತನಾಡುತ್ತಲೂ, ಇನ್ನೂ ಕೆಲವರು ಉತ್ತಮರಾದ ಯೋಗ ಪುರುಷರಿಗೆ ಅಸಾಧ್ಯವಾದದ್ದು ಯಾವುದೂ ಇಲ್ಲವೆಂತಲೂ ಈ ಅಸತ್ಯವಾದ ಪ್ರಪಂಚವನ್ನು ಬಿಟ್ಟು ಸನ್ಯಾಸಾಶ್ರಮವೇ ಯೋಗ್ಯವಾಗಿರುವುದೆಂಬದಾಗಿಯೂ ಈ ಪ್ರಕಾರ ತಮ್ಮೊಳಗೆ ತಾವೇ ಮಾತನಾಡಿಕೊಳ್ಳುತಲಿದ್ದರು. ಅಗ್ನಿದತ್ತನು ರಾಜರುಗಳ ಕಿವಿಗಳು ಕಿವುಡಾಗುವಂತೆ ಧನುಷ್ಟಂಕಾರವನ್ನು ಮಾಡಿ, ಬಾಣ ವನ್ನು ಸಂದಿಸಿ ಕನ್ನಡಿಯಲ್ಲಿ ನೋಡಿ, ಸದ್ಗುರುವನ್ನು ಮನವೊಳು ಧ್ಯಾನಿಸಿ ಪ್ರಯೋಗಿಸಲು, ಆ ಬಾಣವು ಅಗ್ನಿರೂಪವನ್ನು ತಾಳ್ದು ಬೆಂಕಿಯ ಕಿಡಿಗಳನ್ನು ಗುಳುತ್ತಾ ಚಟಪಟಿಯೆಂಬ ಶಬ್ದಗಳೊಡನೆ ಇಂದ್ರಾದಿ ದೇವತೆಗಳಿಗೂ ಅಷ್ಟದಿ ಕ್ಪಾಲರಿಗೂ ಕಂಪಾಯಮಾನವಾಗುವಂತೆ ಆ ಶುಕಯಂತ್ರವನ್ನು ಭೂಮಿಯ ಮೇಲೆ ಕೆಡವಿತು. ಇದನ್ನು ನೋಡುತ್ತಿದ್ದ ಶಶಾಂಕಮಹಾರಾಯನು ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡು ಓಹೋ ! ಇದೇನು ಅನ್ಯಾಯ ಈ ಮುನಿಪುತ್ರನು ಎಲ್ಲಿಂದ ಬಂದನು. ಆಯಾಸರಹಿತನಾಗಿ ಈ ಯಂತ್ರವನ್ನು ಹೊಡೆಯಲು ಕಾರಣವೇನು ನನ್ನ ಮೋಹದ ಪುತ್ರಿಯನ್ನು ಹೇಗೆ ಅಡವಿಯಪಾಲು ಮಾಡಲಿ, ಮೊದಲೇ ಈ ಯಂತ್ರವನ್ನು ತಪ್ಪಿಸದೇಹೋದುದು ಈಗ ವ್ಯಸನಕ್ಕೆ ಕಾರಣವಾ ಯಿತೆಂದು ಮೂರ್ಛಾಕ್ರಾಂತನಾದನು. ಆಗ ಆ ರಾಜಪುತ್ರಿಯು ತಂದೆಯನ್ನು ಮೂರ್ಛೆಯಿಂದೆಬ್ಬಿಸಿ, ತಂದೆಯೇ ! ಈ ಯಂತ್ರವನ್ನು ಭೇದಿಸಿದವನು ಇಂದ್ರನೋ ಚಂದ್ರನೋ ಅಲ್ಲದೆ ಉಪೇಂದ್ರನೋ ಇವರಲ್ಲಿ ಯಾರೋ ಒಬ್ಬನಾ ಗಿರಬೇಕಲ್ಲದೆ ನಿಜವಾದ ಮುನಿಪುತ್ರನಲ್ಲ. ಶರೀರವು ಶೋಷಿಸಿ, ಜಟಾವಲ್ಕಲ ಗಳನ್ನು ಧರಿಸಿದ್ದಾಗ್ಯೂ ಈ ತನ ಮುಖದಲ್ಲಿ ರಾಜ್ಯಲಕ್ಷ್ಮಿಯು ತಾಂಡವವಾಡು ತಲಿರುವುದರಿಂದಲೂ, ದೇವತೆಗಳು ದೇವದುಂದುಭಿಗಳನ್ನು ಬಾರಿಸುತ್ತಲಿರುವು ದರಿಂದಲೂ ಈ ಕಾಲದಲ್ಲಿ ನೀನು ಶಾಂತತ್ವವನ್ನು ಹೊಂದುವನಾಗೆಂದು ಹೇಳಿ ದಳು. ಅನಂತರ ಆಂಧ್ರದೇಶದ ಸೈನಿಕರು ಶಶಾಂಕಮಹಾರಾಯನನ್ನು ಕುರಿತು ಎಲೈ ರಾಜೇಂದ್ರನೇ ! ಈತನು ಆಂಧ್ರದೇಶದ ರಾಜಪುತ್ರನು. ನಿನ್ನ ಮಗಳ ನಿಮಿತ್ತವಾಗಿ ಸನ್ಯಾಸವಂ ಸ್ವೀಕರಿಸಿ, ಎರಡುವರುಷಗಳು ತಪೋವೃತ್ತಿಯಿಂದ ಜಟಿಲಮಹರ್ಷಿಯ ಆಶ್ರಮದೊಳಿದ್ದು ಆತನಿಂದನುಜ್ಞೆಯಂ ಪಡೆದು ಬಂದಿ ರುವ ಪುಣ್ಯಾತ್ಮನೆಂದು ಹೇಳಿಜಯಭೇರಿಗಳನ್ನು ಹೊಡೆದರು. ಬಳಿಕ ಶಶಾಂಕ ರಾಯನು ಆಶ್ಚರ್ಯಪರವಶನಾಗಿ ಆ ಮಹಾಪುರುಷನನ್ನಾಲಿಂಗಿಸಿಕೊಂಡು, ಎಲೈ ಪುಣ್ಯಪುರುಷನೇ ! ನನ್ನ ವಂಶವನ್ನು ಪಾವನಮಾಡುವುದಕ್ಕೋಸ್ಕರ ಭೂಲೋ ಕದಲ್ಲಿ ಅವತರಿಸಿದ ದಿವ್ಯಪುರುಷನೆಂದು ಬಹುವಿಧಗಳಿಂದ ಸ್ತುತಿಸಿ, ಜಯಭೇರಿ ಗಳನ್ನು ಹೊಡೆಸಿದನು. ಅಷ್ಟರಲ್ಲಿ ಆ ಶರತ್ಚಂದ್ರಿಕಾಮಣಿಯು ಬಹಳ ಸಂತೋ

ಷದಿಂದ ದಾಸೀಜನಗಳೊಡನೆ ಮಿಂಚಿನೋಪಾದಿಯಲ್ಲಿ ಪ್ರಕಾಶಿಸುತ್ತಾ ಅಗ್ನಿದತ್ತಮಹಾರಾಯನ ಸಮೀಪಕ್ಕೆ ಹೋಗಿ ಆತನ ಕಂಠದೊಳಗೆ ಪುಷ್ಪಮಾಲಿಕೆಯನ್ನು ಹಾಕಿದಳು. ಶಶಾಂಕರಾಯನುಅಳಿಯನನ್ನು ಪಟ್ಟದಾನೆಯನುಮೇಲೆಕುಳ್ಳಿರಿಸಿ, ಪಟ್ಟಣದೊಳಕ್ಕೆ ಕರೆದುಕೊಂಡು ಹೋಗಿ ಜಟಾಬಂಧನಾದಿಗಳನ್ನೆಲ್ಲಾ ತೆಗೆಸಿ ಮಂಗಳಸ್ನಾನವನ್ನು ಮಾಡಿಸಿ, ದಿವ್ಯವಾದ ವಸ್ತ್ರಾಭರಣಗಳನ್ನು ಕೊಟ್ಟು ಅತಿಸಂಭ್ರಮದಿಂದ ವಿವಾಹವಂ ಬೆಳಸಿದನು.

ತರುವಾಯ ಅಗ್ನಿದತ್ತಮಹಾರಾಯನು ಅಪಾರವಾದ ಸಂತೋಷಸುಖಗಳನ್ನನುಭವಿಸುತ್ತಾ, ಮೂರುತಿಂಗಳ ಪರಿಯಂತರವೂ ಅಲ್ಲಿಯೇ ಇದ್ದು ನಂತರ ಮಾವನುಕೊಟ್ಟ ಚತುರಂಗಬಲವನ್ನೂ ನಾನಾವಿಧವಾದ ವಸ್ತ್ರಾಭರಣಗಳನ್ನು ತೆಗೆದುಕೊಂಡು ಹೆಂಡತಿಸಹಿತನಾಗಿ ಅಲ್ಲಿಂದ ಹೊರಟುಬರುತ್ತಾ ಕೆಲವು ದಿವಸಗಳನಂತರ ತನ್ನ ಪಟ್ಟಣವನ್ನು ಸೇರಿ ತಂದೆತಾಯಿಗಳಿಗೆ ನಮಸ್ಕರಿಸಿ, ನಡೆದ ವೃತ್ತಾಂತವೆಲ್ಲಾ ತಿಳುಹಿಸಲು ಅವರು ತುಂಬಾ ಸಂತೋಷವನ್ನು ಹೊಂದಿ ಪುತ್ರನಿಗೆ ಪಟ್ಟಾಭಿಷೇಕೋತ್ಸವವನ್ನು ಮಾಡಿ ನೇತ್ರಾನಂದವನ್ನು ಪಡೆದರು. ಬಳಿಕ ಅಗ್ನಿದತ್ತನು ದೇಶದೇಶಗಳಿಗೂ ದಂಡೆತ್ತಿಹೋಗಿ ತನ್ನ ಭುಜಬಲದಿಂದಲೂ ಗುರುಕರುಣದಿಂದಲೂ, ಸಕಲ ರಾಜ್ಯಗಳನ್ನು ಜಯಿಸಿ, ಸಾಮ್ರಾಜ್ಯಪಟ್ಟಾಭಿಷೇಕವನ್ನು ಹೊಂದಿ, ರಾಜರುಗಳನ್ನೆಲ್ಲಾ ತನ್ನ ಕೈಕೆಳಗೆ ತೆಗೆದುಕೊಂಡು, ಧರ್ಮೈಕತತ್ಪರನಾಗಿ ಯೋಗಿಗಳನ್ನೂ ಜ್ಞಾನಿಗಳನ್ನೂ ಪೂಜಿಸುತ್ತಾ, ಏಕಪತ್ನೀವ್ರತಸ್ಥನಾಗಿ ಅನೇಕದಿವಸಗಳು ಧರಾಪಾಲನಮಾಡಿ ದೇಹಾಂತ್ಯದಲ್ಲಿ ಪಾವನವಾದ ಶಿವಸಾಯುಜ್ಯಪದವಿಯನ್ನು ಹೊಂದಿದನೆಂದು ಹೇಳಲಾಗಿ, ಅರ್ಜುನನು ಕೇಳಿ ಆಶ್ಚರ್ಯವನ್ನು ಹೊಂದಿ, ಅಗ್ನಿದತ್ತನನ್ನು ಬಹಳವಾಗಿ ಸ್ತುತಿಸಿ, ಕೃಷ್ಣನನ್ನು ಹೊಗಳಿ, ಮಹಾನುಭಾವನೇ ! ಈ ಕಥೆಯು ಕೇವಲ ಪಾವನಕರವಾಗಿರುವುದು. ಪಂಚಮುದ್ರೆಗಳ ದಿವ್ಯಪ್ರಭಾವಗಳನ್ನು ಕ್ರಮವಾಗಿ ತಿಳಿದುಕೊಂಡೆನು, ಎಲೈ ಭಗವಂತನೇ ಬಹಳ ಹೊತ್ತಾದ್ದರಿಂದ ನಿದ್ರೆಯು ಬಲವಾಗಿ ಬಾಧಿಸುತಲಿರುವುದು, ನಾವಿನ್ನು ನಿದ್ರೆಮಾಡೋಣವೆಂದು ಇರ್ವರೂ ಶಯನಮಾಡಿ ಸುಖನಿದ್ರಾಪರವಶರಾದರು.

ನಾಲ್ಕನೆಕಥೆ ಸಂಪೂರ್ಣಂ.

॥ ಶುಭಮಸ್ತು. ॥

॥ ಶ್ರೀ ಅಚ್ಯುತಾಯ ಪರಬ್ರಹ್ಮಣೇನಮಃ. ॥

# ವಿಚಿತ್ರವಾಹನನೆಂಬ ಐದನೆ ರಾಜಪುತ್ರನ ಕಥೆ.

ಐದನೆ ದಿವಸ ರಾತ್ರಿ ಕೃಷ್ಣಾರ್ಜುನರು ಆ ಯಮುನಾತೀರದ ಸೈಕತ ಪ್ರದೇಶದೊಳು ಕುಳಿತುಕೊಂಡು ತಾಂಬೂಲವನ್ನು ಸೇವಿಸುತ್ತಾ, ತಂಪಾಗಿ ಬೀಸುತಲಿರುವ ಮಂದಮಾರುತಕ್ಕಾನಂದಿಸುತ್ತಾ ಸುಗಂಧಗಳನ್ನು ಆಘ್ರಾಣಿಸುತ್ತಾ ಇರುವಲ್ಲಿ ಅರ್ಜುನನು ನಾರಾಯಣನನ್ನು ನೋಡಿ, ದೇವೋತ್ತಮಾ! ತಾರಕಮಂತ್ರವು ನನಗೆ ತಿಳಿಯುವ ರೀತಿಯಿಂದ ಪುಣ್ಯಚರಿತ್ರರೂಪದೊಳು ಇತಿಹಾಸವಾಗಿ ತಿಳುಹಿ, ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಲು ಪರಾತ್ಪರನಾದ ಶ್ರೀ ಕೃಷ್ಣನು ಅರ್ಜುನನನ್ನು ನೋಡಿ, ಎಲೈ ಪಾಂಡುನಂದನನೇ! ತಾರಕಮಂತ್ರ ಪ್ರಭಾವವು ಬಹಳ ವಿಚಿತ್ರವಾದದ್ದು, ಈ ವಿಷಯದಲ್ಲಿ ವಿಚಿತ್ರವಾಹನನೆಂಬ ರಾಜಪುತ್ರನ ಕಥೆಯನ್ನಾಲಿಸುವವನಾಗೆಂದು ಹೇಳತೊಡಗಿದನು,

ಕೇಳೈ ಪಾರ್ಥನೇ! ಪೂರ್ವದಲ್ಲಿ ಪಾಂಚಾಲದೇಶಕ್ಕೆ ಚಿತ್ರಾಶ್ವನೆಂಬ ರಾಯನು ಧೊರೆಯಾಗಿದ್ದನು. ಆತನಿಗೆ ಚಿತ್ರಕನೆಂದೂ, ವಿಚಿತ್ರಕನೆಂತಲೂ, ಚಿತ್ರವಾಹನನೆಂಬದಾಗಿಯೂ, ವಿಚಿತ್ರವಾಹನನೆಂದೂ ನಾಲ್ವರು ಪುತ್ರರಿದ್ದರು. ತಂದೆಯು ದೊಡ್ಡವರಾದ ಮೂರುಜನ ಮಕ್ಕಳಿಗೂ ಕ್ರಮವಾಗಿ ಮಗಧ, ಮಾಳವ, ಮತ್ಸ್ಯದೇಶಗಳ ರಾಜಪುತ್ರಿಯರನ್ನು ತಂದು ವಿವಾಹವನ್ನು ಮಾಡಿಸಿ, ಚಿಕ್ಕ ಮಗನಿಗೆ ಅನೇಕ ದೇಶಗಳ ರಾಜಪುತ್ರಿಯರ ಭಾವಚಿತ್ರಗಳನ್ನು ತರಿಸಿ ತೋರಿಸಲು, ಆತನಾಪಟಗಳನ್ನೆಲ್ಲಾ ನೋಡಿ ತಂದೆಗೆ ನಮಸ್ಕರಿಸಿ ತಂದೆಯೇ! ನಾನೀ ಕನ್ಯೆಯರನ್ನು ಅಪೇಕ್ಷಿಸುವುದಿಲ್ಲ. ಮತ್ತು ನನಗೆ ವಿವಾಹವು ಇಷ್ಟವೇ ಇಲ್ಲವೆಂದು ನುಡಿಯಲು ಆವನ ತಂದೆತಾಯಿಗಳು ಮಗನನ್ನು ಮುದ್ದಿಸಿ, ಎಲೈ ಮಗುವೇ! ನಮ್ಮಗಳ ನೇತ್ರೋತ್ಸವಕ್ಕಾಗಿ ಮದುವೆಯನ್ನು ಮಾಡಿಕೊಳ್ಳುವವನಾಗೆಂದು ಬಲತ್ಕಾರಮಾಡಿದಾಗ್ಯೂ ಕೇಳದೆ, ತನ್ನನ್ನು ನೋಡಿದವರೆಲ್ಲಾ ವಿವಾಹಮಾಡಿಕೊಳ್ಳೈ, ವಿವಾಹಮಾಡಿಕೊಳ್ಳೈ ಎಂದು ಹೇಳುವುದನ್ನು ಕುರಿತು ವಿಚಾರಪರನಾಗಿ ಅಯ್ಯೋ! ದೊಡ್ಡವರು ಚಿಕ್ಕವರೆಲ್ಲರೂ ನನ್ನನ್ನು ನಿಂದಿಸಿ ಹೇಳುತಲಿರುವರು, ತಂದೆತಾಯಿಗಳು, ಸಹೋದರರು ನನ್ನಲ್ಲಿ ಮಾತನಾಡುವುದೇ ಇಲ್ಲ. ನಮ್ಮ ಅತ್ತಿಗೆಯರ ಅಭಿಪ್ರಾಯಗಳು ಯಾವ ರೀತಿಯಾಗಿರುವುದೋ ತಿಳಿಯಬೇಕೆಂದು ಯೋಚಿಸಿ, ಒಂದಾನೊಂದು ದಿವಸ ಯಾರೂ ಅರಿಯದಂತೆ ರಹಸ್ಯವಾಗಿ ತನ್ನ ಜೇಷ್ಠಭ್ರಾತೃವಿನ ಹೆಂಡತಿಯ ಅಂತಃಪುರಕ್ಕೆ

ಹೋಗಿ, ಶೃಂಗಾರ ಗೃಹದೊಳಗೆ ಕುಳಿತುಕೊಂಡಿದ್ದನು. ಅಲ್ಲಿಗೆ ಮೂರುಜನ ಅತ್ತಿಗೆಯರು ಬಂದು ಕುಳಿತು ತಮ್ಮತಮ್ಮ ಅಲಂಕಾರಗಳನ್ನು ಕುರಿತು, ಎಲ್ಲೈ ತಂಗಿಯರೇ ! ನಮ್ಮ ಮೈದುನನಾದ ವಿಚಿತ್ರವಾಹನನಿಗೂ ಮದುವೆಯಾದರೆ ನಾವು ನಾಲ್ವರು ಅಕ್ಕತಂಗಿಯರಾಗುವೆವಲ್ಲವೆ ? ಅತನು ತಂದೆತಾಯಿಗಳ ಮಾತನ್ನು ಕೇಳದವನಾಗಿರುವನು. ಎಂದು ನುಡಿಯಲಾಗಿ ಅದನ್ನು ಕೇಳಿ ಎರಡನೆಯ ಅತ್ತಿಗೆಯಾದ ಮಾಳವದೇಶಾಧಿಪನ ಕುವರಿಯು ಓಹೋ ! ಆತನಿಗೆ ತಕ್ಕ ಕನ್ಯೆಯು ಈ ಲೋಕದಲ್ಲಿಯೆ ಇಲ್ಲವಂತೆ, ಎಂದು ಹೇಳಿದಳು. ಮೂರನೆ ಅತ್ತಿಗೆಯಾದ ಮತ್ಸ್ಯದೇಶಾಧಿಪನ ಪುತ್ರಿಯು ಎಲ್ಲೈ ಅಕ್ಕಂದಿರಾ ! ನಮ್ಮ ಮೈದುನನು ಅತಿ ಸುಂದರನಾಗಿಯೂ, ಧೈರ್ಯಸಾಹಸಗಳನ್ನುಳ್ಳವನಾಗಿಯೂ, ಸುಕುಮಾರನಾಗಿಯೂ ಇರುವುದರಿಂದ ಆತನಿಗೆ ತಕ್ಕ ನಾರೀಮಣಿಯು ಇಲ್ಲದಿರುವುದು ಸತ್ಯ. ಆದರೆ ಪಾಂಡ್ಯದೇಶಾಧಿಪನ ತನಯಳಾದ ತ್ರಿಲೋಕ ಸುಂದರೀ ಮಣಿಯೆಂಬುವಳು ನಮ್ಮ ಮೈದುನನಿಗೆ ಸರಿಯಾದವಳಾಗಿರುವಳು, ಆ ಕನ್ಯೆಯನ್ನು ಒಂದು ರಾಕ್ಷಸಿಯು ತೆಗೆದುಕೊಂಡು ಹೋಗಿ ದಕ್ಷಿಣಸಮುದ್ರತೀರದಲ್ಲಿ ಇಟ್ಟುಕೊಂಡಿರುವಳಂತೆ ಆ ತ್ರಿಲೋಕಸುಂದರೀಮಣಿಯು ನಮ್ಮ ಚಿಕ್ಕ ತಂದೆಯಮಗಳಾದ್ದರಿಂದ ನಾನು ಅವಳನ್ನು ನೋಡಿರುವೆನೆಂದು ಹೇಳಿದಳು. ಆ ಮಾತನ್ನು ಕೇಳಿದ ಅಕ್ಕಂದಿರು ಆಶ್ಚರ್ಯಪಟ್ಟು ತಂಗಿಯನ್ನು ಕುರಿತು, ಎಲ್ಲೈ ತಂಗಿಯೇ ಆ ತ್ರಿಲೋಕಸುಂದರೀಮಣಿಯ ರೂಪಲಾವಣ್ಯಗುಣಗಳೆಂಥವು, ಆಕೆಯನ್ನು ರಾಕ್ಷಸಿಯು ತೆಗೆದುಕೊಂಡುಹೋಗಿ ಇಟ್ಟುಕೊಂಡಿರಲು ಕಾರಣವೇನು, ಆರಾಕ್ಷಸಿಯ ವೃತ್ತಾಂತವೇನು ಇವುಗಳನ್ನೆಲ್ಲ ನಮ್ಮೊಡನೆ ವಿವರವಾಗಿ ಹೇಳು ಎನಲಾಗಿ ಆಕೆಯು ಹೇಳತೊಡಗಿದಳು.

ಕೇಳಿರೈ, ಅಕ್ಕಂದಿರಾ ! ಆ ನಾರೀಮಣಿಯ ರೂಪುರೇಖಾದಿ ಲಾವಣ್ಯಗಳನ್ನು ವರ್ಣಿಸುವದಕ್ಕೆ ನನ್ನಿಂದಾಗದು ಸಹಸ್ರಫಣೆಗಳುಳ್ಳ ಆದಿಶೇಷನು, ಆಕೆಯನ್ನು ವರ್ಣಿಸಲು ಸಹಸ್ರ ನಾಲಿಗೆಯುಳ್ಳವನಾದಾಗ್ಯೂ, ಆವಳನ್ನು ನಿರ್ಮಾಣಮಾಡಲೋಸುಗ ಬ್ರಹ್ಮನು ಚತುರ್ಮುಖಗಳುಳ್ಳವನಾದನೆಂಬವಾಗಿಯೂ, ಆ ಚಿನ್ನದ ಬೊಂಬೆಯನ್ನು ನೋಡುವುದಕ್ಕಾಗಿಯೇ ಅಮರಾಧಿಪನು ಸಹಸ್ರ ನೇತ್ರಗಳನ್ನು ಹೊಂದಿರುವನೆಂತಲೂ ಕೇಳಿಬಲ್ಲೆನು. ಇದೂ ಅಲ್ಲದೆ ಚಂದ್ರನು ಚಕೋರಪಕ್ಷಿಗಳು ತನ್ನನ್ನು ಬಿಟ್ಟು ಅವಳ ಮುಖವನ್ನು ಸೇವಿಸುತಲಿರಲು, ಗುರ್ತಿಗೋಸ್ಕರ ತನ್ನ ಬಿಂಬದೊಳಗೆ ತುರಗವನ್ನು ಸೇವಿಸುತಲಿರುವನು ರಂಭಾ, ಊರ್ವಶಿ ಮೊದಲಾದ ದೇವತಾಸ್ತ್ರೀಯರು ಆಕೆಯ ಲಾವಣ್ಯವನ್ನು ನೋಡಿ ಸಹಿಸಲಾರದೆ, ದಕ್ಷಿಣದಿಕ್ಕಿನ ಸಂಚಾರವನ್ನೇ ತೊರೆದರಂತೆ. ಆ ಪೂರ್ಣೇಂದು ಮುಖಿಯನ್ನು ವರ್ಣಿಸಲು ನಾನು ಹೇಗೆ ಶಕ್ತಳಾದೇನು ತಪೋ

ಮಹಿಮೆಯಿಂದ ಇಂದ್ರನೇ ಮೊದಲಾದ ದೇವತೆಗಳನ್ನು ಜಯಿಸಿ, ತ್ರಿಲೋಕಕಂಟಕಿಯೆಂಬ ಹೆಸರನ್ನು ಹೊಂದಿದ ಘೋರಳಾದ ರಾಕ್ಷಸಿಯೊಬ್ಬಳು ಮಕ್ಕಳಮೇಲಣ ವ್ಯಾಮೋಹದಿಂದ ದೇವನಾಗಲೋಕಗಳನ್ನೆಲ್ಲಾ ಹುಡುಕಿ ತನ್ನ ಕಣ್ಣಿಗೆ ಇಂಪಾದ ಸ್ತ್ರೀರತ್ನಗಳು ಇಲ್ಲದೆ ಆ ತ್ರಿಲೋಕಸುಂದರೀಮಣಿಯನ್ನು ತೆಗೆದುಕೊಂಡು ಹೋಗಿ, ಸಾಕುತಲಿರುವಳೆಂದು ನಮ್ಮ ಚಿಕ್ಕಪ್ಪನಿಗೆ ತಿಳಿದು ಅನೇಕ ಶೂರರನ್ನೂ ಮಂತ್ರವಾದಿಗಳನ್ನು ಕಳುಹಲು, ಅವರುಗಳ ಸಾಹಸಕ್ಕೆ ಅಸಾಧ್ಯವಾದಕಾರಣ ಆ ಕನ್ಯೆಯನ್ನು ಯಾರು ಕರೆತರುವರೋ ಅವರಿಗೆ ಅವಳನ್ನು ಕೊಟ್ಟು ವಿವಾಹವನ್ನು ಮಾಡುವೆನೆಂತಲೂ, ತನ್ನ ವಿಶಿಷ್ಟರಾಜ್ಯವನ್ನೆಲ್ಲಾ ಅಳಿಯನಿಗೆ ಕೊಡುವೆನೆಂಬದಾಗಿಯೂ ಪ್ರಕಟಮಾಡಿರುವನು. ಆ ಚಂದ್ರವದನೆಯು ಯಾರಿಗೆ ಲಭಿಸುವಳೋ ಅವರ ಭಾಗ್ಯವನ್ನು ಇಷ್ಟೆಂದು ವರ್ಣಿಸಲಾಗದೆಂದು ನುಡಿದನು, ಅದನ್ನು ಕೇಳಿದ ಇಬ್ಬರು ಅಕ್ಕಂದಿರು ಅಹಹಾ ! ವಿಚಿತ್ರವಾದ ಸಮಾಚಾರವೆಂದು ಮಾತನಾಡಿಕೊಳ್ಳುತ್ತಾ ತಮ್ಮತಮ್ಮ ಅಂತಃಪುರಗಳಿಗೆ ತೆರಳಿದರು. ಸಾಯಂಕಾಲವಾದ ಬಳಿಕ ಆ ವಿಚಿತ್ರವಾಹನನು ಹೊರಗೆ ಬಂದು ತನ್ನ ನಿವಾಸಕ್ಕೆ ಹೋಗಿ, ಆ ತ್ರಿಲೋಕಸುಂದರೀಮಣಿಯನ್ನು ನೆನೆದು ಯಾವ ಉಪಾಯವೂ ತಿಳಿಯದೆ ಪರಿತಾಪಪಡುತ್ತಾ ಇನ್ನೊಂದು ಜನ್ಮಕ್ಕಾದರೂ ಆ ಕನ್ಯಾರತ್ನವು ಸಂಭವಿಸುವಂತೆ ತಪಸ್ಸನ್ನು ಮಾಡುವುದು ಉತ್ತಮ. ಭಕ್ತಿವೈರಾಗ್ಯಮಾರ್ಗಗಳಿಗಿಂತ ಬೇರೊಂದು ಮಾರ್ಗವಿಲ್ಲವೆಂದು ಯೋಚಿಸಿ, ವೈರಾಗ್ಯಪರನಾಗಿ, ತಂದೆತಾಯಿಗಳನ್ನು ಕುರಿತು, ಭೂಸಂಚಾರಮಾಡಿ ನನಗಿಷ್ಟವಾದ ಕನ್ಯಾರತ್ನವನ್ನು ಮದುವೆಮಾಡಿಕೊಂಡು ಬರುವೆನೆಂದು ಹೇಳಿ, ಅನೇಕ ಧನಕನಕ ವಸ್ತ್ರಾಭರಣಗಳನ್ನೂ ಧನುರ್ಬಾಣಗಳನ್ನೂ ತೆಗೆದುಕೊಂಡು ಕುದುರೆಯನ್ನೇರಿ ದಕ್ಷಿಣಾಭಿಮುಖವಾಗಿ ಪ್ರಯಾಣಮಾಡುತ್ತಾ, ಅಡ್ಡವಾದ ದುಷ್ಟಮೃಗಗಳನ್ನು ಸದೆಬಡಿಯದೆ ರಕ್ಷಿಸುತ್ತಾ, ವನಫಲಗಳನ್ನು ಭಕ್ಷಿಸಿ, ನೀರನ್ನು ಕುಡಿಯುತ್ತಾ, ತಂಪಾದ ನೆರಳಲ್ಲಿ ವಿಶ್ರಾಂತಿಯನ್ನೈದುತ್ತಾ ಕೇವಲ ವೈರಾಗ್ಯಮಾರ್ಗದಿಂದ ಕ್ಷತ್ರಿಯಧರ್ಮವನ್ನು ಬಿಟ್ಟು ಶಾಂತ ಶಮದಮಾದಿ ಗುಣಗಳುಂಟಾಗಿ ಹೋಗುತ್ತಾ ಕೆಲವು ದಿವಸಗಳಿಗೆ ಭುಜಂಗನೆಂಬ ಓರ್ವ ಮುನೀಂದ್ರನ ಆಶ್ರಮವನ್ನು ಸೇರಿ, ಆತನ ಪಾದಕಮಲಗಳಿಗೆ ನಮಸ್ಕರಿಸಿದನು. ಆ ಮುನೀಂದ್ರನು ರಾಜಪುತ್ರನನ್ನು ಸಂತೈಸಿ, ಎಲೈ ರಾಜಾತ್ಮಜನೇ ನಿನ್ನ ದೇಶ ಯಾವುದು ತಂದೆತಾಯಿಗಳ್ಯಾರು. ಈ ಅರಣ್ಯಕ್ಕೆ ಒಂಟಿಯಾಗಿ ಬಂದ ಕಾರಣವೇನು ? ಎಂಬದಾಗಿ ಪ್ರಶ್ನೆಮಾಡಲಾ ರಾಜನಂದನನು ಸಂತೋಷಚಿತ್ತನಾಗಿ ಮುನಿಪೋತ್ತಮನೇ ! ನಾನು ಪಾಂಚಾಲದೇಶಾಧಿಪನ ತನಯನು ತನಗಿಂತಲೂ ದೊಡ್ಡವರಾದ ಮೂರುಜನ ಸಹೋದರರು ರಾಜ್ಯಪದವಿಗೆ ಅರ್ಹರಾಗಿರುವುದರಿಂದ ನಾನು

ತಪೋವೃತ್ತಿಯನ್ನಾಶ್ರಯಿಸಲೋಸುಗ ವೈರಾಗ್ಯಪರನಾಗಿ ಬಂದಿರುವೆನು ನನ್ನ ಭಾಗ್ಯೋದಯದಿಂದ ನಿಮ್ಮ ಸಂದರ್ಶನವು ಲಭಿಸಿತು. ಎಲೈ ಮಹಾತ್ಮನೇ ನನ್ನ ಸರ್ವ ಪಾಪಗಳನ್ನು ಭಸ್ಮಮಾಡಿ ನನ್ನ ಮನೋಭೀಷ್ಟಗಳು ಸಿದ್ಧಿಸುವ ಹಾಗೆ ತಾರಕಮಂತ್ರವನ್ನು ಬೋಧಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆನಲು, ಆ ಮುನಿಯು ರಾಜೇಂದ್ರತನಯನನ್ನು ಕುರಿತು, ಎಲೈ ಕುಮಾರನೇ ! ತಪಸ್ಸುಮಾಡುವುದು ಬಹಳ ಸುಲಭವೆಂದರಿತು ನೀನು ಬಂದಿರುವದಾಗಿ ತಿಳಿಯುವುದು, ಅಯ್ಯೋ ! ಅದು ಬಹು ಕಷ್ಟಸಾಧ್ಯ. ನಮ್ಮಂಥವರಿಗೆ ಅಸಾಧ್ಯವಾಗಿರುವುದರಿಂದ ನಮ್ಮ ಆಶ್ರಮಗಳಲ್ಲಿರುವ ಫಲಗಳನ್ನು ಭಕ್ಷಿಸಿ ನೀರನ್ನು ಕುಡಿದು ನೀನು ಬಂದ ದಾರಿಯನ್ನು ಹಿಡಿಗು ತೆರಳೆಂದು ಹೇಳಲಾಗಿ ರಾಜಪುತ್ರನು ಕಣ್ಣೀರನ್ನು ಸುರಿಸುತ್ತಾ ದುಃಖಿಸಲಾರಂಭಿಸಿ, ಎಲೈ ಮಹಾತ್ಮನೇ ! ನನಗೆ ಪಟ್ಟಣವೂ ತಂದೆತಾಯಿಗಳೂ ಯಾವುದೂ ಅಗತ್ಯವಿಲ್ಲ. ನಾನು ನಿಮಗೆ ಶಿಷ್ಯನಾಗಿ ಪರಿಚರ್ಯವನ್ನು ಮಾಡುತಲಿರುವೆನೆಂದು ಹೇಳಿ, ಆ ತಪೋಧನನಿಗೆ ಫಲಕಾಷ್ಟಕುಸುಮಗಳನ್ನು ತಂದುಕೊಡುತ್ತಾ ನಾನಾವಿಧ ಶುಶ್ರೂಷೆಗಳನ್ನು ಮಾಡುತ್ತಾ ಇರುತ್ತಿದ್ದನು. ಆಗ ಮುನೀಂದ್ರನು ರಾಜಪುತ್ರನ ಮಾನಸಕ್ಕೆ ಬಹಳವಾಗಿ ಸಂತೋಷಿಸಿ, ಕರುಣಾಪೂರಿತನಾಗಿ ಎಲೈ ರಾಜಕುಮಾರನೇ ! ನೀನು ಕೇವಲ ಪುಣ್ಯಾತ್ಮನು, ಅತ್ಯಂತ ರಹಸ್ಯವಾಗಿಯೂ, ಮಂತ್ರಗೋಪ್ಯವಾಗಿಯೂ, ದೇವರಹಸ್ಯವಾಗಿಯೂ ಇರುವ ತಾರಕಮಂತ್ರವನ್ನು ನಿನಗೆ ಉಪದೇಶಿಸುವೆನು, ನಿರ್ಮಲಚಿತ್ತನಾಗಿ ಲಾಲಿಸುವನಾಗೆಂದು ಹೇಳತೊಡಗಿದನು.

## ಭುಜಂಗಮಹರ್ಷಿಯಿಂದ ವಿಚಿತ್ರವಾಹನ ಮಹಾರಾಯನಿಗೆ ಹೇಳಲ್ಪಟ್ಟ ತಾರಕ ಮಂತ್ರರಹಸ್ಯ.

ಎಲೈ ರಾಜನಂದನನೇ ! ಲಾಲಿಸು—ಪೂರ್ವದಲ್ಲಿ ತ್ರಿಲೋಕಾಧಿಪನಾದ ದೇವೇಂದ್ರನು ಕಾರಣಾಂತರದಿಂದ ತನ್ನ ವೈಭವಾದಿಗಳನ್ನೆಲ್ಲಾ ಕಳೆದುಕೊಂಡವನಾಗಿ, ಬಳಿಕ ತಾರಕಮಂತ್ರ ಪ್ರಭಾವದಿಂದ ಧನ್ಯನಾಗಿ ಮರಳಿ ತನ್ನ ಪದವಿಯನ್ನು ಹೊಂದಿದನು. ಬ್ರಹ್ಮ, ವಿಷ್ಣು, ಮಹೇಶ್ವರರಿಗೂ ಪ್ರಣವವೇ ಮೂಲಮಂತ್ರವು. ಸಾಕ್ಷಾತ್ ಪರಶಿವನೂ ಕೂಡ, ತಾರಕಮಂತ್ರವೇ ತನಗೆ ಮೂಲಮಂತ್ರವೆಂದು ವಲ್ಲಭೆಯಾದ ಗಿರಿರಾಜಪುತ್ರಿಗೆ ತಿಳುಹಿದನು. ಅನೇಕ ಪುರಾತನ ಪುಣ್ಯಪುರುಷರು ಆ ತಾರಕಮಂತ್ರ ಧ್ಯಾನಮಾತ್ರದಿಂದಲೇ ತಮ್ಮ ಇಷ್ಟಸಿದ್ಧಿಯನ್ನು ಹೊಂದಿ ಕೈವಲ್ಯಪದವಿಯನ್ನು ಪಡೆದಿರುವರು, ತಾರಕವೆಂದರೆ ಪ್ರಣವವು. ಪ್ರಣವವಾದಂಥಾದ್ದು ಓಂಕಾರದಲ್ಲಿ ಅಕಾರ, ಉಕಾರ, ಮಕಾರಗಳು ಹುಟ್ಟಿ ತ್ರಿಮೂರ್ತಿಗಳಾದವರಲ್ಲದೆ ಬೇರೆ ಇಲ್ಲ. ಅಯಮಾತ್ಮಾಬ್ರಹ್ಮಾ ಎಂಬ


ವಿಚಿತ್ರವಾಹನಮಹಾರಾಯ.


ಭುಜಂಗಮಹರ್ಷಿ.

ದಾಗಿಯೂ ಪ್ರಜ್ಞಾನ ಚೈತನ್ಯಗಳೇ ಬ್ರಹ್ಮವೆಂತಲೂ ಹೇಳುತ್ತಲಿರುವ ಮಹಾವಾಕ್ಯಗಳಿಗನುಸಾರವಾಗಿ ಚೈತನ್ಯಸ್ವರೂಪನಾದ ಆತ್ಮಾರಾಮಾ ಬ್ರಹ್ಮವು ಸಮಸ್ತವಾದ ಶರೀರಗಳಲ್ಲಿಯೂ ವಾಯುಮಾರ್ಗದಿಂದ ಹೊಕ್ಕು ಆತ್ಮನೆಂದೂ ಪ್ರಸಿದ್ಧಿಯಾಗಿ ಅಂತರ್ಬಹಿರ್ವ್ಯಾಪಕತ್ವಗಳುಂಟಾಗಿ ತ್ರಿಮೂರ್ತಿಗಳೇ ಮೊದಲಾಗಿ ಉಳ್ಳ ಲಿಂಗಶರೀರಗಳನ್ನೆಲ್ಲ ಭಂಗವುಂಟಾಗದಂತೆ ಆಧಾರವಾಗಿ ಹಗಲು ರಾತ್ರಿಗಳಲ್ಲಿಯೂ ಆರೋಹಣ ಅವರೋಹಣಗಳುಂಟಾಗಿ ಷಡಾಧಾರಗಳಿಗೆ ಸೂತ್ರರೂಪನಾಗಿ ಚಂದ್ರ, ಸೂರ್ಯರ ನಾಡಿಗಳಲ್ಲಿ ಒಂದು ದಿನಕ್ಕೆ ಇಪ್ಪತ್ತೊಂದುಸಾವಿರದ ಆರ್ನೂರುಸಾರಿ ನಡೆಯುತಲಿರುವುದು. ಇದೇ ಅಜಪಗಾಯತ್ರಿಯೆಂದೂ, ಜೀವೇಶ್ವರೈಕ್ಯವೆಂತಲೂ, ಪ್ರಣವವೆಂತಲೂ, ಮೌನಸಮಾಧಿಯೆಂಬದಾಗಿಯೂ, ತಾರಕಮಂತ್ರವೆಂತಲೂ ಹೇಳಲ್ಪಟ್ಟಿರುವುದು. ರೇಚಕಪೂರಕಾದಿಗಳೊಳಗೆ ಸಕಾರ ಓಕಾರಕ್ಕೆ ಬಿಂದುಯುಕ್ತವಾದ ಹಕಾರವನ್ನು ಸೇರಿಸಿ, ಜಪಿಸುತ್ತ ಆ ಹಂಸದ ಹಿಂಮುಗಡೆಯೇ ತಿರುಗುತ್ತ, ಸರ್ವಕಾಲವಲ್ಲಿಯೂ ಸರ್ವಾವಸ್ಥೆಗಳಲ್ಲಿಯೂ ಮರೆಯದೆ ತುಟಿಗಳನ್ನು ಚೆನ್ನಾಗಿ ಬಂಧಿಸಿ ಜ್ಞಾನೇಂದ್ರಿಯವಾದಂಥಾ ಜಿಹ್ವೇಂದ್ರಿಯವಂ ವಾಯುವಿನೊಳು ಸೇರಿಸಿ ಜಪಿಸತಕ್ಕದೇ ನಿಶ್ಚಯವಾದ ತಾರಕಮಂತ್ರ ರಹಸ್ಯವು. ಕೇವಲ ಈ ಮಾರ್ಗವನ್ನಭ್ಯಾನಕರಾದ ಕೆಲವರು ಹಂಸಾಕ್ಷರಗಳೆರಡಂ ಕೂಡಿಸಿ, ಜಪಿಸುವಮಾರ್ಗ ತಿಳಿಯದೆ ಆ ಮಾತುಗಳನ್ನು ಮಾತ್ರ ಅರಿತವರಾಗಿ ಮುದ್ರೆಗಳೊಳು ತೋರುವ ಚಿತ್ಕಳೆಗಳೇ ತಾರಕವೆಂದು ಪೇಳುವರು, ಅದು ವ್ಯತ್ಯಾಸವೆಂದು ತಿಳಿ, ಶಿವ ಕೇಶವನಾಮಗಳು ಪಂಚಾಕ್ಷರೀ, ಅಷ್ಟಾಕ್ಷರೀ, ಗಾಯತ್ರಿ ಮೊದಲಾದ ಮಂತ್ರಗಳು ಪ್ರಣವಮಂತ್ರಗಳಿಗೆ ಸಮಾ

ನವಾದವುಗಳಲ್ಲ. ಏಳುಕೋಟಿ ದುಹಾಮಂತ್ರಗಳಿಗೂ ಪ್ರಣವವೆಂಬುದೇ ತಾಯಿ, ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತ, ನಾರದರೇ ಮೊದಲಾದ ಯೋಗಿಗಳು ಈ ಪ್ರಣವವನ್ನು ಚತುರ್ಮುಖ ಬ್ರಹ್ಮನಿಂದ ಉಪದೇಶಿಸಲ್ಪಟ್ಟಿರುವರು. ಅವರೆಲ್ಲರೂ ಈ ಮಂತ್ರಾನುಷ್ಠಾನದಿಂದಲೇ ಮೂರು ಲೋಕಗಳಲ್ಲಿಯೂ ಪೂಜ್ಯರಾಗಿರುವರು. ಇಂಥಾ ಮಂತ್ರವಂ ನಾರದಮಹರ್ಷಿಯಿಂದ ನನಗೆ ಉಪದೇಶಿಸಲ್ಪಟ್ಟು ನನ್ನಿಂದ ನೀನು ತಿಳಿಯಲ್ಪಟ್ಟವನಾದೆ. ಎಲೈ ಪುಣ್ಯಪುರುಷನೆ ! ಈ ಪರಮಹಂಸಭಾವವು ಲೋಕದಲ್ಲಿ ಅತ್ಯಂತ ರಹಸ್ಯವಾಗಿರುವುದು ನಿನ್ನ ಪುಣ್ಯೋದಯದಿಂದ ಇದು ನನಗೆ ಲಭಿಸಿತು. ತುಟಗಳಂ ಬಂಧಿಸಿಕೊಂಡು ವಾಯುವಂ ನಿಯಮಿಸಿ ಇಡಾಪಿಂಗಳ ನಾಡಿಗಳಲ್ಲಿ ಸಂಚಾರ ಮಾಡುತಲಿರುವ ಮಾರುತಗಳೊಂದಿಗೆ ಆ ಅಕ್ಷರಗಳೆರಡನ್ನು ಸೇರಿಸಿ ಜಿಹ್ವಾಬಂಧವಂ ಮಾಡಿ ಜಪಿಸುತಲಿರು, ಆ ಆತ್ಮಾರಾಮಬ್ರಹ್ಮವು ನಿನ್ನ ಮನೋಭೀಷ್ಟವನ್ನು ಕೈವಲ್ಯವನ್ನು ಕೊಡುವುದೆಂದು ಮುನಿಪೋತ್ತಮನು ಉಪದೇಶಿಸಲಾಗಿ ರಾಜನಂದನನು ತುಂಬಾಸಂತೋಷಪಟ್ಟು ಆತನಿಗೆ ನಮಸ್ಕರಿಸಿ ಮೌನವನ್ನು ಕೈಕೊಂಡು ಪ್ರಣವಮಂತ್ರ ಜಪೈಕತತ್ಪರನಾಗಿದ್ದನೆಂದು ಶ್ರೀಕೃಷ್ಣನು ಹೇಳಲಾಗಿ ಅರ್ಜುನನು ಆಶ್ಚರ್ಯದಿಂದ ವಾಸುದೇವನಂ ಕುರಿತು, ಎಲೈ ಮಹಾನುಭಾವನೇ ! ಪಾವನಗಳಾದ ತಾರಕಮಂತ್ರಗಳ ಸಕಲ ಮರ್ಮಗಳನ್ನು ತಿಳಿಸಬೇಕೆಂದು ಪ್ರಾರ್ಥಿಸಿದ ಬಳಿಕ ಶ್ರೀಕೃಷ್ಣನು ವಿವರವಾಗಿ ತಿಳಿಸಲು ಅದನ್ನು ತಿಳಿದುಕೊಂಡು ಎಲೈ ದೇವೋತ್ತಮನೇ ! ತಾರಕಮಂತ್ರವನ್ನು ಜಪಿಸುತಲಿದ್ದ ವಿಚಿತ್ರವಾಹನನ ಮುಂದಣ ವೃತ್ತಾಂತವನ್ನು ತಿಳುಹಬೇಕೆನಲು, ಭಗವಂತನು ಇಂತೆಂದನು.

ಕೇಳು ಪಾಂಡುನಂದನನೇ ! ವಿಚಿತ್ರವಾಹನನು ಪ್ರಣವ ಮಂತ್ರಗಳನ್ನು ಮರೆಯದೆ ಜಪಿಸುತಲಿದ್ದಕಾರಣ ಅಮರಾಧಿಪನು ಸಂತೋಷಿಸಿ, ಆ ಪುಣ್ಯಾತ್ಮನ ಇಷ್ಟಾಪೂರ್ತಿಯನ್ನು ಮಾಡಿಸಲೆಣಿಸಿ, ದೇವಕುದುರೆಯನ್ನು ಕಳುಹಿಸಿದನು. ಆ ಕುದುರೆಯ ಬರುವಿಕೆಯನ್ನು ಮುನೀಂದ್ರನು ಕಂಡು ಇದರಕಾರಣವೇನೆಂದು ಯೋಚಿಸಿ ರಾಜಪುತ್ರನನ್ನು ಕುರಿತು, ಎಲೈ ಮಾನಸಪುತ್ರನೇ ! ನಿನ್ನ ಮನಸ್ಸಿನ ಅಭಿಪ್ರಾಯವನ್ನು ವಂಚಿಸದೆ ನನ್ನೊಡನೆ ಹೇಳೆಂದು ಕೇಳಲಾಗಿ ರಾಜನಂದನನು ಭಯಪಡುತ್ತಾ ಆತನ ಪಾದಗಳಿಗೆ ನಮಸ್ಕರಿಸಿ, ಎಲೈ ಮುನೀಂದ್ರನೇ ತ್ರಿಲೋಕಸುಂದರೀಮಣಿಯನ್ನು ಕುರಿತು, ನಾನು ಬಂದವನಾದನೆಂದು ಆ ವೃತ್ತಾಂತವನ್ನೆಲ್ಲಾ ತಪ್ಪದೆ ಹೇಳಲು ಅಮರರು ಕಂಡು ನಿನಗೆ ಸಹಾಯಮಾಡುವುದಕ್ಕೋಸ್ಕರ ಈ ಕುದುರೆಯನ್ನು ಕಳುಹಿರುವರೆನಲು ಮುನಿವನು ನೋಡಿ ಆಶ್ಚರ್ಯವನ್ನೈದಿ ಮಗುವೇ ! ನೀನು ಪರಮಹಂಸಭಾವದೊಳಿರುವವನ್ನು ಕಂಡು ದೇವತೆಗಳೇ ನಿನಗಾಗಿ ಈ ಕುದುರೆಯನ್ನು ಕಳುಹಿಸಿರುವರು. ನೀನು ಈ ಕುದುರೆಯನ್ನೇರಿ ನಮ್ಮ

ದ್ರತೀರವನ್ನು ಸೇರಿ ನಿನ್ನ ಕಾರ್ಯವನ್ನು ನೆರವೇರಿಸಿಕೊಂಡು ಬರುವನಾಗೆಂದು ಅಪ್ಪಣೆಯನ್ನು ಮಾಡಲು, ಆತನು ಸಂತೋಷಭರಿತನಾಗಿ ತನ್ನ ವಸ್ತ್ರಾಭರಣಗಳನ್ನು ಧರಿಸಿಕೊಂಡು ಮುನಿಶ್ರೇಷ್ಠನ ಪಾದಕಮಲಗಳನ್ನು ತನ್ನ ಆನಂದಭಾಷ್ಪಗಳಿಂದ ತೊಳೆದು, ಅಪ್ಪಣೆಯನ್ನು ಸ್ವೀಕರಿಸಿ ಆ ಕುದುರೆಯಮೇಲೆ ಕುಳಿತುಕೊಂಡನು ಆಗಲಾ ದೇವಕುದುರೆಯು ವಾಯುವೇಗದಿಂದ ಸಮುದ್ರವನ್ನು ದಾಟಿ, ಆ ತೀರದೊಳಿರುವ ಅಂಗನಾಮಣಿಯು ಅಂತಃಪುರದಲ್ಲಿ ರಾಜಪುತ್ರನನ್ನಿಳಿಸಿ ತಾನು ಸ್ವರ್ಗಲೋಕವನ್ನು ಸೇರಿತು. ರಾಜಪುತ್ರನು ಮಧ್ಯಾಹ್ನದ ಸೂರ್ಯನೋ ಎಂಬಂತೆ ದಿವ್ಯತರವಾದ ರತ್ನಗಳಿಂದ ಶೋಭಾಯಮಾನವಾಗಿರುವ ಅಂತಃಪುರವನ್ನು ನೋಡಿ ಆಶ್ಚರ್ಯದಿಂದೊಡಗೂಡಿ ರಾಕ್ಷಸಿಯು ನಿದ್ರೆಮಾಡುತಲಿರುವಳೆಂದು ನಂಬಿ ಬಹಳ ಸಾಹಸ ಧೈರ್ಯಗಳುಳ್ಳವನಾಗಿ ಆ ಅಂತಃಪುರದೊಳಗೆ ಹೋಗುತ್ತಾ, ಎರಾಳವಾದ ಪಚ್ಚೆ ಬಂಡೆಯ ಕಲ್ಲಿನಮೇಲೆ ನಿದ್ರೆಮಾಡುತಲಿರುವ ಘೋರರಾಕ್ಷಸಿಯನ್ನು ನೋಡಿ ಎದೆಯು ಒಡೆದು ಧೈರ್ಯಕೆಟ್ಟವನಾಗಿ ಭಯಪಡುತ್ತಾ ಓಹೋ! ನಾನು ದೇವತೆಗಳ ಸಹಾಯದಿಂದಿಲ್ಲಿಗೆ ಬಂದೆನು. ಅಂಥಾ ದೇವತೆಗಳಿಗೂ ಅಸಾಧ್ಯವಾದ ಈ ಘೋರರಾಕ್ಷಸಿಯನ್ನು ಹೇಗೆ ಕೊಲ್ಲಲಿ! ನನ್ನ ಜನ್ಮಾಂತರ ಫಲವು ಯಾವರೀತಿಯಾಗಿರುವದೋ ತಿಳಿಯದೆಂತಲೂ, ಆ ಮುನೀಂದ್ರನ ಆಶೀರ್ವಚನಗಳು ನಿಷ್ಫಲವಾಗುವುದಿಲ್ಲವೆಂತಲೂ ಯೋಚಿಸಿ ಅಲ್ಲಿ ದಿವ್ಯರತ್ನಗಳ ಪ್ರಭಾಕಾಂತಿಗಳಂತೆ ದೇದೀಪ್ಯಮಾನಳಾದ ತ್ರಿಲೋಕಸುಂದರೀಮಣಿಯನ್ನು ನೋಡಿ ಮಿಂಚನ್ನು ನೋಡಿದರೆ ಹೇದ ಕಣ್ಣುಗಳು ಚಾಂಚಲ್ಯವುಳ್ಳವುಗಳಾಗುವವೋ ಅದರಂತೆ ಚಲನ ನೇತ್ರಗಳುಂಟಾಗಿ ದಿಗ್ಭ್ರಮೆಯಂ ಹೊಂದಿ ಭೂಮಿಯಮೇಲೆ ಚೈತನ್ಯರಹಿತನಾಗಿ ಬಿದ್ದನು. ಆಗಲಾತನನ್ನು ಅಲ್ಲಿದ್ದ ಪಂಜರದ ಗಿಳಿಯು ನೋಡಿ ನಮ್ಮ ಅಂತಃಪುರಕ್ಕೆ ಎಂದಿಗೂ ಬಾರದ ಓರ್ವಮನುಜನು ಬಂದು ನಿನ್ನ ದೇಹಕಾಂತಿಗಳನ್ನು ನೋಡಿ ತಡೆಯಲಾರದೆ ಭೂಮಿಯಮೇಲೆ ಬಿದ್ದಿರುವನೆಂದು ಆ ತ್ರಿಲೋಕಸುಂದರೀಮಣಿಗೆ ಹೇಳಿ ಎಲೈ ಅಕ್ಕ! ನೀನು ಜಾಗ್ರತೆಯಾಗಿ ಆತನಬಳಿಗೆ ಹೋಗಿ ಮೂರ್ಛೆಯಿಂದಾತನನ್ನು ಸಂತೈಸಿ ಕರೆತರುವಳಾಗೆನಲು, ಆ ಕನ್ಯೆಯು ಆತನ ಮುಖದಮೇಲೆ ಪನ್ನೀರನ್ನೆರಚಿ ಮೂರ್ಛೆಯಿಂದೆಬ್ಬಿಸಿ ಗಿಳಿಯ ಹತ್ತಿರಕ್ಕೆ ಕರೆತಂದಳು. ಬಳಿಕಾ ಶುಕವು ಆತನನ್ನು ನೋಡಿ, ಎಲೈ ಮನುಜನೇ! ನಿನ್ನ ದೇಶವಾವುದು ನಿನ್ನ ತಂದೆ ತಾಯಿಗಳಾರು? ಏನು ಕಾರಣದಿಂದ ಇಲ್ಲಿಗೆ ಬಂದವನಾದೆ ಅಪಾರವಾದ ಈ ಸಮುದ್ರವನ್ನು ಹೇಗೆ ದಾಟಿದೆ? ನಿನ್ನ ವೃತ್ತಾಂತವನ್ನೆಲ್ಲಾ ವಂಚಿಸದೆ ತಿಳಿಸುವವನಾಗೆನಲು ರಾಜಪುತ್ರನು ಆ ಶುಕದ ಮಧುರವಾಕ್ಕುಗಳಿಗ ಸಂತೋಷಪಡುತ್ತಾ ತನ್ನ ಸಕಲ ವೃತ್ತಾಂತವನ್ನೂ ಭುಜಂಗಮಹರ್ಷಿಯ

ಕರುಣವನ್ನೂ ದೇವಕುದುರೆಯಿಂದ ಸಮುದ್ರವನ್ನು ದಾಟಿಬಂದ ವಿಧವನ್ನೂ
ಕ್ರಮವಾಗಿ ಹೇಳಿದನು. ಬಳಿಕಲಾ ಕೀರವು ಸಂತಸಗೊಂಡು ತ್ರಿಲೋಕಸುಂದ
ರೀಮಣಿಯನ್ನು ಕುರಿತು, ಎಲೈ ಅಕ್ಕಾ! ಈಗ ಬಂದಿರುವ ಪುರುಷನು ನಿನಗೆ
ಕೇವಲ ಸಮೀಪಬಂಧುವು ಈತನ ಅಣ್ಣನಿಗೆ ನಿನ್ನ ದೊಡ್ಡತಂದೆಯ ಮಗಳನ್ನು
ಕೊಟ್ಟು ವಿವಾಹಮಾಡಿರುವರಂತೆ ಆಕೆಯ ಮೂಲಕ ನಿನ್ನ ವೃತ್ತಾಂತವನ್ನು
ತಿಳಿದು ನಿನ್ನಲ್ಲಿ ಮೋಹಪರವಶರಾಗಿ ಅನೇಕದೇಶ ಸಂಚಾರಮಾಡಿ ಕೇವಲ
ಕಷ್ಟಪಟ್ಟು ಭುಜಂಗನೆಂಬ ಮುನೀಂದ್ರನಿಂದ ತಾರಕಮಂತ್ರವನ್ನು ಗ್ರಹಿಸಿ ಆ
ಮಂತ್ರಮಹಿಮೆಯಿಂದ ದೇವಕುದುರೆಯನ್ನು ಹತ್ತಿ ಬಂದಿರುವನು ಇವನು
ಮಹಾ ಪುಣ್ಯವಂತನಾಗಿಯೂ, ಯೌವನ ಮತ್ತು ಸೌಂದರ್ಯದಿಂದ ಕೂಡಿ ನಿನಗೆ
ತಕ್ಕವರನಾಗಿ ಇರುವನು. ನೀನು ಇವನೊಡನೆ ಕೂಡಿ ಸುಖಾನುಭವನ್ನೈದು
ವವಳಾಗೆನಲು, ಆ ಮಾತಿಗೆ ಇಂದುವದನೆಯು ತಲೆಯನ್ನು ಬಾಗಿಸಿ ಕಣ್ಣಿನಲ್ಲಿ
ನೀರನ್ನು ತುಂಬಿಕೊಂಡು, ಎಲೈ ರಾಮಗಿಳಿಯೇ! ಬಾಲ್ಯಾರಭ್ಯ ನಾನೀ ರಾಕ್ಷ
ಸಿಯ ವಶವಾಗಿರುವೆನಾದಕಾರಣ ನನಗೆ ಸುಖವು ಹೇಗೆ ಲಭಿಸುವುದೆಂದು
ಪ್ರತ್ಯುತ್ತರವನ್ನೀಯಲಾ ಶುಕೋತ್ತಮವು ಎಲೈ ಶೋಭನಾಂಗಿಯೇ! ನಾನು
ಅದಕ್ಕೆ ತಕ್ಕ ಉಪಾಯವನ್ನು ಹೇಳುವೆನು, ಆವರಿವಿಗೂ ರಾಕ್ಷಸಿಯು ಬಂದಕಾ
ಲದಲ್ಲಿಯು, ನಿದ್ರೆಯಿಂದ ಎದ್ದಿರುವಾಗಲೂ, ಈತನನ್ನು ಮರೆಪಡಿಸಿಕೊಂಡು
ಜತನದಿಂದ ರಕ್ಷಿಸುತಲಿರೆಂದು ಹೇಳಲು ಆ ಲತಾಂಗಿಯು ರಾಜಪುತ್ರನನ್ನು ಕರೆ
ದುಕೊಂಡುಹೋಗಿ ರಾಕ್ಷಸಿಯು ನಿದ್ರೆಯಿಂದೇಳುವ ಸಮಯವಾಯಿತೆಂದು ರಹ
ಸ್ಯಪ್ರದೇಶದಲ್ಲಿ ಬಚ್ಚಿಟ್ಟು ರಾಕ್ಷಸಿಗೆ ಮುದ್ದಂ ತೋರಿಸಿ ಅವಳು ಸಂಚಾರಕ್ಕೆ
ಹೋದಬಳಿಕ ಆ ರಾಜನಿಗೆ ಪನ್ನೀರಿನಿಂದ ಸ್ನಾನಮಾಡಿಸಿ ತಾನೂ ಮಜ್ಜನಂ
ಗೈದು ದಿವ್ಯ ವಸ್ತ್ರಾಭರಣಗಳನ್ನು ಧರಿಸಿ ಸುಗಂಧಯುಕ್ತವಾದ ಪರಿಮಳಗಳನ್ನು
ಪೂಸಿಕೊಂಡು ಭಕ್ಷ್ಯಗಳನ್ನು ಮಧುರಾಹಾರವನ್ನು ಭಕ್ಷಿಸಿ ಈರ್ವರೂ ಮನ್ಮಥ
ವಿಕಾರಗಳಾದ, ಸುರತಸುಖಗಳನ್ನು ಅನುಭವಿಸುತಲಿದ್ದರು. ಈ ಪ್ರಕಾರದೊಳು
ಅನೇಕ ದಿವಸಗಳು ಕಳೆದತರುವಾಯ ಒಂದಾನೊಂದು ದಿವಸ ರಾಜಪುತ್ರನು
ತ್ರಿಲೋಕಸುಂದರೀಮಣಿಯನ್ನು ಕುರಿತು ಇಂತೆಂದನು.

ಎಲೈ—ಪ್ರಾಣನಾಯಕಿಯೇ ಈ ರಾಕ್ಷಸಿಯ ಭಯದಿಂದ ನನಗೆ ನಿದ್ರೆಯೇ
ಬಾರದು, ಎದೆಯೊಳಗೆ ಧೈರ್ಯವೆಂಬುವದು ತಿಲಮಾತ್ರವೂ ಇಲ್ಲ ನಾವೆಂದಿಗ
ಇಲ್ಲಿಂದ ಬಿಡುಗಡೆಯಾಗಿ ನಮ್ಮ ಪುರವನ್ನು ಸೇರುವೆವು ಎಂದು ಕೇಳಲಾವನ
ಜಾಕ್ಷಿಯು ಕಣ್ಣೀರನ್ನು ಸುರಿಸುತ್ತಾ ಗಿಳಿಯ ಬಳಿಗೆ ಹೋಗಿ ವಲ್ಲಭನ ಸಂಕಟ
ವನ್ನುಸುರಲಾಗಿ ಆ ಗಿಳಿಯು ಎಲೈ ಅಕ್ಕನೇ! ನಾವು ತೃಣೀಭಾವವನ್ನು ಕೈ
ಕೊಂಡು ಆತುರಪಡಲಾಗದು, ಶಾಂತಮಾರ್ಗದಿಂದ ರಕ್ಕಸಿಯ ಪ್ರಾಣಮರ್ಮ

ವನ್ನು ಅರಿತು ತರುವಾಯ ಸಾಧ್ಯಾಸಾಧ್ಯಗಳನ್ನು ಯೋಚಿಸಿ ಕಾರ್ಯಾನುಕೂಲ ವನ್ನು ಮಾಡಿಕೊಳ್ಳಬೇಕೆಂದು ಸಮ್ಮತಿಪಡಿಸಲು ಒಂದಾನೊಂದು ದಿವಸ ರಕ್ಕಸಿಯು ಈ ತ್ರಿಲೋಕಸುಂದರೀಮಣಿಯನ್ನು ಮುದ್ದಾಡಿ ಸಂತೋಷಿಸುವ ಕಾಲದೊಳು ಆ ವನಜಾಕ್ಷಿಯು ಕಣ್ಣಿನಲ್ಲಿ ನೀರನ್ನು ಸುರಿಸುವವಳಾಗಲು, ರಕ್ಷಸಿಯು ಕಂಡು ಎಲೈ ಮಗುವೇ ! ನೀನು ಏನು ನಿಮಿತ್ತದಿಂದ ದುಃಖಪಡುವೆಯೋ ಅದನ್ನು ನನಗೆ ತಿಳಿಸು, ನಿನಗೆ ಯಾವ ವಿಧದಿಂದಲೂ ಕೊರತೆಯುಂಟಾಗದಂತೆ ದೇವನಾಗಲೋಕಗಳಲ್ಲಿಲ್ಲದಿರುವಂಥ ಜೀವರತ್ನಗಳನ್ನೂ ನಾನಾ ವಿಧವಾದ ವಸ್ತುಗಳನ್ನು, ನಿನ್ನಲ್ಲಿ ನಿರಂತರವೂ ಭಾಷಿಸುತಲಿರುವುದಕ್ಕೆ ಶುಕರತ್ನವನ್ನು ತಂದುಕೊಟ್ಟಿರುವೆನು, ಇಂದ್ರ, ವರುಣ, ಕುಬೇರರೇ ಮುಂತಾದ ಅಮರರ ಅಂತಃಪುರಗಳಿಗಿಂತಲೂ, ನಿನ್ನ ಅಂತಃಪುರವು ಕೇವಲ ಶ್ಲಾಘನೀಯವಾಗಿ ರ್ಪದು ಮತ್ತು ನಿನಗೆ ಯಾವುದು ಅಪೇಕ್ಷೆ ಇರುವುದೋ ಅದನ್ನು ನೇ..ವಸಿ ಈ ನಿಮಿಷದಲ್ಲಿ ನಡೆಸುವೆನೆಂಮು ಹೇಳಿ ಆಕೆಯ ಕಣ್ಣೀರನ್ನು ಒ..ಸಲಾಗಿ ಬಿಸರುಹ ದಳಾಕ್ಷಿಯು ಎಲೈ ತಾಯಿಯೇ ! ನಿನಗೆ ಯಾವವಿಧದಿಂದಲೂ ಕೊರತೆಯು ಉಂಟಾಗಿಲ್ಲವು, ಒಂದಕ್ಕಾದರೂ ನಾನು ವಿಚಾರಪಡತಕ್ಕದಕ್ಕೆ ನಿಮಿತ್ತವನ್ನೆ ಕಾಣೆನು ಸಂಚಾರಕ್ಕಾಗಿ ನೀನು ಹೊರಗೆ ಹೋದ ಸಮಯದೊಳು ಯಾವ ವಿಧದಿಂದಲಾದರೂ ಅಪಾಯಗಳಾದರೂ ಪ್ರಾಪ್ತವಾದರೆ ಬಳಿಕ ನನಗೆ ಗತಿ ಯಾರೆಂದು ಯೋಚಿಸುವೆ ! ಎನಲಾಮಾತಿಗೆ ರಾಕ್ಷಸಿಯು ಹುಸಿನಗೆಯಿಂದ ಆವಳನ್ನು ಸಂತೈಸಿ ಮಗುವೇ ! ನೀನು ಸ್ವಲ್ಪವಾದರೂ ಭಯಪಡಬೇಡ ಯಾರಿಂದಲೂ ನಾನು ಸಾಯುವುದಿಲ್ಲ. ನನ್ನತಪೋಮಹಿಮಾತಿಶಯದಿಂದ ನನ್ನ ಪಂಚಪ್ರಾಣಗಳನ್ನು ಐದು ದುಂಬಿಗಳನ್ನಾಗಿ ಮಾಡಿ ಅವುಗಳನ್ನು ಒಂದು ಭರಣಿಯೊಳಿಟ್ಟು ಕ್ಷುತ್ಪಿಪಾಸಗಳು ಜನನ ಮರಣಗಳು ಇಲ್ಲದಂಥಾ ಒಂದು ಗಿಣಿಯನ್ನು ರಚಿಸಿ ಆ ಭರಣಿಯನ್ನು ಅದರ ವಶಮಾಡಿ ಈ ತೀರದೊಳಿರುವ ತಾಳೆಯ ಮರದಮೇಲೆ ಇಟ್ಟಿರುವೆನು ! ಇಂದ್ರಾದಿ ದೇವತೆಗಳಿಗೂ ಆ ಗಿಳಿಯು ವಶವಾಗತಕ್ಕದ್ದಲ್ಲವು. ಆ ಕಾರಣದಿಂದ ದೇವತೆಗಳು ತಮ್ಮ ನಿವಾಸಗಳನ್ನು ಬಿಟ್ಟು ಗುಹೆಗಳಲ್ಲಿಯೂ ಪರ್ವತಗಳೊಳಗೂ ವಾಸಮಾಡುತಲಿರುವರು ನನಗೆ ಮರಣವು ಸಂಭವಿಸುವುದೆಂದು ಸ್ವಪ್ನದಲ್ಲಿಯೂ ನೀನು ಚಿಂತಿಸಬೇಡ, ನಿನ್ನೊಳಿರುವ ಅತ್ಯಂತ ಪ್ರೇಮದಿಂದ ನಾನು ಈ ಮರ್ಮವನ್ನು ನಿನಗೆ ರಹಸ್ಯವಾಗಿ ತಿಳಿಸಿರುವೆನು ಇದನ್ನು ನೀನು ಮನದೊಳಿಟ್ಟು ಕೊಂಡು ನಿರಂತರವೂ ಭಯರಹಿತಳಾಗಿರೆಂದು ಹೇಳಿ ತಾನು ತಂದಿದ್ದ ಶ್ರವಗಳನ್ನೂ ಆನೆಗಳನ್ನೂ ಮಧುವನ್ನೂ ಭಕ್ಷಿಸಿ ಬಂಡೆಯಮೇಲೆ ನಿದ್ರೆಗೋಸ್ಕರ ಮಲಗಲು ಅದನ್ನೆಲ್ಲಾ ತಿಳಿದ ತ್ರಿಲೋಕಸುಂದರೀಮಣಿಯು ಗಿಳಿಯ ಬಳಿಗೆ

ಹೋಗಿ ರಾಕ್ಷಸಿಯ ಪ್ರಾಣಮರ್ಮಗಳನ್ನು ತಿಳಿಸಲು ಅದಕ್ಕಾ ಶುಕವು ಎಲೆ ಅಂಗನೆಯೇ! ನಾನಾಕಾರ್ಯಾನುಗುಣವಾದ ಯುಕ್ತಿಯನ್ನು ಮಾಡುವೆನು ದೈವ ಸಹಾಯದಿಂದ ನಮ್ಮ ಪ್ರಯತ್ನಗಳೆಲ್ಲಾ ಲಭಿಸುವದೆಂದು ಹೇಳಿ ತಾನೊಂದ ಭರಣಿಯನ್ನು ಮೂಗಿನಿಂದ ಕಚ್ಚಿಕೊಳ್ಳುವ ಅಭ್ಯಾಸಮಾಡಿಕೊಂಡು ಒಂದ ದಿವಸ ಆ ನಾರೀಮಣಿಯನ್ನು ಕುರಿತು ಎಲೈ ಸುಂದರಿಯೇ! ನೀನು ಮನದೊಳಿರುವ ಸಂಶಯವನ್ನು ತ್ಯಜಿಸುವವಳಾಗು ನಾಳೆಯ ಬೆಳಿಗ್ಗೆ ನನ್ನನ್ನು ಬಿಡಿಸ ನಾನೀ ಭರಣಿಯನ್ನು ಮೂಗಿನಿಂದ ಕಚ್ಚಿಕೊಂಡು ಹೋಗಿ ರಕ್ಕಸಿಯ ಗಿಳಿಯನ್ನು ಮೋಸಗೊಳಿಸಿ ಅವರ ಬಳಿಯಲ್ಲಿರುವ ಭರಣಿಯನ್ನು ತರುವೆನು ತರುವಾಯ ನಮ್ಮ ರಾಜಪುತ್ರನು ಆ ಭರಣಿಯೊಳಿರುವ ದುಂಬಿಗಳನ್ನು ಸಂಹರಿಸಿದರೆ ರಕ್ಕಸಿಯಗಿಳಿಯು ಪ್ರಾಣಗಳನ್ನು ತೊರೆಯುತ್ತದೆ. ಬಳಿಕ ನಮಗೆ ಸುಖಾನಂದಕರಗಳುಂಟಾಗುವುವೆನಲು ಆ ಮಾತಿಗೆ ಅಂಗನೆಯು ನೇತ್ರಗಳಲ್ಲಿ ನೀರನ್ನು ಸುರಿಸುತ್ತಾ ಓಹೋ! ರಾಘುಶೇ ನಿನ್ನನ್ನು ಬಿಟ್ಟು ನಿಮಿಷಮಾತ್ರವೂ ನಾನು ವಾಸಿಸಲಾರೆನು ನಿನ್ನನ್ನು ನೋಡದೇ ಇರುವ ನಿಮಿಷವು ನನಗೊಂದು ಯುಗವಾಗಿ ಪರಿಣಮಿಸುವದು ನನ್ನ ಪ್ರಾಣಗಳೆಲ್ಲಾ ನಿನ್ನಿಂದಲ್ಲವೇ ನಿಂತಿರುವುದು ನಿನ್ನನ್ನು ಬಿಟ್ಟರೆ ನನಗೆ ಗತಿಯಾರೆಂದು ಹೇಳಿ ದುಃಖಿಸುತಿರಲಾಗಿ ಆ ಗಿಳಿಯು ಬಹಳ ನಂಬುಗೆಯನ್ನು ಹೇಳಿ ಆ ಇಂದುಮುಖಿಯನ್ನು ಸಮಾಧಾನಗೊಳಿಸಿತು, ವಿಚಿತ್ರವಾಹನನೂ ಕೂಡ ಹೆಂಡತಿಯನ್ನು ಸಂತೈಸಿದನು ಆ ಕಮಲಾಕ್ಷಿಯು ಒಳ್ಳೇದೆಂದು ಬೆಳಿಗ್ಗೆ ಗಿಳಿಗೆ ಆಹಾರವನ್ನಿತ್ತು ಮುದ್ದಿಟ್ಟು ಎಲೈ—ರಾಮನೇ ರಾಕ್ಷಸಿಯು ನಿದ್ರೆಯಿಂದ ಏಳುವುದರಲ್ಲಿಯೇ ನೀನು ಬಂದು ಸೇರದಿದ್ದರೆ ನನ್ನ ಪ್ರಾಣಗಳು ನಿಲ್ಲುವುದಿಲ್ಲವೆಂದು ಹೇಳಿ ಶುಕವನ್ನು ಬಿಟ್ಟಳು. ಆಗಲಾ ಗಿಳಿಯು ತನ್ನಲ್ಲಿದ್ದ ಭರಣಿಯನ್ನು ಮೂಗಿನಿಂದ ಕಚ್ಚಿಕೊಂಡು ತೀವ್ರವಾಗಿ ಹತ್ತು ಯೋಜನಗಳ ದೂರದಲ್ಲಿರುವ ತಾಳೆಮರದ ಬಳಿಗೆ ಬಂದು ಅಲ್ಲಿರುವ ರಾಕ್ಷಸಿಯ ಗಿಳಿಗೆ ಎಚ್ಚರವಾಗುವಂತೆ ಮಧುರವಾಗಿ ನುಡಿಯಲು, ಮರದಮೇಲಿದ್ದ ರಕ್ಕಸಿಯ ಗಿಳಿಯು ಆ ನುಡಿಗಳನ್ನು ಕೇಳಿ ಓಹೋ! ಬಹಳ ದಿವಸಳಿಗೆ ನಮ್ಮ ಜಾತಿ ಪಕ್ಷಿಯ ಧ್ವನಿಯನಾಲೈಸಿದೆನೆಂದು ಸಂತೈಸಿ ಅವರ ಬಾಯೊಳಿದ್ದ ಭರಣಿಯನ್ನು ಆ ಮರದಮೇಲೆಯೇ ಇಟ್ಟು ಎಲೈ ಬಂಧುವೇ ನೀನು ಯಾವ ಸ್ಥಳದಿಂದ ಬಂದವನಾದೆ ಈ ಮರದಮೇಲಕ್ಕೆ ಬಾರೆಂದು ಕರೆಯಲು, ಆ ಶುಕವು ಮರದ ಮೇಲಕ್ಕೆ ಹೋಗಿ ಅವರ ಬಾಯಿಯೊಳಿದ್ದ ಭರಣಿಯನ್ನು ಆ ರಕ್ಕಸಿಗಿಳಿಯು ಇಟ್ಟಿದ್ದ ಭರಣಿಯ ಹತ್ತಿರಿಟ್ಟು ಆ ಗಿಳಿಗೆ ನಮಸ್ಕರಿಸಿ ಎಲೈ ಮಾವನೇ ನನ್ನ ಭಾಗ್ಯೋದಯದಿಂದ ಈ ದಿನ ನಿನ್ನನ್ನು ನೋಡಿದವನಾದೆನು ನಾನು ನಿನ್ನ ಸಹೋದರಿಯ ಮಗನು ನನ್ನ ತಾಯಿಯ ಒಂದು ಭರಣಿಯನ್ನು ಬಾಯೊಳು

ಕಚ್ಚಿಕೊಂಡು ಹೋಗಿ ನಿನ್ನನ್ನು ನೋಡಿಕೊಂಡು ಕ್ಷೇಮವನ್ನರಿತು ಬಾಯೆಂದು ನನ್ನನ್ನು ಕಳುಹಿದಳಾದಕಾರಣ ನಿನ್ನ ಬಳಿಗೆ ಬಂದಿರುವೆನು ನಿನ್ನ ಸಮಾಚಾರ ವನ್ನು ಕ್ರಮವಾಗಿ ತಿಳುಹಿ ಜಾಗ್ರತೆಯಾಗಿ ಅಪ್ಪಣೆಯನ್ನಿತ್ತು ಕಳುಹೆನಲು ರಾಕ್ಷಸಿಯ ಗಿಳಿಯು ಆ ಮಾತುಗಳನ್ನು ನಿಜವೆಂದು ನಂಬಿ ಎಲೈ ಅಳಿಯನೇ! ನಾನು ಯಾರನ್ನೂ ನೋಡದವನಾಗಿಯೂ ಸಹೋದರಿಯನ್ನೂ ಕಾಣದೆ, ರಾಕ್ಷ ಸಿಯ ಅಪ್ಪಣೆಯಂತೆ ಈ ಭರಣಿಯನ್ನು ಬಾಯಿಯೊಳು ಕಚ್ಚಿಕೊಂಡು ಕ್ಷುತ್ಪಿ ಪಾಸಗಳು ನಿದ್ರೆಯೂ ಇಲ್ಲದೆ ಈ ತಾಳೆಯಮರದ ಮೇಲೆ ವಾಸಿಸುತಲಿರುವೆನು. ಇಲ್ಲಿಗೆ ದೇವ, ಗಂಧರ್ವ, ಯಕ್ಷಸಿದ್ಧರೇ ಆಗಲಿ ಮನುಷ್ಯರಾಗಲಿ ಮೃಗಗಳೇ ಆಗಲಿ, ಕ್ರಿಮಿ, ಪಕ್ಷಿ, ಕೀಟಾದಿಗಳಾಗಲಿ ಇವುಗಳಲ್ಲಿ ಯಾರೂ ಬರತಕ್ಕದ್ದಿ ಲ್ಲವು. ಈ ದಿನ ನಿನ್ನನ್ನು ನೋಡಿ ಪರಮಾನಂದವಾಯಿತು ನಿನ್ನ ತಾಯಿಯು ನೀನು ಯಾವ ಸ್ಥಳದಲ್ಲಿರುವಿರೆಂದು ಪ್ರಶ್ನೆಮಾಡಲು ಆದಕ್ಕಾ ಗಿಳಿಯು ನಾವು ಸಕ್ಷಾತ್ ಸದಾಶಿವನ ಸನ್ನಿಧಿಯಲ್ಲಿ ವಾಸಿಸುತ್ತಿರುವೆವು ಎನಲಾಗಿ ಆ ರಾಕ್ಷಸಿಯ ಗಿಳಿಯು ಅಳಿಯನೇ! ನೀನು ಅತ್ಯಂತ ಪ್ರಯಾಸದಿಂದ ಕಡಲನ್ನು ದಾಟಿ ಬಂದು ಬಹಳ ಶ್ರಮವನ್ನನುಭವಿಸಿದೆಯೆಂದು ಅದನ್ನು ಮುದ್ದಿಟ್ಟು ಸಂತೈಸ ಲಾಗಿ ಆ ಗಿಳಿಯು ಎಲೈ ಮಾವನೇ ನೀನು ಯೋಚಿಸಬೇಡ ಇಂದು ಮೊದಲು ತಿಂಗಳಿಗೊಂದಾವರ್ತಿ ಬಂದು ನಿನ್ನನ್ನು ನೋಡಿಕೊಂಡು ಹೋಗುವೆನು ನೀನು ಕೇವಲ ದಯಾರಸಭರಿತನಾಗಿ ನಾನಿಲ್ಲಿಂದ ತಾಯಿಯ ಸಮೀಪವನ್ನೈದುವ ಪರ್ಯಂತರವೂ ಭಗವಂತನನ್ನು ಧ್ಯಾನಮಾಡುತಲಿರೆಂದು ನುಡಿದು ಆ ಗಿಳಿಗೆ ಮರುಳನ್ನುಂಟುಮಾಡಿತು.

ಬಳಿಕಲಾ ರಾಕ್ಷಸಿಯ ಗಿಳಿಯು ಅಳಿಯನನ್ನು ಸಂತೈಸಿ ಹೋಗಿಬಾರೆಂಬ ಅಪ್ಪಣೆಯನ್ನು ಕೊಡಲಾಗಿ ಆ ಶುಕವು ಮಾವನನ್ನು ಕುರಿತು, ನಾನು ಸ್ವಲ್ಪ ದೂರ ಹೋಗುವವರಿವಿಗೂ ನೀನು ನನ್ನನ್ನೇ ನೋಡುತ್ತಲಿರೆಂದು ಹೇಳಿ ತನ್ನ ಬಾಯಿಯ ಭರಣಿಯನ್ನು ವಂಚಿಸಿ ಅಲ್ಲಿಯೇ ಬಿಟ್ಟು ಆದರ ಬಳಿಯೊಳಿದ್ದ ಭರಣಿಯನ್ನು ತಾನು ಮೂಗಿನಿಂದ ಕಚ್ಚಿಕೊಂಡು ಉರ್ರೆಂದು ಹಾರಿಬರುತ ಲಿತ್ತು ರಾಕ್ಷಸಿಯ ಗಿಳಿಯು ತನ್ನಳಿಯನು ಹೇಗೆ ಕಡಲಂ ದಾಟಿಹೋಗು ವನೋ ಎಂದು ಅದರ ದಾರಿಯನ್ನೇ ನೋಡುತ್ತಾ ಕಾಲವಂ ಕಳೆಯುತಬಂತು, ಇತ್ತಲೀ ತ್ರಿಲೋಕಸುಂದರೀಮಣಿಯು ಸಾಯಂಕಾಲವಾಗುತಬರಲು ನನ್ನ ಮೋಹದ ಶುಕವು ಇಷ್ಟು ಹೊತ್ತಾದರೂ ಬರಲಿಲ್ಲವಲ್ಲಾ ಏನುಮಾಡಲಿ ಪ್ರಾಣ ಗಳನ್ನು ಸಹಿಸುವುದು ಕಷ್ಟವಲ್ಲಾ ಎಂದು ದುಃಖಿಸುತ್ತಿರುವಷ್ಟರಲ್ಲಿಯೆ ಶುಕವು ಭರಣಿಯನ್ನು ತೆಗೆದುಕೊಂಡು ಅವಳ ಸಮೀಪಕ್ಕೆ ಹಾರಿಬಂದು ನಡೆದ ಸಮಸ್ತ ವೃತ್ತಾಂತವನ್ನು ವಿವರವಾಗಿ ತಿಳುಹಿ ಎಲೈ—ಅಕ್ಕನೇ ನಮ್ಮ ಮನೋಭೀಷ್ಟವು

ಸಿದ್ಧಿಸಿತೆಂದು ನುಡಿದು ತಾನು ತಂದ ಭರಣಿಯನ್ನು ರಾಜಪುತ್ರನ ಸಮೀಪದೊಳಿಟ್ಟು ಎಲೈ ರಾಜಪುತ್ರನೇ ಇದರಲ್ಲಿರುವ ಐದುದುಂಬಿಗಳನ್ನು ಶೀಘ್ರವಾಗಿ ಹೊಡೆದುಹಾಕೆನಲಾಗಿ ಆ ವಿಚಿತ್ರವಾಹನರಾಯನು ಬಹಳ ಧೈರ್ಯವುಳ್ಳವನಾಗಿ ಆ ದುಂಬಿಗಳೈದನ್ನು ಹೊಡೆದು ಅವುಗಳ ಪ್ರಾಣಗಳನ್ನು ತೆಗೆದನು. ಅಷ್ಟರೊಳು ರಕ್ಕಸಿಯು ಮೋಸಹೋದೆನೆಂದು ಶ್ರವದಕೂಗಿನಂತೆ ಧ್ವನಿಮಾಡಿ ಆ ತಾಳೆಯ ಮರದಮೇಲಿನವರೆಗೂ ಹಾರಿ ಕೆಳಕ್ಕೆ ಬಿದ್ದು ಪ್ರಾಣವನ್ನು ಬಿಟ್ಟಳು ತರುವಾಯ ರಾಕ್ಷಸಿಯ ಗಿಳಿಯೂ ಕೂಡ ತಾನು ಮೋಸಹೋದುದರಿಂದ ಈರೀತಿ ಸಂಭವಿಸಿತೆಂದರಿತು ಮೃತಿಯನ್ನೈದಿತು, ಆ ರಾಕ್ಷಸಿಯ ಮರಣಾವಾರ್ತಾಶ್ರವಣದಿಂದ ಇಂದ್ರಾದಿದೇವತೆಗಳು ಬಹಳವಾಗಿ ಸಂತೈಸಿ, ದೇವವಾದ್ಯಗಳೊಂದಿಗೆ ಅಲ್ಲಿಗೆ ಬರಲು ವಿಚಿತ್ರವಾಹನನನ್ನು ಕಂಡು ತ್ರಿಲೋಕಸುಂದರೀಮಣಿ ಸಹಿತವಾಗಿ ಅವರಿಗೆ ನಮಸ್ಕರಿಸಿದರು ಆಗಲಾದೇವೇಂದ್ರನು ಅವರಂ ಸಂತೈಸಿ, ಎಲೈ—ವಿಚಿತ್ರವಾಹನನೇ ತ್ರಿಲೋಕಕಂಟಕಿಯಾದ ಘೋರರಕ್ಕಸಿಯನ್ನು ಗಿಳಿಯು ಮಾಡಿದ ತಂತ್ರದಿಂದ ಕೊಂದು ನಮ್ಮೆಲ್ಲರಿಗೂ ಪರಮಸಂತೋಷವನ್ನುಂಟುಮಾಡಿದೆ ಅಮರರೆಲ್ಲರೂ ನಿನಗೆ ಮೇಲು ಕೋರುತಲಿರುವರೆಂದು ಬಹಳವಾಗಿ ಸ್ತುತಿಸಿ ಇನ್ನು ನೀವು ಇಲ್ಲಿ ಇರಬೇಡಿ ಜಾಗ್ರತೆಯಾಗಿ ತೆರಳುವವರಾಗಿರೆಂದು ಹೇಳಿ ಪುಷ್ಪಕ ವಿಮಾನವನ್ನು ಕೊಟ್ಟು ಶುಕವನ್ನು ಸ್ತುತಿಸಿ ತಮ್ಮ ಸ್ವರ್ಗಲೋಕಕ್ಕೆ ಹೋದರು.

ಬಳಿಕಲಾ ವಿಚಿತ್ರವಾಹನರಾಯನು ಅನೇಕವಾದ ರತ್ನಗಳನ್ನು ಅಪರಂಜಿಯ ವಸ್ತುಗಳನ್ನು ನಾನಾ ವಿಧವಾದ ವಸ್ತ್ರಾಭರಣಗಳನ್ನು ತೆಗೆದುಕೊಂಡು ಭಾರ್ಯೆಯನ್ನೂ ಶುಕವನ್ನೂ ಆ ಪುಷ್ಪಕವಿಮಾನದಮೇಲೆ ಕುಳ್ಳಿರಿಸಿಕೊಂಡು ಆ ಸಮುದ್ರವನ್ನು ದಾಟಿ ಭುಜಂಗಮಹರ್ಷಿಯ ಆಶ್ರಮಕ್ಕೆ ಬಂದು ಪುಷ್ಪಕವಿಮಾನವನ್ನಿಳಿದು ಆ ತಪೋಧನನ ಪಾದಕಮಲಗಳಿಗೆ ನಮಸ್ಕರಿಸಿ, ನಡೆದ ವೃತ್ತಾಂತವನ್ನೆಲ್ಲಾ ವಿಸ್ತರಿಸಿ ಹೇಳಲಾಗಿ ಮುನೀಂದ್ರನು ಸಂತೈಸಿ, ಶುಕವನ್ನು ನಾನಾ ಪ್ರಕಾರದಿಂದ ಸ್ತುತಿಸಿ ಪ್ರಣವ ಮಹಾತ್ಮ್ಯೆಗಳಿಂದ ನಿನ್ನಭೀಷ್ಟಗಳೆಲ್ಲಾ ಸಿದ್ಧಿಯಾದವು ಮತ್ತು ಇಂದ್ರಾದಿದೇವತೆಗಳು ಬಂದು ನಿನಗೆ ದರ್ಶನವನ್ನಿತ್ತು ತೆರಳಿದರು. ನೀನು ನನ್ನವನಾದೆ ಎಂದು ಆ ವಧೂವರರನ್ನು ಸಂತೈಸಿ, ನಾನಾ ವಿಧಗಳಾದ ಧರ್ಮೋಪದೇಶಗಳನ್ನು ಮಾಡುತಲಿದ್ದನು.

ಅಷ್ಟರಲ್ಲಿ ತ್ರಿಲೋಕಸಂಚಾರಿಯಾದ ನಾರದಮಹರ್ಷಿಯಿಂದ ತ್ರಿಲೋಕಸುಂದರೀಮಣಿಯ ಸಕಲ ವೃತ್ತಾಂತಗಳನ್ನು ತಿಳಿದುಕೊಂಡು ಪಾಂಡ್ಯ ಮಹಾರಾಯನು ಅತ್ಯಂತ ಸಂತೋಷಚಿತ್ತನಾಗಿ ಚತುರಂಗಬಲದೊಡನೆ ಆ ಭುಜಂಗಮಹರ್ಷಿಯ ಆಶ್ರಮಕ್ಕೆ ಬಂದು ಆ ಮುನೀಶ್ವರನಿಗೆ ನಮಸ್ಕರಿಸಿ ತಾನು ಬಂಧ

ಸಮಾಚಾರವನ್ನೆಲ್ಲಾ ತಿಳುಹಿ ಎಲೈ ಮಹಾನುಭಾವನೇ ಅಪ್ಪಣೆಯನ್ನಿತ್ತು ಕಳುಹಿಸಬೇಕೆಂದು ಪ್ರಾರ್ಥಿಸಲು ಆ ಮುನಿಯು ದಂಪತಿಗಳನ್ನು ಸಂತೈಸಿ, ಇನ್ನು ನೀವು ಪಟ್ಟಣಕ್ಕೆ ತೆರಳಿ, ಲೋಕೋತ್ತರವಾದ ಸುಖಗಳನ್ನನುಭವಿಸಿ ರೆಂದು ಅನುಗ್ರಹಮಾಡಲು, ಪಾಂಡ್ಯಭೂಪನು ಅಳಿಯನನ್ನು ನಾನಾವಿಧವಾಗಿ ಕೊಂಡಾಡಿ ತನಯಳಂ ಮುದ್ದಿಟ್ಟು ಶುಕವಂ ಶ್ಲಾಘಿಸಿ, ಜೊತೆಯಲ್ಲಿಯೇ ತನ್ನ ಪಟ್ಟಣಕ್ಕೆ ಕರೆದುಕೊಂಡು ಹೋಗಿ ವಿವಾಹವನ್ನು ಬೆಳೆಸಲು ಪಟ್ಟಣವನ್ನಲಂಕ ರಿಸಿ, ತನ್ನ ಬೀಗನಾದ ಪಾಂಚಾಲಭೂಪತಿಗೂ ತನ್ನ ಅಣ್ಣನಾದ ಮತ್ಸ್ಯಭೂ ಪಾಲನಿಗೂ, ಲಗ್ನಪತ್ರಿಕೆಗಳನ್ನು ಕಳುಹಿದನು ಅವುಗಳನ್ನು ನೋಡಿದಮಾತ್ರ ದಿಂದಲೆ ಅವರು ಬಹಳ ಸಂತುಷ್ಟರಾಗಿ ಅತಿ ತೀವ್ರದಿಂದ ಸೇನಾಸಮೇತ ರಾಗಿ ಬಂದರು. ಆಗ ವಿಚಿತ್ರವಾಹನನು ತಂದೆತಾಯಿಗಳಿಗೂ ಸಹೋದರ ರಿಗೂ ನಮಸ್ಕರಿಸಿ, ತನ್ನ ಚಿಕ್ಕ ಅತ್ತಿಗೆಯ ದೆಸೆಯಿಂದ ತನಗೆ ಮಹರ್ಷಿಯ ಅನುಗ್ರಹವು ಇಂದ್ರಾದಿದೇವತೆಗಳ ದರ್ಶನವೂ ತ್ರಿಲೋಕಸುಂದರೀಮಣಿಯ ಸಂಬಂಧವೂ ಉಂಟಾದವೆಂದು ಕ್ರಮವಾಗಿ ತಿಳುಹಿ ಆ ಚಿಕ್ಕ ಅತ್ತಿಗೆಯನ್ನು ದೇವರತ್ನಗಳಿಂದ ಪೂಜಿಸಿದನು.

ತರುವಾಯ ಪಾಂಡ್ಯಮಹಾರಾಯನು ಶುಭ ಮುಹೂರ್ತದಲ್ಲಿ ಅಳಿಯ ನಿಗೂ. ಪುತ್ರಿಗೂ ಮಂಗಳಸ್ನಾನವನ್ನು ಮಾಡಿಸಿ ವಿವಾಹಮಹೋತ್ಸವವನ್ನೂ ಪಟ್ಟಾಭಿಷೇಕೋತ್ಸವವನ್ನೂ ನೆರವೇರಿಸಿದನು. ಪಾಂಚಾಲಾಧಿಪನು ಆತನ ಹೆಂಡತಿಯೂ ತಮ್ಮ ಮಗಳನ್ನು ಸೊಸೆಯನ್ನು ಸಂತೈಸಿ ಅವರು ಮಾಡಿದ ಮರ್ಯಾದೆಗಳನ್ನು ಸ್ವೀಕರಿಸಿ ಮೂವರು ಮಕ್ಕಳುಮತ್ತು ಸೊಸೆಯರೊಂದಿಗೆ ಪ್ರಯಾಣವಾಗಿ ತಮ್ಮ ದೇಶಗಳಿಗೆ ಹೋಗಿ ಸೇರಿದರು. ವಿಚಿತ್ರವಾಹನನು ಪಾಂಡ್ಯದೇಶವನ್ನು ಪರಿಪಾಲಿಸುತ್ತಾ ದೈವಾನುಗ್ರಹದಿಂದ ಸಮಸ್ತ ದೇಶಗ ಳನ್ನು ಜಯಿಸಿ ಭೂಮಂಡಲಾಧಿಪನೆಂದು ಪೆಸರ್ಗೊಂಡು ಚಕ್ರವರ್ತಿಯಾಗಿ ಸಮಸ್ತ ರಾಜ್ಯವನ್ನು ಪರಿಪಾಲಿಸುತ್ತಾ ತಾರಕಮಂತ್ರವನ್ನು ಸರ್ವದಾ ಜಪಿ ಸುತ್ತ ಹಿರಿಯರನ್ನು ಪೂಜಿಸುತ್ತಾ ಅನೇಕ ದಿವಸಗಳು ರಾಜ್ಯವನ್ನು ಪರಿಪಾ ಲಿಸಿ ಕಡೆಗೆ ದೇಹವನ್ನು ತ್ಯಜಿಸಿ ಸತ್ಯಲೋಕವನ್ನೈದಿದನೆಂದು ಹೇಳಲಾಗಿ ಅಮ ರೇಂದ್ರಸಂಭೂತನು ಆಶ್ಚರ್ಯವಂ ಹೊಂದಿ ಇದು ಅದ್ಭುತವಾದ ಚರಿತ್ರೆಯೆಂದ್ರು ಆ ವಿಚಿತ್ರವಾಹನನನ್ನು ಸ್ತುತಿಸಿ ಮುರವೈರಿಯನ್ನು ಕೊಂಡಾಡುತ್ತಾ ಎಲೈ ಪುರು ಷೋತ್ತಮನೆ ನಿನ್ನ ಕರುಣಾರಸದಿಂದ ದೇವದರುಶನವು ನನಗೂ ಉಂಟಾಗು ವುದರಲ್ಲಿ ಅಭ್ಯಂತರವಿಲ್ಲ ಬೆಳಗಾಗುತ್ತಾ ಬಂದುದರಿಂದ ಇನ್ನು ನಿದ್ರೆಮಾಡೋಣ ವೆನಲಾಗಿ ಭಗವಂತನು ಸಮ್ಮತಿಸಿ ಈರ್ವರೂ ಸುಖನಿದ್ರೆಯನ್ನು ಮಾಡಿದರು.

ಐದನೆಯ ಕಥೆ ಸಂಪೂರ್ಣಂ.



## ಶ್ರುತಕೀರ್ತಿಯೆಂಬ ಆರನೆ ರಾಜಪುತ್ರನ ಕಥೆ.

ಆರನೇ ದಿವಸ ರಾತ್ರಿ ಕೃಷ್ಣಾರ್ಜುನರೀರ್ವರೂ ಯಮುನಾನದೀ ಪ್ರಾಂತ್ಯದ ಮರುಳು ದಿಣ್ಣೆಗಳಮೇಲೆ ಕುಳಿತುಕೊಂಡು ತಾಂಬೂಲವಂ ಸವಿಯುತ್ತಾ ನದೀತರಂಗಗಳ ಮೇಲಿಂದ ತಂಪಾಗಿ ಬೀಸುತಲಿರುವ ಮಲಯಮಾರುತಕ್ಕೆ ಆನಂದವನ್ನು ಹೊಂದುತ್ತಾ, ಅರ್ಜುನನು ಶ್ರೀಕೃಷ್ಣನನ್ನು ಕುರಿತು, ಎಲೈ ಪುರುಷೋತ್ತಮನೇ ! ಅಪವರ್ಗಮಾರ್ಗಗಳಾದ ವೇದಾಂತಸಾರಗಳಲ್ಲಿ ಕೆಲವು ಅಂಶಗಳನ್ನು ಚೆನ್ನಾಗಿ ಗ್ರಹಿಸಿದೆನು. ಈಗ ವೇದಾಂತಸಾರಗಳಲ್ಲಿ ಆರನೆಯದಾದ ಸಚ್ಚಿದಾನಂದಲಕ್ಷಣವನ್ನು ನನಗೆ ಬೋಧಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಅತ್ಯಂತ ಆಸಕ್ತಿಯೊಡನೆ ಕೇಳಲಾಗಿ ಭಗವಂತನಿಂತೆಂದನು.

ಎಲೈ ಪಾಂಡುತನಯನೇ ! ಲಾಲಿಸು, ಪೂರ್ವಕಾಲದಲ್ಲಿ ವಿಶ್ರುತನೆಂಬ ಮಹಾರಾಜನು ಮಾಳವದೇಶಕ್ಕೆ ಅಧಿಪತಿಯಾಗಿ ಧರ್ಮದಿಂದ ರಾಜ್ಯಭಾರವಮಾಡುತ್ತಲಿದ್ದನು. ಆತನಿಗೆ ಸುಮತಿಯೆಂತಲೂ, ಸುನಂದಿ ಎಂಬದಾಗಿಯೂ ಇಬ್ಬರು ಮಡದಿಯರಿದ್ದರು. ಅವರಲ್ಲಿ ಚಿಕ್ಕಹೆಂಡತಿಯಾದ ಸುನಂದಿಗೆ ಶ್ರುತಸೋಮನೆಂಬ ಪುತ್ರನು ವಿಶ್ರುತಿಯೆಂಬ ಮಗಳು ಜನಿಸಿದರು ಪಟ್ಟದರಸಿಯಾದ ಸುಮತಿಗೆ ಸಂತಾನೋತ್ಪತ್ತಿಯಿಲ್ಲದೆ ಸವತಿಯ ಮಕ್ಕಳನ್ನೇ ತನ್ನ ಮಕ್ಕಳಂತೆ ಭಾವಿಸಿ ಅತ್ಯಂತ ಪ್ರೇಮವನ್ನು ತೋರಿಸಿ ಸಲಹುತಲಿರಲಾಗಿ ಕೆಲವು ದಿವಸಗಳಿಗೆ ತಾನೂ ಗರ್ಭವಂ ಧರಿಸಿ ದಿವ್ಯಸುಂದರ ತೇಜಸ್ವಿಯಾದ ಕುಮಾರನನ್ನು ಹೆತ್ತಳು. ಆಗ ಆ ನರಾಧಿಪನು ಆನಂದಭರಿತನಾಗಿ ಪುತ್ರನಿಗೆ ಜಾತಕರ್ಮಾದಿ ಕ್ರಿಯೆಗಳನ್ನು ಮಾಡಿ ಶ್ರುತಕೀರ್ತಿ ಎಂದು ನಾಮಕರಣವನ್ನು ಮಾಡಿ ಅತ್ಯಂತ ಪ್ರೇಮದಿಂದ ಸಲಹುತ್ತಾ ಅವನಿಗೆ ಐದು ಸಂವತ್ಸರಗಳಾಗಲು ಅಕ್ಷರಾಭ್ಯಾಸವನ್ನು ಮಾಡಿಸಿದನು. ಆ ಬಾಲಕನು ದಿನದಿನಕ್ಕೂ ಹುಣ್ಣಿಮೆಯ ಚಂದ್ರನಂತೆ ಅಭಿವೃದ್ಧಿಯನ್ನೈದುತ್ತಾ ಕೇವಲ ಚುರುಕುಬುದ್ಧಿಯುಳ್ಳವನಾಗಿ ಸಕಲ ವಿದ್ಯೆಗಳನ್ನು ಕಲಿಯುತಲಿದ್ದನು. ಈರೀತಿಯಾಗಿ ಕೆಲವು ದಿವಸಗಳು ಕಳೆದತರುವಾಯ ಅರಸಿನ ಚಿಕ್ಕಹೆಂಡತಿ ಯಾದ ಸುನಂದಿನಿಯು ತನ್ನ ಅಕ್ಕನ ಮಗನ ಬುದ್ಧಿಚಾತುರ್ಯಗಳನ್ನು ನೋಡಿ ಸಹಿಸಲಾರದೆ ತನಗೆ ಆಪ್ತಳಾದ ಓರ್ವ ದೂತಿಯನ್ನು ನೋಡಿ, ಎಲೈ ಪ್ರಾಣಸಖಿಯೇ ! ನನಗೆ ಸಂಭವಿಸಿರುವ ಮನೋವ್ಯಥೆಯನ್ನು ಏನೆಂದು ಸುರಲಿ ! ನನ್ನ ಮಗನು ತಂದೆಯ ಸಿಂಹಾಸನಾರೂಢನಾಗುವನೆಂದು ತಿಳಿದಿದ್ದೆನು, ಇದಕ್ಕೆ ಲೋಪ ಸಂಭವಿಸಲು ಅರಸಿನ ಹಿರೀಹೆಂಡತಿಯು ಗಂಡುಮಗನನ್ನು ಹಡೆದಿರುವಳು. ಬುದ್ಧಿಯಲ್ಲಿಯೂ, ರೂಪಿನೊಳಗೂ, ಧೈರ್ಯಸಾಹಸಗಳೊಳಗೂ, ವಿದ್ಯೆಯಲ್ಲೂ, ಅವನು ನನ್ನ ಮಗನಿಗಿಂತ ಅತಿಶಯನಾಗಿರುವನು, ಇದಕ್ಕೇನುಮಾಡಬೇಕೆಂದು ಕೇಳಲು, ಆ ಕಪಟಮಾನಸಳಾದ ದೂತಿಯು

ಕೆಲವು ಮಂತ್ರೌಷಧಗಳನ್ನೂ ಯುಕ್ತಿಗಳನ್ನೂ ಸುನಂದಿಗೆ ಬೋಧಿಸಿದಳು. ಆ ದುರ್ಬೋಧೆಯನ್ನಂಗೀಕರಿಸಿ, ತನ್ನ ಕುವರನಿಗೆ ರಾಜ್ಯಪದವಿಯುಂಟಾಗುವುದೆಂದೂ ಶ್ರುತಕೀರ್ತಿಯನ್ನಡವಿಪಾಲು ಮಾಡುವೆನೆಂಬದಾಗಿಯೂ ಯೋಚಿಸಿ, ಮಣಿಮಂತ್ರೌಷಧಾದಿಗಳ ಸಹಾಯದಿಂದ ತನ್ನ ಪತಿಯನ್ನು ವಶಮಾಡಿಕೊಂಡು ಹಿರೀಹೆಂಡತಿಯ ಅಂತಃಪುರಕ್ಕೆ ರಾಜನು ಪ್ರವೇಶಿಸದಹಾಗೂ, ಶ್ರುತಕೀರ್ತಿಯು ತಂದೆಯಬಳಿಗೆ ಬರದಂತೆಯೂ ಮಾಡಿ, ತನ್ನ ಮಗನನ್ನು ಮಗಳನ್ನು ಮಾತ್ರ ರಾಜನ ಸಮೀಪದೊಳು ಬಂದು ಹೋಗುವುದನ್ನಧಿಕಪಡಿಸಿ, ಒಂದಾನೊಂದು ದಿವಸ ತನಗೆ ತಲೆನೋವು ಸಂಭವಿಸಿರುವದೆಂದು ತಲೆಗೆ ಪಟ್ಟುಗಳನ್ನು ಹಾಕಿಕೊಂಡು ಗಂಡನನ್ನು ಕುರಿತು, ಪ್ರಾಣನಾಥನೇ ! ನನಗೆ ಪ್ರಬಲವಾದ ವ್ಯಾಧಿಯು ಸಂಭವಿಸಿರುವುದು, ನನ್ನ ಬಾಲ್ಯಭಾವದಲ್ಲಿ ನನ್ನ ತಂದೆಯು ವಿಶೇಷ ಪ್ರಯಾಸವಟ್ಟುಪಸಾವಾಗ್ಯೂ ಈ ವ್ಯಾಧಿಯನ್ನು ನಿವಾರಿಸುವುದಕ್ಕೆ ಆಗವೆಹೋಯಿತು, ನಮ್ಮ ಅರಣ್ಯದಲ್ಲಿ ವಿಶೇಷವಾಗಿ ವ್ಯಾಘ್ರಗಳಿರುವುದೆಂದು ಕೇಳಿರುವೆನು. ನನಗಾಹುಲಿಯ ಹಾಲನ್ನು ತರಿಸಿಕೊಟ್ಟು ನನ್ನನ್ನು ಪ್ರಾಣಸಹಿತ ರಕ್ಷಿಸಿಕೊಳ್ಳಬೇಕೆಂದು ಬಹಳವಾಗಿ ದುಃಖಪಡಲಾರಂಭಿಸಿದಳು. ಆಗ ರಾಜನು ವ್ಯಸನಪಡುತ್ತಾ ಅವಳನ್ನು ಕುರಿತು ಎಲೈ ಪ್ರಿಯಳೇ ! ನಿನಗೆ ಹುಲಿಯ ಹಾಲನ್ನು ತರಿಸಿಕೊಡುವೆನೆಂದು ಹೇಳಿ, ಹುಲಿಯ ಹಾಲನ್ನು ತಂದುಕೊಡುವಂಥವರಿಗೆ ಒಂದು ಲಕ್ಷ ವರಹಗಳನ್ನು ಉಚಿತವಾಗಿ ಕೊಡುವೆನೆಂದು ತನ್ನ ದೇಶದಲ್ಲೆಲ್ಲಾ ಪ್ರಸಿದ್ಧಿಪಡಿಸಿದನು. ಅದನ್ನು ಕೇಳಿ ಅನೇಕರು ದ್ರವ್ಯಕಾಂಕ್ಷೆಯಿಂದ ಅರಣ್ಯಗಳಿಗೆ ಪ್ರವೇಶಿಸಿ, ಹುಲಿಗಳ ಬಾಯಿಗಳಿಗೆ ತುತ್ತಾದರು. ಅನೇಕ ಶೂರರೂ, ಮಂತ್ರವಾದಿಗಳೂ ಪ್ರಾಣಭಯದಿಂದ ಆ ದೇಶವನ್ನೇ ತ್ಯಾಗಮಾಡಿದವರಾದರು ರಾಜೋತ್ತಮನು ಇದನ್ನೆಲ್ಲಾ ಸುನಂದಿಗೆ ವಿಶದವಾಗಿ ತಿಳಿಸಲು, ಆ ಕಪಟನಾರೀಮಣಿಯು ಗಂಡನನ್ನು ಕುರಿತು, ಪ್ರಾಣನಾಥನೆ ಲೋಕದಲ್ಲಿ ಮಾನವರಿಗೆ ಸಾಧ್ಯವಾಗದ ಕಾರ್‍ಯ ಒಂದೂ ಇಲ್ಲ. ನೀವು ಮಾಡಿದ ವಾಗ್ದಾನವನ್ನು ನೆರವೇರಿಸದಿದ್ದರೆ ಅನೃತದೋಷಕ್ಕೆ ಪಾತ್ರರಾಗುವಿರಿ, ಲೋಕದಲ್ಲಿ ಅನೃತ ದೋಷಕ್ಕಿಂತಲೂ ಅಧಿಕವಾದ ಪಾಪವಿಲ್ಲವೆಂದು ಪುರಾತನ ಪುಣ್ಯಪುರುಷರು ಹೇಳಿರುವುದನ್ನು ನೀವು ಕೇಳಿಲ್ಲವೇ ! ನಿಮ್ಮ ಪುತ್ರರಲ್ಲಿ ಯಾರು ಹುಲಿಯ ಹಾಲನ್ನು ತರುವರೋ ಅವರಿಗೆ ರಾಜ್ಯಭಾರವು ಲಭಿಸುವುದೆಂದು ನೀವು ಪ್ರಸಿದ್ಧಮಾಡಿದರೆ ನಿಮ್ಮ ಯತ್ನವು ಸಾಧ್ಯವಾಗುವದೆಂದು ನುಡಿಯಲು ಆ ನೃಪಾಧಮನು ಅದರಂತೆಯೇ ತನ್ನ ಈರ್‍ವರು ಗಂಡುಮಕ್ಕಳನ್ನು ಕರೆಸಿ ಆಜ್ಞಾಪಿಸಲು, ಇದನ್ನು ಕೇಳಿದ ಸುನಂದಿಯು ತನಯನನ್ನು ಕುರಿತು, ಮಗುವೇ ! ನಿನಗೆ ರಾಜ್ಯಸಂಪದವೂ ಬೇಡ ಹುಲಿಯ ಹಾಲನ್ನು ತರುವುದು ದೇವತೆಗಳಿಗೂ ಅಸಾಧ್ಯವಾದ್ದರಿಂದ

ನೀನು ಹತ್ತು ದಿವಸಗಳ ಪರ್ಯಂತರವೂ ಯಾವುದಾದರೊಂದು ಗ್ರಾಮಾಂತರದಲಿದ್ದು ಬಂದು ಸಿಕ್ಕಲಿಲ್ಲವೆಂಬದಾಗಿ ನಿಮ್ಮ ಜನಕನಿಗೆ ಅರುಹುವವನಾಗೆಂದು ತನ್ನ ಕಪಟವಿದ್ಯೆಯಿಂದ ತಿಳಿಸಲಾಗಿ ಆ ಶ್ರುತಸೋಮನು ಹುಲಿಯ ಹಾಲನ್ನು ತರುವೆನೆಂದು ತಂದೆಗೆ ಹೇಳಿ ಬೇಟೆಗಾರರಹಿಂದೆ ಪ್ರಯಾಣಮಾಡಿದನು, ಶ್ರುತಕೀರ್ತಿಯು ತಾಯಿಯ ಸಮೀಪಕ್ಕೈದಿ, ಎಲೈ ತಾಯಿಯೇ ! ಹುಲಿಯ ಹಾಲನ್ನು ತಂದ ಮಗನಿಗೆ ರಾಜ್ಯಾಭಿಷೇಕವನ್ನು ಮಾಡುವೆನೆಂದು ತಂದೆಯು ಆಜ್ಞಾಪಿಸಿರುವನು. ಇದಕ್ಕಾಗಿ ನನ್ನ ಅಣ್ಣನಾದ ಶ್ರುತಸೋಮನು ಬೇಟೆಗಾರರನ್ನು ಜೊತೆ ಮಾಡಿಕೊಂಡು ಅರಣ್ಯಪ್ರವೇಶವನ್ನು ಮಾಡಿದನು. ನಾನು ಆಯಾಸವಿಲ್ಲದೆ ಹುಲಿಯಹಾಲನ್ನು ತಂದುಕೊಟ್ಟು ತಂದೆಯು ಸಿಂಹಾಸನವನ್ನೇರುವೆನೆಂದು ನುಡಿಯಲಾಗಿ ಸುಮತಿಯು ಕಣ್ಣೀರನ್ನು ಸುರಿಸುತ್ತಾ ಮಗನನ್ನು ಮುದ್ದಾಡಿ, ಮಗುವೇ ! ಈ ತಂತ್ರವು ನಿಮ್ಮ ಚಿಕ್ಕಮ್ಮನಿಂದ ನಡೆದಿರುವದಲ್ಲದೆ ಬೇರೆ ಇಲ್ಲ, ಹುಲಿಯ ಹಾಲನ್ನು ತರುವುದಕ್ಕೆ ಯಾರೂ ಶಕ್ತರಲ್ಲ. ಆದಕಾರಣ ನಿನಗೀ ರಾಜ್ಯಸಂಪದವೇ ಬೇಡ ನಿನ್ನ ಸೋದರಮಾವನಾದ ಕಾಂಬೋಜದೇಶಾಧಿಪನು ನಿನ್ನ ತಂದೆಯ ರಾಜ್ಯಕ್ಕಿಂತಲೂ ಹತ್ತುಪಾಲು ಅಧಿಕರಾಜ್ಯವುಳ್ಳವನಾಗಿರುವನು, ನಿನಗೆ ಯಾವುದರಲ್ಲಿಯೂ ಕೊರತೆ ಇಲ್ಲ. ಈ ಕಾರ್ಯವು ನಿನ್ನ ತಂದೆಯ ಸ್ವಬುದ್ಧಿಯಿಂದ ನಡೆದದ್ದಲ್ಲ. ಮಾಯಗಾರಿಯಾದ ಚಿಕ್ಕಹೆಂಡತಿಯ ಮುದ್ದುಗಳು ತಲೆಗೆ ವ್ಯಾಪಿಸಿ ರಾಜನು ತನ್ನ ಅಂತಃಪುರಕ್ಕೆ ಬಾರದೆಯೂ, ನಿನ್ನನಾದರೂ ಕರೆದು ಮಾತನಾಡಿಸದೆಯೂ ಇರುತ್ತಿರುವಲ್ಲಿ ನಮಗೀರಾಜ್ಯದಿಂದ ಫಲವೇನು ? ನಾವು ಕಾಂಬೋಜದೇಶಕ್ಕೆ ಹೋಗೋಣ ಬಾ ! ಎಂದು ಕರೆಯಲಾಗಿ ಆ ಶ್ರುತಕೀರ್ತಿಯು ತಾಯಿಗೆ ನಮಸ್ಕರಿಸಿ, ತಾಯಿಯೇ ! ನಾವೀಗ ರಾಜ್ಯವನ್ನು ಬಿಟ್ಟು ಹೋಗುವದುಚಿತವಲ್ಲ, ಅಲ್ಲಿ ಅಲ್ಲಿ ನನಗೆ ಸ್ವತಂತ್ರ ಶಕ್ತಿಯುಂಟಾಗಿರದು ನನ್ನ ವಿದ್ಯಾಸಾಮರ್ಥ್ಯವು ಬಾಹುಬಲಗಳೂ ನಿನಗೆ ತಿಳಿಯವು. ನಾನಾವಿಧವಾದ ಯುದ್ಧಕ್ರಮಗಳನ್ನು ದಿವ್ಯಾಸ್ತ್ರಪ್ರಯೋಗಗಳ ವಿಧಿಗಳನ್ನೂ ಕಲಿತವನಾಗಿ ಹದಿನೆಂಟುವರುಷ ವಯಸ್ಸಿನವನಾಗಿರುವೆನು, ಆದಕಾರಣ ತಂದೆಯ ರಾಜ್ಯವನ್ನು ಜಾಗ್ರತೆಯಾಗಿ ವಹಿಸುವುದಕ್ಕೆ ಯತ್ನಿಸಿರುವೆನು. ಆಲಸ್ಯಮಾಡುವುದರಿಂದ ವಿಷವಾಗಿ ಪರಿಣಮಿಸುವದು ನೀನು ಸಂತೋಷದಿಂದ ಅಪ್ಪಣೆಯನ್ನಿತ್ತು ಕಳುಹುವಳಾಗು, ಅರಣ್ಯದಲ್ಲಿನ ದುಷ್ಟಮೃಗಗಳನ್ನೆಲ್ಲಾ ಸದೆದು ಹುಲಿಯ ಹಾಲನ್ನು ತರುವೆನೆಂದು ನುಡಿಯಲಾಗಿ ತಾಯಿಯು ಏನೂ ಮಾಡಲಾರದೆ ದುಃಖಿಸುತ್ತಾ ಮಗುವೇ ! ನಿನ್ನಿಂದಲೇ ನನ್ನ ಪ್ರಾಣಗಳಿರುವುವೆಂದು ಹೇಳಿ, ಅವನನ್ನು ಮುದ್ದಾಡಿ ಐದು ರಾತ್ರಿಗಳೊಳಗಾಗಿ ಕಾರ್ಯಾನುಕೂಲವನ್ನು ಮಾಡಿಕೊಂಡು ಬರುವವನಾಗೆಂದು ಅಪ್ಪಣೆಯನ್ನು ಮಾಡಿ ಶೂರರಾದ ಇಬ್ಬರು ಬೇಟೆಗಾರರನ್ನು ಸಂಗಡ ಕಳುಹಿಸಿಕೊಟ್ಟಳು.

ಬಳಿಕ ಶೃತಕೀರ್ತಿಯು ತನ್ನ ತಂದೆತಾಯಿಗಳಿಗೆ ನಮಸ್ಕರಿಸಿ, ಅಪ್ಪಣೆಯನ್ನು ಸ್ವೀಕರಿಸಿ, ಉತ್ತರದಿಕ್ಕನ್ನು ಕುರಿತು ಹೋಗುತಲಿರುವುದನ್ನು ಕಂಡು ಪೌರಜನರು, ರಾಜನನ್ನೂ, ಸುನಂದಿಯನ್ನೂ, ದೂಷಿಸುತಲಿದ್ದರು. ತರುವಾಯ ಶೃತಕೀರ್ತಿಯು ಬೇಟೆಗಾರರೊಡನೆ ಘೋರಾರಣ್ಯವನ್ನು ಪ್ರವೇಶಮಾಡಿ ಬೇಟೆಯನ್ನಾಡುತ್ತಾ ಮೇಲೆಬಿದ್ದು ಬರುವ ವ್ಯಾಘ್ರಾದಿ ದುಷ್ಟಮೃಗಗಳನ್ನು ಸವೆಬಡಿಯುತ್ತಾ ಪೊದೆಗಳಲ್ಲಿ ಅವಿತುಕೊಂಡಿರುವ ಹುಲಿಗಳನ್ನು ಹೊರಡಿಸಿ ಕೊಲ್ಲುತ್ತಾ ಅರಣ್ಯವನ್ನೆಲ್ಲಾ ಅಲ್ಲೋಲ ಕಲ್ಲೋಲ ಮಾಡಿ ಗುಹೆಗಳನ್ನು ಹಾಯ್ದು ಕಗ್ಗತ್ತಲೆಯಲ್ಲಿ ಭಯವಿಲ್ಲದೆ ಓಡಾಡುತ್ತಾ ಕಾಲಾಗ್ನಿರುದ್ರನಂತೆ ಕ್ರೂರಮೃಗಗಳನ್ನು ಸದೆಬಡಿಯುತ್ತಾ ಬಹುದೂರವಾಗಿ ಹೋಗಿ ಹಿಂತಿರುಗಿ ನೋಡಲಾಗಿ, ತನ್ನೊಡನೆ ಬಂದಿದ್ದ ಬೇಟೆಗಾರರಲ್ಲಿ ಓರ್ವನನ್ನೂ ಕಾಣದೆ ಅವರೆಲ್ಲರೂ ವನಮೃಗಗಳ ಆಧೀನರಾದರೆಂದರಿತು, ಧೈರ್ಯಗುಂದದೆ ಮಧುರವಾದ ಹಣ್ಣುಗಳನ್ನು ತಿಂದು ನೀರನ್ನು ಕುಡಿದು ಗಿಡದ ನೆಳಲುಗಳಲ್ಲಿ ವಿಶ್ರಮಿಸಿಕೊಂಡು ದೈವವನ್ನು ಕುರಿತು, ಓ ದೈವವೇ ಹುಲಿಯ ಹಾಲು ನನಗೆ ಲಭಿಸುವ ಮಾರ್ಗವಾವುದೆಂಬದಾಗಿ ವಿಚಾರಪಡುತ್ತಾ, ಬೆಟ್ಟಗಳನ್ನು ಹತ್ತುತ್ತಾ ಹೊಳೆಗಳೊಳು ಈಜಾಡುತ್ತಾ, ಶುಕ, ಪಿಕ, ಶಾರಿಕಾದಿ ಪಕ್ಷಿಗಳ ಧ್ವನಿಗಳಿಗೆ ಆನಂದಿಸುತ್ತಾ ಸುರಹೊನ್ನೆಯ ವೃಕ್ಷಗಳ ತಡಿಯಲ್ಲಿ ಮಲಗಿಕೊಂಡು ಝಲ್ಲಿಕಾನಿನಾದಗಳನ್ನು ಕೇಳಿ ಕಿವಿಗಳನ್ನು ಮುಚ್ಚಿಕೊಳ್ಳುತ್ತಾ ಈ ರೀತಿಯಾಗಿ ವಿಪಿನ ಮಧ್ಯದೊಳೇಕಾಂಗಿಯಾಗಿ ಹೋಗುತಲಿದ್ದನು.

ಇತ್ತ ಸುನಂದಿಯ ಪುತ್ರನು ಕೆಲವು ದಿವಸಗಳ ಪರ್ಯಂತರವೂ ಒಂದು ಗ್ರಾಮದಲ್ಲಿದ್ದು ಬಳಿಕ ತಂದೆಯ ಬಳಿಗೆ ಬಂದು ನಮಸ್ಕರಿಸಿ, ತಂದೆಯೇ! ನನಗೆ ಹುಲಿಹಾಲನ್ನು ತರುವ ಸಹಾಯವಿಲ್ಲದೆ ಅರಣ್ಯಕ್ಕೆ ಹೋಗಿದ್ದವನು ವಿಮುಖನಾಗಿ ಬಂದೆನೆಂದು ಹೇಳಿದನು. ಅತ್ತ ಶೃತಕೀರ್ತಿಯ ಹಿಂದೆ ಹೋಗಿದ್ದ ಬೇಟೆಗಾರರೀರ್ವರೂ ಅವನನ್ನು ಕಾಣದೆ ಹಿಂತಿರುಗಿ ಪಟ್ಟಣಕ್ಕೆ ಬಂದು ಅವನ ತಾಯಿಯಾದ ಸುಮತಿಗೆ ನಮಸ್ಕರಿಸಿ, ತಾಯೇ! ನಿನ್ನ ಮಗನು ಅರಣ್ಯ ಮಧ್ಯದೊಳು ಎಲ್ಲಿಯೋ ತಪ್ಪಿಸಿಕೊಂಡನು, ನಾವು ಬಹಳವಾಗಿ ಹುಡುಕಿದರೂ ಸಿಕ್ಕಲಿಲ್ಲವೆಂದು ವ್ಯಸನಪಡುತ್ತಾ ಹೇಳಲು ಆ ಮಾತನ್ನು ಕೇಳಿ ರಾಜಭಾರ್ಯೆಯು ನಿಶ್ಚೇಷ್ಟಿತಳಾಗಿ ಭೂಮಿಯಮ್ಮೇಲೆ ಬಿದ್ದು ಪ್ರಲಾಪಸುತ್ತಿದ್ದಳು. ಈ ವೃತ್ತಾಂತವನ್ನು ಕೇಳಿದ ಪುರಜನರೆಲ್ಲರೂ ರೋದನಮಾಡುತ್ತಲಿದ್ದರು. ಬಳಿಕ ಸುಮತಿಯು ತನ್ನ ದುಃಖವನ್ನು ತಡೆಯಲಾರದೆ ನಡೆದ ವೃತ್ತಾಂತವನ್ನೆಲ್ಲಾ ಕುರಿತು, ಕಾಗದವನ್ನು ಬರೆದು ತನ್ನ ಅಣ್ಣನಾದ ಕಾಂಬೋಜಪತಿಗೆ ಕಳುಹಲಾಗಿ ಆತನು ಬಹಳವಾಗಿ ಸಂತಾಪಪಡುತ್ತಾ ತನ್ನ ಕುವರಿಯಾದ ಪುಷ್ಪವೇಣಿಯನ್ನು

ನೋಡಿ ಎಲೈ, ಪುತ್ರಿಯೇ ! ನಿನ್ನ ಸೋದರತ್ತೆಯ ಪುತ್ರನಾದ ಶೃತಕೀರ್ತಿಯು ಹುಲಿಯ ಹಾಲಿಗೋಸ್ಕರ ಅಡವಿಯನ್ನು ಪೊಕ್ಕು ಪುನಃ ಬರಲಿಲ್ಲವೆಂಬ ವರ್ತಮಾನ ಒಂದಿರುವದು. ಈ ಅಪಾರವಾದ ನನ್ನ ದುಃಖವನ್ನು ಯಾರೊಡನೆ ಹೇಳಿಕೊಳ್ಳಲಿ, ಅಯ್ಯೋ ! ನಿನ್ನ ಸುಂದರತ್ವಕ್ಕೆ ಸಮಾನವಾದ ವರನು ಶೃತಕೀರ್ತಿಯಲ್ಲದೆ ಲೋಕದಲ್ಲಿ ಮತ್ತ್ಯಾವನೂ ಇಲ್ಲವೆಂದೂ, ಅವನ ಧೈರ್ಯಸಾಹಸ ಸೌಂದರ್ಯಗಳನ್ನು ವರ್ಣಿಸಿ ಮಗುವೇ ! ನಿನ್ನನ್ನು ಯಾರಿಗೆ ಕೊಟ್ಟು ವಿವಾಹ ಮಾಡಲೆಂದು ಚಿಂತಿಸುತ್ತಾ ಮನುಜರಿಗೆ ಸಾಧ್ಯವಾದ ಒಂದು ಕೋಕಿಲಾ ಯಂತ್ರವನ್ನು ನಿರ್ಮಿಸಿ, ಸ್ವಯಂವರವನ್ನು ಪ್ರಸಿದ್ಧಪಡಿಸಿ ಸಕಲ ದೇಶಗಳಿಗೂ ದೂತರನ್ನು ಕಳುಹಿದನು. ಇತ್ತಲಾ ವಿಪಿನ ಮಧ್ಯದೊಳು ಶೃತಕೀರ್ತಿರಾಯನು ಕೆಲವು ದಿವಸಗಳಿಗೆ ವಿಂಧ್ಯಕಂಧರ ಪ್ರಾಂತ್ಯಗಳನ್ನು ಸೇರಿ ಆ ಸ್ಥಳದಲ್ಲಿರುವ ಒಂದಾನೊಂದು ದೇವಸ್ಥಾನವನ್ನು ಅದರ ಸುತ್ತಲೂ ಇರುವ ನಾನಾವಿಧಗಳಾದ ಫಲವೃಕ್ಷಗಳನ್ನೂ ಲತಾವಿಶೇಷಗಳನ್ನೂ ನೋಡಿ, ವಿಸ್ಮಯವನ್ನು ಹೊಂದಿ ತನಗೆ ಇಷ್ಟವಾದ ಫಲಗಳಂ ಭಕ್ಷಿಸಿ, ನೀರನ್ನು ಕುಡಿ, ಒಂದು ವೃಕ್ಷದ ಕೆಳಗೆ ಮಲಗಿ ತಂದೆತಾಯಿಗಳನ್ನು ನೆನೆದು ದುಃಖಿಸುತ್ತಾ ಇರುವಲ್ಲಿ ಆತನ ತಾಯಿಯಾದ ಸುಮತೀದೇವಿಯ ನಿಶ್ಚಲವಾದ ಮನಸ್ಸಿಗೆ ಧರ್ಮದೇವಿಯು ಮೆಚ್ಚಿ, ಆ ಶೃತಕೀರ್ತಿಗೆ ಪ್ರತ್ಯಕ್ಷವಾಗಿ ಬಂದು ಎಲೈ ರಾಜಪುತ್ರನೇ ! ಈ ದೇವಾಲಯದ ಪೂರ್ವ ಭಾಗದೊಳು ತಪೋನಿಷ್ಠನಾದೋರ್ವ ಸನ್ಯಾಸಿ ಇರುವನು, ಆತನೀವರಿವಿಗೆ ಹನ್ನೊಂದುಜನ ರಾಜಪುತ್ರನನ್ನು ದೇವಾಲಯದೊಳಿರುರುವ ಕಾಳಿಕಾದೇವಿಗೆ ಬಲಿಯನ್ನು ಕೊಟ್ಟಿರುವನು, ಇನ್ನೋರ್ವ ರಾಜಪುತ್ರನನನ್ನು ಈ ದೇವತೆಗೆ ಬಲಿಯಾಗಿ ಅರ್ಪಿಸಿದ ತರುವಾಯ ದೇವಿಯು ಪ್ರತ್ಯಕ್ಷಳಾಗಿ ಅವನು ಕೋರಿದ ವರವನ್ನೀಯುವಳು. ನೀನು ಕಪಟವ್ಯಾಜ್ಯದಿಂದ ಅವನನ್ನು ಸೇವಿಸಿ ನಂಬುಗೆಯನ್ನು ಕೊಟ್ಟು ಆ ಮಷ್ಟನನ್ನೇ ಈ ದೇವಿಗೆ ಬಲಿಯಾಗಿ ಕೊಟ್ಟರೆ ನಿನಗೆ ಈ ದೇವಿಯು ಪ್ರತ್ಯಕ್ಷಳಾಗುವಳು. ಬಳಿಕ ನಿನ್ನ ಇಷ್ಟಾರ್ಥಪೂರ್ತಿಯಾದ ವರಗಳನ್ನು ಪಡೆದು ಹುಲಿಯಹಾಲನ್ನು ತೆಗೆದುಕೊಂಡು ಹೋಗುವವನಾಗು. ನಿನ್ನ ತಾಯಿಯ ಸತ್ಯಕ್ಕೂ ನಿನ್ನ ಕಷ್ಟಗಳಿಗೂ ನಾನು ಮೆಚ್ಚಿ ಈ ರೀತಿಯಾಗಿ ಹೇಳಿರುವೆನು. ನೀನು ತಾಯಿಯನ್ನೂ ಧರ್ಮದೇವತೆಯನ್ನೂ ಮನದೊಳು ಧ್ಯಾನಿಸಿ, ತನಗೆ ಮರಣವು ತಪ್ಪಿ ದೈವ ಸಹಾಯವುಂಟಾಯಿತೆಂಬದಾಗಿಯೂ ತಿಳಿದು ಧೈರ್ಯದಿಂದ ಅಲ್ಲಿರುವ ಋಷ್ಯಾಶ್ರಮಕ್ಕೆ ಹೋಗಿ ಆತಂಗೆ ನಮಸ್ಕರಿಸಿ ಎಲೈ ಮಹಾತ್ಮನೇ ಹುಲಿಯಹಾಲಿನ ನಿಮಿತ್ತದಿಂದ ನಾನೀ ಅರಣ್ಯವನ್ನು ಕುರಿತು ಬಂದಿರುವೆನು, ಅದು ಯಾವರೀತಿ ನನಗೆ ಲಭಿಸುವುದೋ ಆ ಮಾರ್ಗವನ್ನೆನಗೆ ತಿಳುಹಬೇಕೆಂದು ಪ್ರಾರ್ಥಿಸಲು, ಆ ಕಪಟ ಮುನಿಯು ತನ್ನ ಮನದೊಳು

ಆಹಾ ! ನನ್ನ ಇಷ್ಟದೇವತೆಯು ನನಗೆ ಅನುಕೂಲವನ್ನುಂಟುಮಾಡುವದ
ಕ್ಕಾಗಿಯೆ ಈ ರಾಜನಂದನನನ್ನು ಇಲ್ಲಿಗೆ ಬರಮಾಡಿತೆಂದೂ ಈ ದೇವತೆಯನ್ನು
ಮೆಚ್ಚಿಸಿ ನನಗೆ ಬೇಕಾದ ವರಗಳನ್ನು ಪಡೆಯುವೆನೆಂತಲೂ ಯೋಚಿಸಿ, ಆತನ
ನ್ನಾದರಿಸಿ, ಎಲೈ ರಾಜಾತ್ಮಜನೇ ! ನಿನ್ನ ಕೋರಿಕೆಗಳನ್ನೆಲ್ಲ ನಾನು ನೆರವೇರಿ
ಸಿಕೊಡುವೆನು ಕೆಲವು ದಿವಸಗಳು ಈ ಆಶ್ರಮದಲ್ಲಿಯೇ ನೀನು ವಾಸಮಾಡುತ್ತಾ
ವಿವಿಧಧರ್ಮಂಗಳನ್ನರಿಯುತ್ತ ಇರುವಂಥವನಾಗೆಂದು ಹೇಳಲು ಆ ಮಾತಿಗೆ ರಾಜ
ಪುತ್ರನು ಸಮ್ಮತಿಸಿ, ಆ ಋಷಿಗೆ ಶುಶ್ರೂಷೆಯನ್ನು ಮಾಡುತ್ತಾ ಧರ್ಮಾಧರ್ಮ
ಗಳನ್ನು ತಿಳಿಯುತ್ತಾ ತನ್ನ ಮನಸ್ಸಿನಲ್ಲಿ ದೈವವೆ ! ಸಮಾಧಿನಿಷ್ಠಗರಿಷ್ಠನಾದ
ಈ ಮುನೀಂದ್ರನನನ್ನು ದೇವತೆಗೆ ಬಲಿಕೊಟ್ಟು ಅದರಿಂದುಂಟಾದ ಪಾತಕವ
ನ್ನೆಂದಿಗೆ ಕಳೆದುಕೊಂಡೇನು, ಧರ್ಮದೇವಿಯ ವಚನಗಳನ್ನೆಂತು ತಪ್ಪಿ ನಡೆಯಲಿ !
ಒಳ್ಳೆದು ಈ ಆದಿಶಕ್ತಿಯ ಸಹಾಯವೊಂದಿದ್ದರೆ ಸಮಸ್ತ ಪಾತಕಗಳೂ ನಾಶ
ವಾಗುವುದೆಂದು ನಿಶ್ಚಯಿಸಿ, ಕಾಲವನ್ನು ನಿರೀಕ್ಷಿಸುತಲಿದ್ದನು. ಒಂದಾನೊಂದು
ದಿವಸ ಸೂರ್ಯೋದಯ ಸಮಯದಲ್ಲಿ ಆ ಋಷಿಯು ರಾಜಪುತ್ರನನ್ನು ನೋಡಿ,
ಎಲೈ ರಾಜಪುತ್ರನೇ ! ಈ ದಿವಸ ಸಂಪೂರ್ಣ ಪೂರ್ಣಿಮೆಯು ಈ ಆದಿಶಕ್ತಿ
ಯನ್ನೀದಿವಸ ಪೂಜಿಸಬೇಕೆಂದು ಅವನನ್ನು ಗುಡಿಯಬಳಿಗೆ ಕರೆದುಕೊಂಡು
ಹೋಗಿ, ಬಾಗಿಲುಗಳನ್ನು ತೆಗೆದು ಇಬ್ಬರೂ ಸ್ನಾನಗಳನ್ನು ಮಾಡಿ ಗುಡಿಯೊಳ
ಗೆಲ್ಲಾ ಶುದ್ಧಿಮಾಡಿ ನಾನಾವಿಧ ಪುಷ್ಪಗಳನ್ನು ಬಾಳೆಯ ಎಲೆಯೊಳಿಟ್ಟು ಧೂಪ
ದೀಪನೈವೇದ್ಯಗಳನ್ನೂ ದೇವತೆಗೆ ಸಮರ್ಪಿಸುತ್ತಾ ಸನ್ಯಾಸಿಯು ರಾಜಕುಮಾರ
ನನನ್ನು ಕುರಿತು, ರಾಜಪುತ್ರನೇ ! ನಿನ್ನ ಕೋರಿಕೆಗಳು ನೆರವೇರುವಂತೆ ಮನ
ದೊಳು ಧ್ಯಾನಿಸಿ, ಈ ದೇವಿಗೆ ಸಾಷ್ಟಾಂಗಪ್ರಣಾಮವನ್ನು ಮಾಡೆನಲು ಆ
ಮಾತನ್ನು ಕೇಳಿ ಧೀರನಾದ ರಾಜತನಯನು ಸಮೀಪದೊಳಿರುವ ಕತ್ತಿಯನ್ನು
ಕಂಡು ಧರ್ಮದೇವಿಯ ಮಾತುಗಳು ನಿಜವೆಂದು ನಂಬಿ, ಎಲೈ ಮುನೀಂದ್ರನೇ !
ನೀವು ಹೇಳಿದ ರೀತಿಯು ನನಗೆ ತಿಳಿಯದು, ನೀವು ಮುಂಚಿತವಾಗಿ ನಮಸ್ಕಾರ
ಮಾಡಿ ತೋರಿಸಿದರೆ ನಾನು ನಂತರ ಅದರಂತೆ ನಡೆಯುವೆನೆನಲಾಗಿ ತನಗೆ
ಸಂಭವಿಸುವ ವಿಪತ್ತನ್ನು ತಿಳಿಯದ ಆ ಅಧಮಋಷಿಯು ನೋಡಯ್ಯಾ ರಾಜಪು
ತ್ರನೇ ! ಎಂದು ಸಾಷ್ಟಾಂಗ ದಂಡವನ್ನಿಡಲು ಅಷ್ಟರಲ್ಲೇ ರಾಜತನಯನು ಅಲ್ಲಿದ್ದ
ಪಟ್ಟದ ಕತ್ತಿಯಿಂದಾತನ ತಲೆಯನ್ನು ಕಡಹಲಾಕ್ಷಣದಲ್ಲೇ ಆ ದೇವಿಯು
ಫಲ್ಲನೆ ನಗುತ್ತಾ ಸ್ತ್ರೀರೂಪದಿಂದ ಪ್ರಸನ್ನಳಾಗಿ ಎಲೈ ರಾಜಪುತ್ರನೇ ! ನೀನು
ಬಹಳವಾಗಿ ಧೈರ್ಯವುಳ್ಳವನು, ಈ ಮುನೀಂದ್ರನನ್ನು ನನಗೆ ಬಲಿಯಾಗಿ
ಕೊಟ್ಟದ್ದರಿಂದ ನಾನು ಪರಮ ಸಂತೋಷವನ್ನೈದಿದೆನು, ಈಗ ನೀನು ಕೇಳುವ
ವರಗಳನ್ನೆಲ್ಲ ಕೊಡುವೆನು ಪ್ರಾರ್ಥಿಸೆನಲು ರಾಜತನಯನು ಸಂತೋಷಭರಿತ

ನಾಗಿ, ಎಲೈ ತಾಯಿಯೇ! ನಾನು ಯಾವ ಕಾಲದಲ್ಲಿ ಸ್ಮರಿಸುವೆನೋ ಆಗ ನನಗೆ ಪ್ರಸನ್ನಳಾಗಿ ಇಷ್ಟಾಪೂರ್ತಿಯನ್ನು ಮಾಡಬೇಕೆಂದು ಪ್ರಾರ್ಥಿಸಿ, ದೇವಿಯೇ ಈ ಋಷಿಯು ಇಂಥಾ ಪಾಪಕರ್ಮಗಳನ್ನು ಏನು ನಿಮಿತ್ತದಿಂದ ಮಾಡಿದನೊ ಆ ಸಂಗತಿಯನ್ನು ನನಗೆ ಹೇಳಬೇಕೆನಲು ಕಾಳಿಕಾದೇವಿಯು ಹೇಳ ತೊಡಗಿದಳು.

ಕೇಳು ರಾಜತನಯನೇ ಈ ಪ್ರದೇಶದಲ್ಲಿ ನನ್ನನ್ನು ಸ್ಥಾಪಿಸಿದ ಶಿಲ್ಪಿಯು ಹನ್ನೆರಡು ರಾಜಪುತ್ರರನ್ನಾಗಲೀ ಅಥವಾ ಸಮಾಧಿನಿಷ್ಟನಾದ ಸನ್ಯಾಸಿಯೊಬ್ಬನನ್ನಾಗಲೀ ಈ ದೇವತೆಗೆ ಯಾರು ಬಲಿಯಾಗಿ ಕೊಟ್ಟರೂ ಅಂಥವರಿಗೆ ಈ ಶಕ್ತಿಯು ಕೋರಿದಕೂಡಲೆ ಪ್ರತ್ಯಕ್ಷಳಾಗಿ ವರಗಳನ್ನೀಯುವಳೆಂದು ಶಾಸನವನ್ನು ಬರೆದಿರುವನು ಈ ಕಪಟ ಸನ್ಯಾಸಿಯು ಆ ಶಿಲಾಶಾಸನವನ್ನು ಮರೆಮಾಡಿ, ಈ ಗುಡಿಗೆ ಬೀಗವನ್ನು ಹಾಕಿ ಬೀಗದ ಕೈಯನ್ನು ತನ್ನ ಸಮೀಪದೊಳಿರಿಸಿಕೊಂಡು ಭೂಸಂಚಾರಾರ್ಥವಾಗಿ ಈ ವಿಪಿನಮಧ್ಯದೊಳು ಸಿಕ್ಕುವ ರಾಜಪುತ್ರರನ್ನು ವಂಚಿಸಿ, ಕರೆದುತಂದು ನನಗೆ ಬಲಿಯಾಗಿ ಅರ್ಪಿಸುತ್ತಾ, ಇದೇ ರೀತಿಯಲ್ಲಿ ಹನ್ನೊಂದುಜನ ರಾಜಪುತ್ರರನ್ನೆನಗೆ ಸಮರ್ಪಿಸಿ, ಹನ್ನೆರಡನೇ ಬಲಿಯನ್ನು ಕೊಡಲು ನಿರೀಕ್ಷಿಸುತಲಿದ್ದನು.

ಎಲೈ ರಾಜತನಯನೇ! ನೀನು ಸನ್ಯಾಸಿಯನ್ನು ನನಗೆ ಬಲಿಯಾಗಿ ಅರ್ಪಿಸಿದಕಾರಣ ನಿನಗೆ ಪ್ರತ್ಯಕ್ಷಳಾದೆನು. ಈ ಗುಡಿಯ ಬಾಗಿಲುಗಳನ್ನು ತೆಗೆದು ಒಳಹೊಕ್ಕು ಪಕ್ಕದಲ್ಲಿರುವ ಶಾಸನವನ್ನು ರಾಜಪುತ್ರರ ವಸ್ತ್ರಾಭರಣಗಳನ್ನು ನೋಡಿ ಬಾ ಎನಲು, ಆತನು ಒಳಹೊಕ್ಕು ಅವುಗಳನ್ನೆಲ್ಲವನ್ನು ನೋಡಿ ಆಶ್ಚರ್ಯವುಳ್ಳವನಾಗಿ ಬಳಿಕ ಸತ್ತುಬಿದ್ದಿರುವ ಋಷಿಯನ್ನು ಸಮಾಧಿಮಾಡಿ ಆದಿ ಶಕ್ತಿಯನ್ನು ಕುರಿತು ತಾಯೇ! ಬ್ರಹ್ಮಹತ್ಯವೇ ಮೊದಲಾದ ಸರ್ವ ಪಾಪಗಳಿಗೂ ನಿವಾರಣವಾದ ಅಪವರ್ಗಮಾರ್ಗವನ್ನೆನಗೆ ಬೋಧಿಸಿ, ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಲಾಗಿ ಆ ದೇವಿಯು ನಕ್ಕು ಮಗುವೇ! ಅಗಾಧವಾದ ಪ್ರಶ್ನೆಯನ್ನು ಮಾಡಿದವನಾದೆ, ಲೋಕವಲ್ಲಿ ಸರ್ವ ಮತಗಳಿಗೂ ಸಮ್ಮತವಾಗಿಯೂ, ಸರ್ವ ಪಾಪಹರವಾಗಿಯೂ ಇರುವ ಸಚ್ಚಿದಾನಂದಭಾವವೆಂಬ ರಹಸ್ಯವನ್ನು ಗ್ರಹಿಸುವವನಾಗು, ಇದರಿಂದ ನಿನ್ನ ದುರಿತಗಳೆಲ್ಲಾ ತೊಲಗಿ ಮೋಕ್ಷಪದವಿಯನ್ನೀಯುವೆನೆಂದು ಅಷ್ಟಾಕ್ಷರೀ ಮಂತ್ರವನ್ನು ಉಪದೇಶಿಸ ತೊಡಗಿದಳು.



ಶ್ರುತಕೀರ್ತಿಮಹಾರಾಯು.



ಕಾಳಿಕಾದೇವಿ.

## ಕಾಳಿಕಾದೇವಿಯಿಂದ ಶ್ರುತಕೀರ್ತಿರಾಯನಿಗೆ ಹೇಳಲ್ಪಟ್ಟ ಸಚ್ಚಿದಾನಂದ ಭಾವವು.

ಕೇಳೈ ರಾಜತನಯನೇ! ಸತ್ತು ಚಿತ್ತು ಆನಂದ ಇವು ಸೇರಿ ಸಚ್ಚಿದಾನಂದ ವಾಯಿತು ಆತ್ಮನಿಗೆ ಸದ್ರೂಪವೆಂತಲೂ, ಚಿದ್ರೂಪವೆಂಬದಾಗಿಯೂ, ಆನಂದರೂಪವೆಂತಲೂ, ಮೂರುರೂಪಗಳು ಉಂಟಾಗಿರುವುವು. ಇವುಗಳಲ್ಲಿ ಸದ್ರೂಪವೆಂಬುವುದು ತ್ವಂಪದವೆಂತಲೂ, ನಾದವೆಂತಲೂ, ಆಕಾರವೆಂತಲು, ಸ್ಥೂಲವೆಂತಲು ಹೇಳಲ್ಪಡುವುದು. ಚಿದ್ರೂಪವು-ತತ್ಪದವೆಂತಲು, ಬಿಂಬವೆಂಬದಾಗಿಯು, ಉಕಾರವೆಂತಲೂ, ಸೂಕ್ಷ್ಮವೆಂತಲೂ, ಹೇಳಲ್ಪಡುವುದು. ಆನಂದರೂಪವು—ಅಸಿಪದವೆಂತಲೂ, ಕಳೆಯೆಂತಲೂ, ಮಕಾರವೆಂಬದಾಗಿಯೂ ಕಾರಣವೆಂತಲೂ ಹೇಳಲ್ಪಡುವುದು. ಇಪ್ಪತ್ತೈದು ತತ್ವಗಳಿಂದಿರುವ ಸ್ಥೂಲಶರೀರವು, ಸ್ಥೂಲಪುರುಷನನ್ನು ವಿಶ್ವನೆಂದು ಹೇಳುತ್ತಾರೆ. ಪ್ರಾಣೇಂದ್ರಿಯುಗಳು, ಜ್ಞಾನೇಂದ್ರಿಯುಗಳು. ಪಂಚತನ್ಮಾತ್ರೆಗಳು ಈ ಹದಿನೈದರೊಂದಿಗೆ ಮನಸ್ಸು, ಬುದ್ಧಿಯು, ಇವೆರಡೂ ಸೇರಿದರೆ ಸೂಕ್ಷ್ಮಶರೀರವು, ಅಂಥಾ ಸೂಕ್ಷ್ಮಶರೀರನು ತೈಜಸನೆಂದು ಹೇಳಲ್ಪಡುವನು. ಚಿತ್ತವು ಜ್ಞಾತೃವಿನೊಂದಿಗೆ ಕೂಡಿದರೆ ಕಾರಣ ಶರೀರವೆಂದು ತಿಳಿಯಬೇಕು. ಆ ಕಾರಣ ಪುರುಷನೇ ಪ್ರಾಜ್ಞನು, ಆತ್ಮರಾಮನು ಬ್ರಹ್ಮನಾದಂಥಾ ಹಂಸವು. ಲಿಂಗಶರೀರದಗತಿಗೆ ಆಧಾರಭೂತವಾಗಿ ಅಂತರ್ಬಹಿರ್ವ್ಯಾಪಕತ್ವಗಳುಳ್ಳ ಪಂಚಾಗ್ನಿ ಮಧ್ಯದಲ್ಲಿ ಸುಡದೆಯೂ ಏಳು ಸಮುದ್ರಗಳೊಳಗೆ ಮುಳುಗದೆಯೂ, ಜಾಗರಣ, ಸ್ವಪ್ನ, ಸುಷುಪ್ತಿ ಎಂಬ ಅವಸ್ಥಾತ್ರಯಗಳಿಲ್ಲದೆಯೂ, ಸೂತ್ರಾಧಾರ

ವಾಗಿ ಷಡಾಧಾರಗಳನ್ನು ಆವರಿಸಿಕೊಂಡು ಹಗಲು ರಾತ್ರಿಗಳಿಂದಿರುವ ಒಂದು ದಿವಸದೊಳು ಇಪ್ಪತ್ತೊಂದುಸಾವಿರದ ಆರುನೂರು ಪ್ರಣವಗಳನ್ನು ಎಡೆಬಿಡದೆ ಹೇಳುತಲಿರುವುದು.

ಗುದಸ್ಥಾನದೊಳು ನಾಲ್ಕು ದಳಗಳಲ್ಲಿ ವ, ಶ, ಷ, ಸ, ಎಂಬೀ ನಾಲ್ಕು ಅಕ್ಷರಗಳುಳ್ಳದ್ದಾಗಿ ಓಂ ಎಂಬ ಬೀಜಾಕ್ಷರದಿಂದಿರುವ ಆಧಾರ ಕಮಲದಲ್ಲಿ ಈಶ್ವರ ಪುತ್ರನಾದ ವಿನಾಯಕನಿಗೆ ಆರುನೂರು ಪ್ರಣವಗಳು.

ಲಿಂಗಸ್ಥಾನದಲ್ಲಿ ಆರು ದಳಗಳೊಳಗೆ, ಬ, ಭ, ಮ, ಯ, ರ, ಲ, ಎಂಬ ಈ ಆರು ಅಕ್ಷರಗಳುಂಟಾಗಿ ನ, ಎಂಬ ಬೀಜಾಕ್ಷರವಾಗಿರುವ ಸ್ವಾಧಿಷ್ಠಾನ ಕಮಲದಲ್ಲಿ ಪ್ರಜಾಪತಿಗೆ ಆರುಸಾವಿರ ಪ್ರಣವಗಳು.

ನಾಭಿಯ ಸ್ಥಾನದೊಳಗೆ ದಶ ದಳಗಳಲ್ಲಿ ಡ, ಢ, ಣ, ತ, ಥ, ದ, ಧ, ನ, ಪ, ಫ, ಈ ಹತ್ತುವರ್ಣಗಳುಂಟಾಗಿ ಮ, ಎಂಬ ಬೀಜಾಕ್ಷರವುಳ್ಳ ಮಣಿಪೂರಕ ಕಮಲದೊಳಗೆ ವಿಷ್ಣುದೇವರಿಗೆ ಆರುಸಾವಿರ ಪ್ರಣವಗಳು.

ಹೃದಯಸ್ಥಾನದೊಳು ಹನ್ನೆರಡು ದಳಗಳೊಳಗೆ ಕ, ಖ, ಗ, ಘ, ಙ, ಚ, ಛ, ಜ, ಝ, ಞ, ಟ, ಠ, ಎಂಬ ಹನ್ನೆರಡು ವರ್ಣಗಳುಳ್ಳದ್ದಾಗಿ ಶಿ, ಎಂಬ ಬೀಜಾಕ್ಷರವುಳ್ಳ ಅನಾಹತವೆಂಬ ಕಮಲದೊಳಗೆ ಈಶ್ವರನಿಗೆ ಆರುಸಾವಿರ ಪ್ರಣವಗಳು.

ಕಂಠಸ್ಥಾನದೊಳಗೆ ಹದಿನಾರು ದಳಗಳಲ್ಲಿ ಅ, ಆ, ಇ, ಈ, ಉ, ಊ, ಋ, ೠ, ಎ, ಏ, ಐ, ಒ, ಓ, ಔ, ಅಂ, ಅಃ, ಎಂಬೀ ಹದಿನಾರು ವರ್ಣಗಳೊಂದಿಗೆ ವಾ, ಎನ್ನುವ ಬೀಜಾಕ್ಷರವುಳ್ಳ ವಿಶುದ್ಧವಾದ ಕಮಲದೊಳಗೆ ಆತ್ಮನಿಗೆ ಒಂದು ಸಾವಿರ ಪ್ರಣವಗಳು.

ತ್ರಿಕೂಟವೆಂಬ ಸ್ಥಾನದಲ್ಲಿ, ದ್ವಿದಳಗಳೊಳಗೆ, ಹಂ, ಕ್ಷಂ, ಎಂಬೀ ಎರಡು ವರ್ಣಗಳುಳ್ಳದ್ದಾಗಿ ಯ, ಎಂಬುವ ಬೀಜಾಕ್ಷರವುಳ್ಳ ಆಗ್ನೇಯ ಕಮಲದಲ್ಲಿ ಜೀವನಿಗೆ ಒಂದುಸಾವಿರ ಪ್ರಣವಗಳು.

ಫಾಲಸ್ಥಾನದಲ್ಲಿ ಒಂದುಸಾವಿರ ದಳಗಳುಂಟಾಗಿ ರಾಂ ಎಂಬ ಬೀಜಾಕ್ಷರವುಳ್ಳ ಸಾವಿರಾರು ಕಮಲಗಳೊಳಗೆ ಸದ್ಗುರುವೆಂಬುವ ಸ್ವಾಮಿಗೆ ಒಂದು ಸಾವಿರ ಪ್ರಣವಳು.

ಈ ರೀತಿಯಾಗಿ ಪ್ರಣವಗಳನ್ನು ಭಾಗಿಸಿ, ಅಜಪಗಾಯಿತ್ರಿ ಎಂದೆನಿಸಿಕೊಂಡು, ಇಡಾಪಿಂಗಳಗಳೆಂಬ ನಾಡಿಗಳೊಳು ಆ ಉಭಯ ಪ್ರಣವಾಕ್ಷರಗಳೂ ಉಚ್ಚರಿಸಲಿತ್ತಿರುವವು ಉಳಿದ ಥಂ, ಎನ್ನುವ ಬೀಜಾಕ್ಷರವು ಕಿವಿಗಳ ರಂಧ್ರಗಳೊಳಿರುವದು ಅವಕ್ಕೆ ಆದಿಶೇಷನು ಅಧಿದೇವತೆಯು. ಈಗ ಹೇಳಲ್ಪಟ್ಟ ಅಷ್ಟಾಕ್ಷರೀ ಮಂತ್ರವನ್ನು ಜಪಿಸುತ್ತಾ ಹಂಸೆಯನ್ನು ಪ್ರಣಾಯಾಮದಿಂದ

ವಿಹಾರವೆಂಬ ಉರಿಯನನ್ನು ಹೊಂದಿಸುತ್ತಾ, ರೇಚಿಸಿ, ಸರ್ಪಕ್ಕೆ ಶಾಖವನ್ನುಂಟು ಮಾಡುತ್ತಾ ರಾಂ, ಎನ್ನುವ ಬೀಜಾಕ್ಷರದೊಳಗೆ ದೃಕ್ಕನ್ನು ನಿಲ್ಲಿಸಿ, ಹತ್ತು ವಿಧವಾದ ನಾದಗಳನ್ನು ಕೇಳಲು ಜ್ಞಾನಾಗ್ನಿಯು ಜಾಜ್ವಲ್ಯಮಾನವಾಗಿ ನೀನು ಸಂಚಿಸಿದ ಪಾಪಕರ್ಮಗಳೆಂಬ ಸಮಿತ್ತುಗಳನ್ನು ಭಸ್ಮವನ್ನಾಗಿ ಮಾಡುವುದೆಂದು ಸಕಲ ರಹಸ್ಯಗಳನ್ನು ತಿಳುಹಿ ಆ ರಾಜಪುತ್ರನನ್ನು ನಮಾಧಿನಿಷ್ಠನನ್ನಾಗಿ ಮಾಡಿದಳೆಂದು ಶ್ರೀಕೃಷ್ಣನುಸುರಲಾಗಿ ಪಾಂಡುನಂದನನು ಆ ರಹಸ್ಯಗಳನೆಲ್ಲವನ್ನು ತಿಳಿದುಕೊಂಡು, ಎಲೈ ಮಹಾತ್ಮನೇ ! ಈ ಸಚ್ಚಿದಾನಂದ ಮಾರ್ಗವು ಕೇವಲ ಶ್ಲಾಘನೀಯುಮಾಗಿರ್ಪುದು, ಪ್ರಜ್ಞಾನ ಚೈತನ್ಯಗಳೇ ಬಹ್ಮನೆಂಬವಾಗಿ ಹೇಳುತಲಿರುವರು. ಈ ಭೇದರಹಸ್ಯಗಳನ್ನೆನಗೆ ಬೋಧಿಸಬೇಕೆನಲಾಗಿ ಶೃತಿಗಳು ಘೋಷಮಾಡುತಲಿದ್ದಾಗ್ಯೂ ಅನೇಕರು, ಆತ್ಮನನ್ನು ಬ್ರಹ್ಮನಲ್ಲವೆಂದಾಗಿ ಭಗವಂತನು, ಕೇಳಯ್ಯಾ ಪಾಂಡುಪುತ್ರನೇ ! ಗಗನವು ನಿರ್ಗುಣಿಯೊಡನೆಯೂ, ಸಾಕಾರನೂ, ನಿರಾಕಾರನೊಂದಿಗೂ, ಯೌವನವತಿಯಾದ ಸ್ತ್ರೀಯು ನಪುಂಸಕಪುರುಷರೊಡನೆಯೂ ಯಾವ ಪ್ರಕಾರ ಸೇರದಿರುವದೋ ಹಾಗೆ ನಿರ್ಮಿತಿಯಾಗಿಯೇ ಆತ್ಮಬ್ರಹ್ಮರಿಗೆ ಒಂದು ಕಾಲಕ್ಕೂ ಭೇದವಾಹಿತ್ಯ ಸಂಭವಿಸದಾರದೆಂದು ಬೋಧಿಸಲಾಗಿ ಅರ್ಜುನನು ಮನೋಸಂಶಯವನ್ನು ಹೋಗಲಾಡಿಸಿಕೊಂಡು, ಎಲೈ ಮಹಾನುಭಾವನೇ ! ಕಾಳಿಕಾದೇವಿಯಿಂದ ಉಪದೇಶಿಸಲ್ಪಟ್ಟ ರಾಜತನಯನ ಮುಂದಣ ವೃತ್ತಾಂತವನ್ನು ಅರುಹಬೇಕೆಂದು ಕೇಳಲಾಗಿ ಶ್ರೀಕೃಷ್ಣನು ಹೇಳಲಾರಂಭಿಸಿದನು.

ಲಾಲಿಸೈ ಇಂದ್ರನಂದನನೇ ! ಶೃತಕೀರ್ತಿರಾಯನು ಕೇವಲ ವೈರಾಗ್ಯದಿಂದ ಅದನ್ನಭ್ಯಸಿಸುತ್ತಾ, ನಾದಬ್ರಹ್ಮವನ್ನು ಹೊರನಿಂದ, ಆನಂದವನ್ನೈದುತ್ತಾ, ಫಲಗಳನ್ನು ಭಕ್ಷಿಸಿ, ಜಲಪಾನವನ್ನು ಮಾಡುತ್ತಾ ಈ ರೀತಿಯಾಗಿ ಆರುತಿಂಗಳು ಕಳೆದ ತರುವಾಯು ಒಂದಾನೊಂದು ದಿವಸ ಆ ಮಾರ್ಗವಾಗಿ ಹೋಗುತಲಿರುವ ಕೆಲವರು ಪಥಿಕರನ್ನು ಕಂಡು ನೀವು ಎಲ್ಲಿಂದ ಬಂದಿರಿ ಎಲ್ಲಿಗೆ ಏನುಕಾರಣದಿಂದ ಹೋಗುತಲಿರುವಿರೆಂದು ಬೆಸಗೊಳಲಾಗಿ ಆ ಮಾರ್ಗಸ್ಥರು ಇವನನ್ನು ನೋಡಿ, ಮುನಿಪುತ್ರನೆಂದು ಭಾವಿಸಿ ಸ್ವಾಮಿ ಮುನಿಪ್ರೋತ್ತಮನೇ ! ನಾವು ಕಾಂಬೋಜದೇಶಾಧಿಪನ ದೂತರು. ನಮ್ಮೊಡೆಯನು ತನ್ನ ಕುವರಿಯಾದ ಪುಷ್ಪವೇಣಿಯನ್ನು ತನ್ನ ತಂಗಿಯು ಪುತ್ರನಾದ ಶ್ರುತಕೀರ್ತಿ ಎನ್ನುವ ವರನಿಗೆ ಕೊಟ್ಟು ಮದುವೆಯನ್ನು ಮಾಡಲೆಳಸಿದ್ದನು. ಆ ಸೋದರಳಿಯನು ಹುಲಿಯ ಹಾಲನ್ನು ತರುವ ನಿಮಿತ್ತವಾಗಿ ಅರಣ್ಯದ ಪಾಲಾದನೆಂದರಿತು ದುಃಖಿಸಡುತ್ತಾ ನಮ್ಮ ರಾಜೇಂದ್ರನು ಅಸಾಧ್ಯವಾದ ಒಂದಾನೊಂದು ಯಂತ್ರವನ್ನು ನಿರ್ಮಿಸಿ, ಒಂದೇ ಬಾಣದಿಂದ ಅದನ್ನು ಹೊಡೆದವರಿಗೆ ತನ್ನ ಪುತ್ರಿಯನ್ನು ಕೊಟ್ಟು ವಿವಾಹವನ್ನೆ

ಸಗುವೆನೆಂದು ಸ್ವಯಂವರ ಮಹೋತ್ಸವವನ್ನು ನಿರ್ಮಿಸಿರುವನು, ಆದಕಾರಣ ಆ ಸಂಗತಿಯನ್ನು ನಾವೀ ಪ್ರಾಂತ್ಯದ ಅರಸುಗಳಿಗೆ ಬಿನ್ನಹವನ್ನು ಮಾಡಲು ಹೋಗುವೆವೆಂದು ಪ್ರತ್ಯುತ್ತರವನ್ನಿತ್ತು ಹೊರಟುಹೋದರು.

ತರುವಾಯ ಶ್ರುತಕೀರ್ತಿಯು ಆ ದೂತವಾಕ್ಯಗಳನ್ನು ಕಾಳಿಕಾದೇವಿಗೆ ತಿಳಿಸಿ, ಎಲೈ ತಾಯೇ ! ಆ ಕನ್ಯೆಯು ರೂಪು ರೇಖಾ ಲಾವಣ್ಯಗಳಾವ ಪ್ರಕಾರವಾಗಿರುವುವೋ ಅದನ್ನೆನಗೆ ಪೇಳಬೇಕೆನಲಾಗಿ ಕಾಳಿಕಾದೇವಿಯು ಎಲೈ ಮಗುವೇ ! ಆ ಲತಾಂಗಿಯು ಪದ್ಮಿನಿಜಾತಿ ಸ್ತ್ರೀಯು, ಅತಿ ಸುಂದರಳಾಗಿಯೂ ಸುಗುಣಗಳುಳ್ಳವಳಾಗಿಯೂ ಇರುವಳು. ತನ್ನ ಮನದೊಳಗೆ ನಿನ್ನನ್ನೇ ವರಿಸಬೇಕೆಂದು ಇಷ್ಟದೇವತೆಯನ್ನು ಕುರಿತು ಪೂಜಿಸುತಲಿರುವಳು, ನಿನ್ನ ವಿನಾ ಮತ್ತಾವ ಪುರುಷನೂ ಆ ಯಂತ್ರವನ್ನು ಮೊಳೆಯಲಾರನಾದಕಾರಣ ನೀನು ಅಲ್ಲಿಗೆ ಹೋಗೆನಲು ಆತನು ತಾಯಿಯೇ ! ನಾನೀ ರೂಪವುಳ್ಳವನಾಗಿ ಅಲ್ಲಿಗೆ ಹೋಗಲಾರೆನು, ಆತುರವನ್ನು ಹೊಂದಿ ಸ್ವಯಂವರವನ್ನು ಪ್ರಸಿದ್ಧಪಡಿಸಿದ ಆ ರಾಜನಿಗೆ ಮನೋವ್ಯಥೆಯುಂಟಾಗುವ ಹಾಗೆ ವಿಕಾರರೂಪಿನಿಂದ ಹೋಗಿ ಆ ಅಂಗನಾಮಣಿಯ ಮನಸ್ಸನ್ನು ಪರೀಕ್ಷಿಸುವೆನೆಂದು ಹೇಳಿ ತನ್ನ ಮನಬಂದಂತೆ ಕೇವಲ ಮುದುಕನಾಗಿಯೂ, ನರೆತಿರುವ ಕೂದಲುಗಳುಳ್ಳವನಾಗಿಯೂ ವಕ್ರವಾದ ದಂತಪಂಗ್ತಿಗಳನ್ನು ಹೊಂದಿದವನಾಗಿಯೂ ಇರುವ ವಾಮನರೂಪವನ್ನು ಧರಿಸಿ, ಕಿರೀಟ ಭುಜಕೀರ್ತಿ ಮುಂತಾದ ಆಭರಣಗಳನ್ನು ಧರಿಸಿಕೊಂಡು ಆಯುಧಗಳನ್ನು ತೆಗೆದುಕೊಂಡು ಕುದುರೆಯನ್ನೇರಿ ಹೋಗುತ್ತಾ ಕೆಲವು ದಿನಗಳಿಗೆ ಕಾಂಭೋಜದೇಶವನ್ನು ಸೇರಿ, ಅಲ್ಲಿ ನಡೆಯುತಲಿರುವ ನಾನಾವಿಧಗಳಾದ ವಾದ್ಯಗಳನ್ನು ಕೇಳುತ್ತಾ, ಅಲ್ಲಿ ಸೇರಿರುವ ರಾಜಾಧಿರಾಜರ ಮಂಡಪಿಯಲ್ಲಿರುವ ರಾಜೋತ್ತಮನಾದ ಕಾಂಭೋಜಾಧಿಪನನ್ನು ಕುರಿತು, ರಾಜಶ್ರೇಷ್ಠನೇ ! ವಿಂಧ್ಯಕಂದರ ಪ್ರಾಂತ್ಯಗಳಲ್ಲಿ ವಿಹಾರವಮಾಡುತಲಿರುವ ಅರಣ್ಯರಾಜನಾದ ನಾನು ನಿಮ್ಮ ಪುತ್ರಿಯ ಸ್ವಯಂವರ ಮಹೋತ್ಸವವನ್ನು ಕೇಳಿ ಕೋಕಿಲಯಂತ್ರವನ್ನು ಭೇದಿಸುವದಕ್ಕಾಗಿ ಇಲ್ಲಿಗೆ ಬಂದಿರುವೆನು, ನೀವು ವಾಗ್ದಾನವನ್ನು ಮಾಡಿದಂತೆ ತಪ್ಪದೆ ನಿಮ್ಮ ಪುತ್ರಿಯನ್ನೆನಗೆ ಕೊಟ್ಟು ವಿವಾಹವನ್ನೆಸಗಬೇಕೆನಲಾಮಾತಿಗೆ ರಾಜೇಂದ್ರನೂ ಮತ್ತು ಅಲ್ಲಿರುವ ಸಭೆಯವರೂ ಸಹ ಆತನ ವಿಕಾರ ರೂಪವನ್ನು ನೋಡಿ ಘಕಘಕನೆ ನಕ್ಕರು.

ಅದಕ್ಕಾ ಶ್ರುತಕೀರ್ತಿಯು ಎಲೈ ಮನುಜಾಧಿಪನೇ ! ಮತ್ತು ಸಭಿಕರೇ ! ನನ್ನಲ್ಲಿರುವ ಅಸ್ತ್ರಶಸ್ತ್ರಂಗಳ ಪ್ರಭಾವಗಳನ್ನರಿಯದವರಾಗಿಯೇ ನನ್ನ ಕುರೂಪವನ್ನು ನೋಡಿ ನಗುವಂಥವರಾದಿರಿ, ಜಾಗ್ರತೆಯಾಗಿ ಬಂದು ಯಂತ್ರವನ್ನು ತೋರಿಸಿರೆನಲು. ರಾಜನು ಮುಗುಳುನಗೆಯಿಂದ ಎಲೈ, ಆಗಂತುಕನೇ ! ನೀನು

ಅತ್ಯಂತ ವೃದ್ಧನಾಗಿರುತ್ತೀ ಬುದ್ಧಿಯಿಲ್ಲದೆ ಬಂದಿರುವೆಯಲ್ಲದೆ ಬೇರೆಯಿಲ್ಲ ನಮ್ಮ ಯಂತ್ರವನ್ನು ಹೊಡೆಯುವುದಕ್ಕೆ ದೇವತೆಗಳೂ ಕೂಡ ಅಸಮರ್ಥರು ನೇಪಾಳ, ಘೂರ್ಜರ, ಯವನ, ಸಿಂಧು, ಪಾರಸೀಕ, ಬಾರ್ಬರ, ಈ ದೇಶಗಳ ಅರಸುಗಳೆಲ್ಲಾ ಬಂದು ಯಂತ್ರವನ್ನು ಹೊಡೆಯಲಾರದೆ ನಮ್ಮೊಡನೇ ಹೇಳದೆಯೇ ಓಡಿಹೋಗಿರುವರು. ಅಂಗ, ವಂಗ, ಕಳಿಂಗ, ಮಗಧ, ಮದ್ರ, ಸೌರಾಷ್ಟ್ರ ಈ ದೇಶಗಳ ದೊರೆಗಳು ಬಂದಿರುತ್ತಾರೆ, ನೀನೂ ಹೋಗಿ ನೋಡುವವನಾಗೆನಲು, ಆಗಲಾ ವೃದ್ಧನು ಯಂತ್ರದ ಸಮೀಪಕ್ಕೆ ಹೋಗಿ ಅಲ್ಲಿರುವ ರಾಜೋತ್ತಮರನ್ನೆಲ್ಲಾ ಕಂಡು, ಎಲೈ ರಾಜಶಿಖಾಮಣಿಗಳಿರಾ ! ನೀವು ಈ ಯಂತ್ರವನ್ನು ಹೊಡೆಯುವುದಕ್ಕೆ ಅಸಮರ್ಥರಾದಿರಿ, ನಾನೀಯಂತ್ರವನ್ನು ನಿಮಿಷಮಾತ್ರದಲ್ಲಿ ಹೊಡೆಯುವೆನು ನೋಡುತ್ತಲಿರಿ ಎಂದು ನುಡಿದು ಆ ಜನಗಳ ಸಮೂಹವನ್ನು ತಪ್ಪಿಸಿಕೊಂಡು ಯಂತ್ರದ ಸಮೀಪಕ್ಕೆ ಹೋಗುತ್ತಿರುವುದನ್ನು ಕಂಡು ಅಲ್ಲಿನ ರಾಜರುಗಳೆಲ್ಲರೂ ಅವನ ವಿಕಾರವಾದ ಆಕಾರಕ್ಕೆ ನಕ್ಕು ಅಪಹಾಸ್ಯಮಾಡುತ್ತಲಿದ್ದರು.

ಬಳಿಕ ವೃದ್ಧನು ಧನುಷ್ಟಾಂಕಾರವನ್ನು ಮಾಡಿ, ಬಾಣವನ್ನು ಸಂಧಿಸಿ ಕಾಳಿಕಾದೇವಿಯನ್ನು ಮನದೊಳು ಧ್ಯಾನಿಸುತ್ತಾ ಕೆಳಭಾಗದಲ್ಲಿರುವ ಕನ್ನಡಿಯೊಳು ಲಕ್ಷ್ಯವನ್ನು ನಿಲ್ಲಿಸಿಕೊಂಡು ಬಾಣವನ್ನು ಪ್ರಯೋಗಿಸಿದನು. ಆ ಬಾಣವು ವಾಯುವಿನ ಸಮರ್ಥದಿಂದ ತ್ರೇತಾಗ್ನಿಗಳು ಅದದೊಳು ಹೊಕ್ಕು ಅಗ್ನಿಯ ಕಿಡಿಗಳನುಗುಳುತ್ತಾ ಹೋಗಿ ಆ ಕೋಕಿಲೆಯ ಯಂತ್ರವನ್ನು ಭೂಮಿಯ ಮೇಲೆ ಕೆಡವಿತು. ಅದನ್ನು ನೋಡಿದ ರಾಜರೆಲ್ಲಾ ತಮ್ಮ ಮೂಗುಗಳ ಮೇಲೆ ಬೆರಳುಗಳನ್ನಿಟ್ಟುಕೊಂಡು ಬಹು ಪ್ರಕಾರದಿಂದ ವೃದ್ಧನನ್ನು ಸ್ತುತಿಸಿದರು. ಆಕಾಶದೊಳು ದೇವದುಂದುಭಿಗಳು ಧ್ವನಿಮಾಡಿ ಪುಷ್ಪವೃಷ್ಟಿಯನ್ನು ಸುರಿಸಿದರು. ಕಾಂಬೋಜಾಧಿಪನು ಪುತ್ರಿಸಮೇತನಾಗಿ ಅಳುತ ಮೂರ್ಛೆಯನ್ನು ಹೊಂದಿ ಭೂಮಿಯ ಮೇಲೆ ಬಿದ್ದನು. ಮಂತ್ರಿಪ್ರಧಾನರು ರಾಜನನ್ನು ಸಂತೈಸಿ, ಆತನ ಪುತ್ರಿಯನ್ನು ಉಪಚಾರಗಳಿಂದ ಮೂರ್ಛೆಯಿಂದೆಬ್ಬಿಸಿ ಕುಳ್ಳಿರಿಸಲಾಗಿ ಆಹಾ ! ದೈವಾಜ್ಞೆಯು ಅನುಲ್ಲಂಘ್ಯವಾಗಿರುವದು, ಅದನ್ನು ತಪ್ಪಿಸಲು ಯಾರೂ ಸಮರ್ಥರಲ್ಲ. ಎಲೈ ದೊರೆಯೇ ! ನಿನ್ನ ವಾಗ್ದಾನವನ್ನು ನೆರವೇರಿಸದಿದ್ದರೆ ಲೋಕದಲ್ಲಿ ಸೂರ್ಯಚಂದ್ರರಿರುವವರೆಗೂ ಅಪಕೀರ್ತಿಯು ತಪ್ಪುವುದಿಲ್ಲ, ಎಂದು ನುಡಿಯಲಾಗಿ ರಾಜತನಯಳಾದ ಪುಷ್ಪವೇಣಿಯು ಆಕಾಶದೊಳಗಣ ದೇವವಾದ್ಯಗಳನ್ನು ಲಾಲಿಸಿ, ಆಶ್ಚರ್ಯವನ್ನೈದಿ ಆಹಾ ! ಈ ಮುದುಕನ ವಿಷಯದಲ್ಲಿ ಸಂತೋಷವನ್ನು ಹೊಂದಿ, ಪುಷ್ಪವೃಷ್ಟಿಯನ್ನು ಸುರಿಸಲು ಕಾರಣವೇನು, ಧರ್ಮದೇವತೆಯು ನನ್ನ ಅಭೀಷ್ಟವ

ನ್ನೆಂತು ತಪ್ಪಿಸುವಳು ವಿಕಾರವಾದ ಈ ವೃದ್ಧನಿಗೆ ಇಂತಪ್ಪ ಅಸಾಧ್ಯವಾದ ಸಾಹಸವು ಯಾವರೀತಿಯಿಂದ ಬಂದೀತು, ಇದು ವಿಚಿತ್ರಕರವಾಗಿರುವುದು, ಆದರೆ ನಾವಕಾಶದಿಂದ ಎಲ್ಲವೂ ತಿಳಿಯುಬರುವುದೆಂದು ಮನದೊಳು ಯೋಚಿಸಿ, ತಂದೆಯನ್ನು ಕುರಿತು ಎಲೈ ಜನಕನೇ ! ದೌರ್ಭಾಗ್ಯವಶದಿಂದ ಆ ಶೃತ ಕೀರ್ತಿಯನ್ನು ದೈವವು ನನಗೆ ತಪ್ಪಿಸಿತು, ನಾನೀ ವೃದ್ಧಪುರುಷನೊಂದಿಗೆ ಸಹ ಗಮನದೊಡನೆ ಪುಣ್ಯಲೋಕವನ್ನು ಕುರಿತು ತೆರಳಲು ಮನದಲ್ಲಿ ನಿಶ್ಚೈಸಿರು ವೆನು, ಇನ್ನು ನೀವು ನಡೆಸಬೇಕಾದ ಕಾರ್ಯಗಳನ್ನು ನೆರವೇರಿಸಬಹುದೆಂದು ನುಡಿದು ತಲೆಯನ್ನು ಬಗ್ಗಿಸಿಕೊಂಡು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಆ ವೃದ್ಧನ ಸಮೀಪಕ್ಕೆ ಹೋಗಿ ಕಂಠದಲ್ಲಿ ಪುಷ್ಪಮಾಲಿಕೆಯನ್ನು ಹಾಕಿದಳು

ಆಗ ಇದನ್ನು ನೋಡಿದ ಭೂಪಾಲಕರು ಮನಗಳಲ್ಲಿ ಪರಿತಾಪಗ ಳೊಂದಿಗೆ ದುಃಖಿಸುತ್ತಾ ತಮ್ಮ ತಮ್ಮ ದೇಶಗಳನ್ನು ಸೇರಿದರು. ಕಾಂಬೋ ಜಾಧಿಪನು ನೇತ್ರಗಳಲ್ಲಿ ನೀರು ಸುರಿಸುತ್ತಾ ಅಳಿಯನನ್ನು ಕರೆದುಕೊಂಡು ಹೋಗಿ ಐದು ದಿವಸಗಳು ಕ್ರಮವಾಗಿ ವಿವಾಹವನ್ನು ಮಾಡಿಸಿದನು. ಐದನೇ ದಿವಸದ ರಾತ್ರಿಯಲ್ಲಿ ವೇಷಧಾರಿಯಾದ ಮುದುಕನು ತನ್ನ ಅಂತಃಪುರಕ್ಕೆ ಹೋಗಿ ದಿವ್ಯಸುಂದರದಿಂದ ಪ್ರಕಾಶಮಾನಳಾಗಿರುವ ಪುಷ್ಪವೇಣಿಯನ್ನಾಲಿಂಗ ನಮಾಡಿಕೊಂಡು ಎಲೈ ಪ್ರಾಣಕಾಂತಳೇ ! ನಿನ್ನಂಥಾ ನೊಬಗುಳ್ಳ ಸುಂದರೀ ಮಣಿಗೆ ಸೃಷ್ಟಿಕರ್ತನಾದ ವಿಧಿಯು ನನ್ನನ್ನು ದೊರಕಿಸಿಕೊಟ್ಟನು. ಆಹಾ ! ನನಗೆ ಇಂದ್ರಿಯಗಳ ಪಾಟವವು (ವ್ಯಾಪಾರವು) ಸ್ವಲ್ಪವಾದರೂ ಇಲ್ಲ. ತೊಂಭತ್ತು ವರುಷಗಳ ವೃದ್ಧನಾದ ಎನ್ನೊಡನೆ ನರಿ ನೀನೇನು ಸುಖಪಡುವವ ಳಾಗುವೆ, ಸುಂದರಾಂಗನಾದ ಬೇರೊಬ್ಬ ಯೌವನ ಪುರುಷನೊಡನೆ ಸೇರಿ ನೀನು ಕಾಮಕಲೆಗಳನೆಸಗುವವಳಾಗು, ಇದಕ್ಕೆ ನಾನು ಮನಃಪೂರ್ತಿಯಾಗಿ ಅಪ್ಪಣೆಯನ್ನು ಕೊಡುವೆನೆನಲಾಗಿ ಅದನ್ನು ಕೇಳಿದ ರಾಜತನಯಳು ವಲ್ಲಭ ನನ್ನು ನೋಡಿ, ಎಲೈ ಪ್ರಾಣೇಂದ್ರನೇ ! ಈಗ ನೀವು ಹೇಳುವ ಮಾತುಗಳು ಲೋಕನಿಂದ್ಯಮಾಗಿಯೂ, ಧರ್ಮವಿರುದ್ಧಗಳಾಗಿಯೂ ಇರುವವು. ನಾನು ಚಿತ್ತಿ ನೀವಂತಹ ಅಂಗನೆಯಲ್ಲ, ರಾಜಹಂಸವು ರತ್ನಗಳನ್ನು ಭಕ್ಷಿಸುವುದಲ್ಲದೆ ಎಷ್ಟು ಹಸಿವೆಯುಂದಿದ್ದರೂ ಇತರ ಪದಾರ್ಥಗಳನ್ನು ಭುಜಿಸುವುದಿಲ್ಲ. ನನಗೆ ಭೋಗೇ ಚ್ಛೆಯೂ ಇಲ್ಲ. ಮತ್ತೇನೆಂದರೆ, ನೀವು ಎಷ್ಟುಕಾಲ ಜೀವಂತರಾಗಿರುವಿರೋ ಅದುವರೆಗೂ ನಿಮ್ಮ ಸೇವೆಯನ್ನು ಮಾಡುತ್ತಾ ಕಡೆಗೆ ನಿಮ್ಮೊಡನೆ ಸಹಗಮನ ವನ್ನು ಮಾಡಿ ಪುಣ್ಯಲೋಕವನ್ನೈದುವೆನು, ನಾನೀ ಭೂಲೋಕದೊಳು ಲೋಕ ಸಮ್ಮತವಾದ ಭೋಗಗಳನ್ನನುಭವಿಸತಕ್ಕ ವಿಧಿಬರಹವಿದ್ದದ್ದೇ ಆದರೆ ನನಗೆ ಶ್ರುತಕೀರ್ತಿ ಮಹಾರಾಯನೇ ಪತಿಯಾಗುತಲಿದ್ದನೆಂದು ವಿಧೇಯಳಾಗಿ ಹೇಳಲು

ಆ ಮಾತಿಗೆ ವೃದ್ಧನು ಅವಳನ್ನು ಕುರಿತು ಎಲೈ ಮುಗ್ಧಳೇ ನನ್ನೊಡನೆ ಸಹಗಮನವನ್ನು ಮಾಡಿ ಪುಣ್ಯಲೋಕವನ್ನೈದಿದರೂ ಪುನರಪಿ ನಿನಗೆ ಜನ್ಮರಾಹಿತ್ಯವು ಒದಗುವದಿಲ್ಲ ಒಂದು ದಿವಸವಾದರೂ ಸುಖಪಡದ ಕಾರಣದಿಂದ ಇಂದ್ರಿಯಗಳಿಗೆ ಭೋಗವೇ ಸುಖವೆಂಬದಾಗಿ ತಿಳಿಯದೆ ಮಾತನಾಡಿದವಳಾದೆ ಅಯ್ಯೋ ! ನಿನ್ನ ಸುಂದರತ್ವವನ್ನು ನೋಡಿ ನನಗೆ ವ್ಯಸನವಾಗಿರುವುದು, ಆದಾಗ್ಯೂ ನೀನು ಮನದೊಳು ನೆನೆದಿರ್ದ ಆ ಶ್ರುತಕೀರ್ತಿರಾಯನು ಯಾವ ಅರಣ್ಯದೊಳಿದ್ದರೂ ಕರೆತರುವೆನೆನಲು, ಆ ಮಾತಿಗೆ ಪುಷ್ಪವೇಣಿಯು ಎಲೈ ಪ್ರಾಣನಾಥನೇ ! ವೃದ್ಧಭಾವದಿಂದ ನೀವು ಅನ್ಯತ್ರಬುದ್ಧಿಯುಳ್ಳವರಾಗಿ ಈರೀತಿಯಿಂದ ಹೇಳುವಿರಿ, ಶ್ರುತಕೀರ್ತಿರಾಜನಾಗಲೀ, ದೇವೇಂದ್ರನಾಗಲೀ ಸಾಕ್ಷಾತ್ ಪರಬ್ರಹ್ಮನಾದ ಶ್ರೀಮನ್ನಾರಾಯಣನಾಗಲಿ ತಗ ಪ್ರತ್ಯಕ್ಷನಾಗಿ ಬಂದಾಗ್ಯೂ ನಾನು ಅಪೇಕ್ಷಿಸುವವಳಲ್ಲವೆಂದು ನುಡಿದು ಆ ವೃದ್ಧನಿಗೆ ಎಷ್ಟೋಪಚಾರಗಳನ್ನು ಮಾಡುತಲಿದ್ದಳು. ತರುವಾಯ ಮುದುಕನು ಹೆಂಡತಿಯ ಮನಸ್ಸನ್ನು ಚೆನ್ನಾಗಿ ಪರೀಕ್ಷಿಸಿ ನೋಡಬೇಕೆಂದು ಯೋಚಿಸಿ, ಓ ಪ್ರಾಣಕಾಂತಳೇ ! ನಾನೀ ದೇಶವನ್ನು ಕುರಿತುಬಂದ ಕಾಲದಿಂದ ಬೇಂಟೆಯನ್ನಾಡುವುದನ್ನು ಬಿಟ್ಟನು, ಈ ದಿನ ಬೇಂಟೆಯಾಡಿ ಬರಲು ನನ್ನನ್ನು ಕಳುಹುವವಳಾಗೆನಲು ಆ ಲತಾಂಗಿಯು ವಲ್ಲಭನನ್ನು ನೋಡಿ, ಎಲೈ ಪ್ರಾಣರಕ್ಷಕನೇ ! ನೀವು ಬೇಟೆಗೆ ಹೋಗತಕ್ಕದ್ದಲ್ಲ, ದಿನದಿನಕ್ಕೂ ದೇಹವು ಕೃಶವಾಗುತಲಿರುವುದು. ನಮ್ಮ ಅರಣ್ಯದಲ್ಲಿ ಪ್ರಬಲವಾದ ದುಷ್ಟವ್ಯಾಘ್ರಗಳಿರುವುವು ಬೇಂಟೆಯಾಡುವ ಸಾಹಸವು ಕೂಡಾ ನಿಮಗೆ ಕಳೆಯುತಲಿರುವುದು, ಎಂದು ಎಷ್ಟು ಪ್ರಕಾರವಾಗಿ ಹೇಳಿದರೂ ಆತನು ಕೇಳದೆ ಸಾಯಂಕಾಲವಾಗುವುದರೊಳಗಾಗಿ ಮನೆಗೆ ಬಂದು ಸೇರುವೆನೆಂದು ಆಕೆಗೆ ನಂಬುಗೆಯಿಂದ ಸಮಾಧಾನಗೊಳಿಸಿ, ಬೇಟೆಗಾರರೊಡನೆ ಅರಣ್ಯವನ್ನು ಕುರಿತು ಹೋಗಿ, ವನಮೃಗಗಳನ್ನು ಸದೆಬಡಿಯುತ್ತಾ ಕುದುರೆಯನ್ನಿಳಿದು ಹುಲಿ ಮೊದಲಾದುವುಗಳನ್ನು ತರುಮುತ್ತಾ ಸ್ವಲ್ಪಹೊತ್ತಿಗೆ ಬೇಗಗಾಗಿ ಜೊತೆಯೊಳು ಬಂದಿದ್ದವರಿಗೆ ಕಾಣಿಸದಂತೆ ಮರೆಯಾಗಿ ತನ್ನ ಪೂರ್ವದ ದಿವ್ಯರೂಪವನ್ನು ಧರಿಸಿಕೊಂಡು ಒಂದಾನೊಂದು ಮರದಡಿಯಲ್ಲಿ ಕೂತುಕೊಂಡಿದ್ದನು. ಆಗ ಜೊತೆಯಲ್ಲಿ ಬಂದಿದ್ದ ಬೇಟೆಗಾರರು ಆತನನ್ನು ಕಾಣದೆ ಓಹೋ ! ವೃದ್ಧನು ಹುಲಿಗಳ ಪಾಲಾದನೆಂದು ವಿಚಾರಪರರಾಗಿ ಅವನನ್ನು ಹುಡುಕುತಲಿದ್ದರು. ಇತ್ತ ಪುಷ್ಪವೇಣಿಯು ತನ್ನ ಪತಿಯು ಆಗಮನವನ್ನೆದುರು ನೋಡುತ್ತಾ, ಆ ದಿನ ರಾತ್ರಿಯೊಳಾ ಮುದುಕನು ಬಾರದಿರಲು, ಬಹಳ ವ್ಯಾಕುಲಚಿತ್ತಳಾಗಿ ಅರುಣೋದಯ ಸಮಯದೊಳು ತನ್ನ ತಂದೆಯ ಅಂತಃಪುರಕ್ಕೆ ಹೋಗಿ, ಆತನಿಗೆ ತನ್ನ ಪತಿಯ ವೃತ್ತಾಂತವೆಲ್ಲವನ್ನು ತಿಳಿಸಿ, ತಾನೊಂದು ಪಾಲಕಿಯೊಳು ಕುಳಿತು

ಕೊಂಡು, ಕೆಲವು ವೀರಭಟರನ್ನೂ ದೂತಿಯರನ್ನೂ ಜೊತೆಯಲ್ಲಿ ಕರೆದು ಕೊಂಡು ಅರಣ್ಯವನ್ನು ಕುರಿತು ಹೋಗುತಲಿದ್ದಳು. ಇಷ್ಟರಲ್ಲಿ ವಿಪಿನ ಮಧ್ಯ ದೊಳು ವೃದ್ಧನನ್ನು ಕಾಣದೆ ಹುಡುಕುತಲಿದ್ದ ಬೇಟೆಗಾರರೀರ್ವರೂ ದಿವ್ಯ ತೇಜೋವಂತನಾದ ರಾಜಪುತ್ರನೋರ್ವನು ಕುಳಿತಿರುವುದನ್ನು ನೋಡಿ ನಮ ಸ್ಕರಿಸಿ, ಎಲೈ ಮಹಾತ್ಮನೇ ! ನೀವು ಯಾರೋ ನಮಗೆ ತಿಳಿಯದು, ನಮ್ಮ ದೇಶದ ದೊರೆಯ ಅಳಿಯನಾದ ವೃದ್ಧನೋರ್ವನು ಬೇಟೆಗಾಗಿ ಈ ಅರಣ್ಯಕ್ಕೆ ಬಂದು ನಮಗೆ ತಿಳಿಯದಂತೆ ಎಲ್ಲಿಯೋ ಹೊರಟುಹೋದನು. ನೀವೇನಾದರೂ ಅವನನ್ನು ಕಂಡಿರಾ ? ಎಂದು ಕೇಳಲು ರಾಜಪುತ್ರನು ಅವರನ್ನು ಕುರಿತು, ಎಲೈ ಭಟರುಗಳಿರಾ ! ಆ ಮುದುಕನನ್ನು ಒಂದು ಹುಲಿಯು ಕೆಡವಿ ಬಾಯಿಯೊಳು ಕಚ್ಚಿಕೊಂಡು ಹೋಗುತ್ತಿದ್ದುದನ್ನು ನಾನು ದೂರದಲ್ಲಿ ನೋಡುತಲಿದ್ದೆನು, ಎಂದು ನುಡಿಯಲಾ ಬೇಟೆಗಾರರು ಕೇವಲ ದುಃಖಪಡುತ್ತಿರುವುದನ್ನು ಕಂಡು ನೀವು ಯಾತಕ್ಕೆ ವ್ಯಸನಪಡುವಿರಿ ! ಈ ಸಮಾಚಾರವನ್ನು ನಿಮ್ಮೊಡೆಯನಿಗೆ ತಿಳುಹುವವರಾಗಿ, ನಾನು ಮಾಳವದೇಶದ ರಾಜನಂದನನು ನನ್ನ ಹೆಸರು ಶ್ರುತಕೀರ್ತಿಯು ಹುಲಿಯ ಹಾಲನ್ನು ತರುವುದಕ್ಕಾಗಿ ದೇಶವನ್ನು ತೊರೆದು ಅಡವಿಗಳನ್ನು ಪೊಕ್ಕು ಸಂಚರಿಸುತ್ತಲಿರುವೆನು. ಈ ಅರಣ್ಯದಲ್ಲಿ ಹುಲಿಯ ಹಾಲು ದೊರಯುವುದೇ ! ಎಂದು ಕೇಳಲು, ಆ ಭಟರುಗಳು ಆತನಿಗೆ ನಮಸ್ಕ ರಿಸಿ, ಎಲೈ ರಾಜೋತ್ತಮನೇ ! ನಿನಗೋಸ್ಕರವಾಗಿಯೇ ನಮ್ಮ ದೊರೆಯು ವ್ಯಸನಪಡುತ್ತಾ ತನ್ನ ಪುತ್ರಿಯನ್ನು ಯಾರಿಗೂ ಕೊಟ್ಟು ಮದುವೆ ಮಾಡದೆ, ಯಾರಿಂದರೂ ಪೊಡೆಯಲಸಾಧ್ಯವಾದ ಒಂದು ಕೋಕಿಲಾ ಯಂತ್ರವನ್ನು ನಿರ್ಮಿಸಿ, ಸ್ವಯಂವರವನ್ನು ಪ್ರಕಟಿಸಿದ್ದನು. ಇದಕ್ಕಾಗಿ ಅನೇಕ ದೇಶಗಳ ಧೊರೆಗಳು ಬಂದು ಯಂತ್ರವನ್ನು ನೋಡಿ ವಿಸ್ಮಿತರಾಗಿ ನಾಚಿಕೆಯಿಂದ ತಮ್ಮ ತಮ್ಮ ದೇಶಗಳಿಗೆ ಹಿಂದಿರುಗಿದರು. ನಂತರ ಅತ್ಯಂತ ಕುರೂಪಿಯಾಗಿಯೂ ಕೇವಲ ವೃದ್ಧನಾಗಿಯೂ ಇರುವ ಒಬ್ಬ ಅಜ್ಜುಗಜ್ಜು ಮುದುಕನು ಆಯಂತ್ರದ ಬಳಿಗೆ ಬಂದು ಅವನ್ನು ಲಕ್ಷ್ಯದಿಂದ ಹೊಡೆದು ಆಯಾಸವಿಲ್ಲದೆ ರಾಜಪುತ್ರಿ ಯನ್ನು ವಿವಾಹಮಾಡಿಕೊಂಡನು. ಆತನನ್ನೇ ನಾವೀ ಅರಣ್ಯದೊಳು ಹುಡುಕುತ ಲಿರುವೆವು. ಈ ಸಮೀಪದಲ್ಲಿ ಕಾಣಬರುವುದೇ ಕಾಂಬೋಜದೇಶವು, ನಾವೆ ಲ್ಲರೂ ಅಲ್ಲಿಗೆ ಹೋಗೋಣ ಬನ್ನಿರೆಂದು ಹೇಳಿ, ಮುಂಚಿತವಾಗಿ ಒಬ್ಬನು ಈ ವೃತ್ತಾಂತವನ್ನು ತಿಳಿಸಬೇಕೆಂಬದಾಗಿ ಪಟ್ಟಣಕ್ಕೆ ಬರುತ್ತಾ ಮಧ್ಯದಲ್ಲಿ ಬರುತಲಿದ್ದ ಪುಷ್ಪವೇಣಿಯನ್ನು ಕಂಡು ದುಃಖದಿಂದ ನಡೆದ ವೃತ್ತಾಂತವನ್ನೆಲ್ಲ ತಿಳಿಸಲು ಇಂದುಮುಖಿಗೆ ದೇಹವೆಲ್ಲಾ ಕಂಪಾಯಮಾನವಾಗಿ ಓಹೋ ! ಶೃತ ಕೀರ್ತಿರಾಯನು ಬಂದಿರುವನೆ ! ಅಯ್ಯೋ ನನ್ನ ತಂದೆಯು ತ್ವರೆಪಟ್ಟನು, ನನ್ನ ಭಾಗ್ಯವು ಈ ರೀತಿಯಾಗಿ ಪರಿಣಮಿಸಿದರೆ ಯಾರುತಾನೇ ಮಾಡತಕ್ಕದ್ದೇನು ? ಎಂದು ವ್ಯಸನಪಡುತ್ತಿರುವಷ್ಟರಲ್ಲಿ ಆ ಶೃತಕೀರ್ತಿಯು ಈಕೆಯ ಸಮೀಪಕ್ಕೆ

ಬಂದು, ಎಲೈ ಪ್ರಾಣಪ್ರಿಯಳೇ ! ಯಾತಕ್ಕೆ ವ್ಯಸನಪಡುವೆ, ನಿನ್ನನ್ನು ಅಪೇಕ್ಷಿಸಿದ್ದರಿಂದಲೇ ನಾನಿಷ್ಟು ದೂರ ಬಂದಿರುವೆನು ನಿನ್ನ ಭಟರುಗಳಿಂದ ನಿನ್ನ ವಿಶಿಷ್ಟ ವರ್ತಮಾನವನ್ನೆಲ್ಲಾ ಕೇಳಿ ತುಂಬಾ ವ್ಯಸನಪಟ್ಟೆನು. ಆ ಮುದುಕನನ್ನು ಒಂದು ಹುಲಿಯು ಬಾಯಿಯೊಳು ಕಚ್ಚಿಕೊಂಡು ಹೋಯಿತು, ಅಕಟಾ ! ನಿನ್ನ ರೂಪು, ಯೌವನ, ಸುಂದರತ್ವಗಳನ್ನು ವ್ಯರ್ಥಮಾಡಿ ಆ ಮುದುಕನಿಗೋಸ್ಕರ ಚಿಂತಿಸಲೇಕೆ ! ನನ್ನ ಪಟ್ಟಣಕ್ಕೆ ಬಂದು ಸೋದರತ್ತೆಗೆ ಸಂತೋಷಗೊಳಿಸಿ, ನನ್ನನ್ನು ಮದುವೆ ಮಾಡಿಕೊಂಡು ಸಮಸ್ತ ಸುಖಗಳನ್ನೂ ಅನುಭವಿಸೋಣ ಬಾರೆಂದು ಕರೆಯಲು, ಆ ಪೂರ್ಣೇಂದುಮುಖಿಯು ತಲೆಯನ್ನು ಬೊಗ್ಗಿಸಿಕೊಂಡು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಓಹೋ ! ನೀವು ಹೇಳುವ ಮಾತುಗಳು ಲೋಕನಿಂದ್ಯಗಳಾಗಿಯೂ, ಧರ್ಮವಿರುದ್ಧಗಳಾಗಿಯೂ ಇರುವವು ಅಗ್ನಿಸಾಕ್ಷಿಯಿಂದ ವಿವಾಹ ಮಾಡಿಕೊಂಡ ಪತಿಯು, ವೃದ್ಧನಾಗಲೀ ಕುರೂಪಿಯಾಗಲೀ, ಪತಿತನಾಗಲೀ ಮಾನವತಿಯರಾಗಿಯೂ, ಪ್ರತಿವ್ರತೆಯರಾಗಿಯೂ ಇರುವ ಅಬಲೆಯರು ಇತರರನ್ನು ಈಕ್ಷಿಸುವರೇ ! ನನ್ನಂಥಾ ನಿರ್ಭಾಗ್ಯಳಿಗೆ ನಿಮ್ಮಂಥವರು ದೊರಕುವರೇ ! ನೀವು ಪಟ್ಟಣದೊಳಕ್ಕೆ ಹೋಗುವವರಾಗಿ, ನಾನು ನನ್ನ ಪತಿಯ ತಲೆಯನ್ನಾದರೂ, ಮುಂಡವನ್ನಾದರೂ ನೋಡಿದ ತರುವಾಯ ಈ ಶರೀರವನ್ನು ಅಗ್ನಿಗೆ ಸಮರ್ಪಿಸುವೆನೆಂದು ನುಡಿದಳು. ಆಗ ರಾಜತನಯನು ಇವಳನ್ನು ಕುರಿತು, ಎಲೈ ಮುದ್ದುಗಿಳಿಯೇ ! ನೀನು ನನ್ನನ್ನು ಗಿವೇಧಿಸದೆ ನಾನು ಪುರಪ್ರವೇಶವನೆಂತು ಮಾಡಲಿ, ನಿನ್ನ ತಂದೆಯ ಮುಖವನ್ನು ನೋಡುವುದು ಹೇಗೆ ಆದಕಾರಣ ನನ್ನ ದೇಶಕ್ಕೆ ಹೋಗುವೆನೆಂದು ಹೇಳಿ ಅಲ್ಲಿ ನಿಲ್ಲದೆ ಸ್ವಲ್ಪದೂರ ಹೋಗಿ ಒಂದು ಸ್ಥಳದಲ್ಲಿ ಮರೆಯಾದನು ಆಗ ರಾಜಪುತ್ರಿಯು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಅಗಾಧವಾದ ಪೊದೆಗಳನ್ನೂ. ಹಳ್ಳಗಳನ್ನೂ, ಗುಟ್ಟಗಳನ್ನೂ, ತಿರುಗಿ ಹುಡುಕುತ್ತಾ ಇದ್ದಳು. ಆ ಶ್ರುತಕೀರ್ತಿಯು ಕಾಳಿಕಾದೇವಿಯ ಮಹಿಮೆಯಿಂದ ದೇವೇಂದ್ರನ ರೂಪವನ್ನು ಧರಿಸಿ, ರಂಭಾದ್ಯಪ್ಸರಸ್ತ್ರೀಯರೊಡನೆ ಆ ಇಂದುವದನೆಗೆ ಪ್ರತ್ಯಕ್ಷವಾಗಿ, ಓಹೋ ! ರಾಜರತ್ನವೆ ! ನಾನು ಅಮರಾಧಿಪನು, ಮೂರುಲೋಕಗಳಿಗೂ ಒಡೆಯನಾಗಿರುವೆನು, ಇವರು ರಂಭಾ, ಊರ್ವಸಿ, ಮೇನಕೆ, ತಿಲೋತ್ತಮೆಯರೆಂಬ ದೇವಕನ್ಯೆಯರು. ವೃದ್ಧನಾದ ಪತಿಗೋಸ್ಕರ ನೀನೇತಕ್ಕೆ ಇಷ್ಟು ಶ್ರಮಪಡುತಲಿರುವೆ ! ನಿನ್ನನ್ನು ತ್ರಿಲೋಕರಾಜ್ಯಲಕ್ಷ್ಮಿಯನ್ನಾಗಿ ಸ್ವೀಕರಿಸಿರುವೆನು, ಸಂತೋಷದಿಂದೆನ್ನ ಪುಷ್ಪಕವನ್ನೇರಿ ನನ್ನೊಡನೆ ಸ್ವರ್ಗಲೋಕಕ್ಕೆ ಬಾ ಎನಲಾಗಿ, ಆ ಅಬಲೆಯು ತತ್ತರಿಸಿ ದೇವೇಂದ್ರನನ್ನು ಕುರಿತು, ಎಲೈ ದೇವೋತ್ತಮನೇ ! ಧರ್ಮದೇವತೆಯು ನಿನ್ನನ್ನು ನೋಡಿ ಪರಿಹಾಸ್ಯ ಮಾಡುತಲಿರುವುದೂ,

ಗೌತಮ ಮುನಿಯ ಶಾಪವನ್ನೂ ಮರತೆಯಾ! ಎಂದು ನುಡಿಯಲು, ಆತನು ನಿನ್ನ ಮನಬಂದಂತೆ ನಡೆಯುವಳಾಗೆಂದು ಹೇಳಿ ಹೊರಟುಹೋದನು. ಬಳಿಕ ಪುಷ್ಪವೇಣಿಯು ತನ್ನ ದೂತಿಯರನ್ನು ನೋಡಿ, ಎಲೈ ಸಖಿಯರೇ! ದೇವತೆಗಳೂ ಕೂಡ ಅಕೃತ್ಯಕ್ಕೆ ಒಳಗಾದರು, ದೇವರು ನನ್ನನ್ನೀರೀತಿಯಾಗಿ ನಲಿಸುತಲಿರುವನು, ನನ್ನ ಪತಿಯು ಎಲ್ಲಿಗೆ ಹೋದನೋ ನಾನೇನು ಮಾಡಲಿ! ಎಂಬದಾಗಿ ಚಿಂತಿಸುತಲಿರಲು ದೂತಿಯರು ಶಾಂತವಚನಗಳಿಂದಾಕೆಯನ್ನು ಸಮಾಧಾನಪಡಿಸುತ್ತಾ ಇರುವಷ್ಟರಲ್ಲೇ ಶ್ರುತಕೀರ್ತಿಯು ತನ್ನ ಹೆಂಡತಿಯ ಗುಣವಿಶೇಷಗಳಿಗೆ ಬಹಳವಾಗಿ ಸ್ತುತಿಸಿ, ಕರುಣವನ್ನು ತಾಳ್ದು ಮಧುಕರಭಾವದಿಂದಾಕೆಯ ಮುಂದೆ ಬಂದು ನಿಂತು, ಎಲೈ ಪ್ರಾಣಪ್ರಿಯೇ! ನೀನು ಈ ಅರಣ್ಯಕ್ಕೆ ಬಂದ ಕಾರಣವೇನು? ನಾನು ದೊಡ್ಡದೊಡ್ಡ ಹುಲಿಗಳನ್ನು ಕೊಂದು ಬಂದೆನು. ಶ್ರುತಕೀರ್ತಿರಾಯನು, ದೇವೇಂದ್ರನು ಇವರುಗಳ ದರ್ಶನಮಾಡಿಕೊಂಡೆನು. ಅವರು ನಿನ್ನನು ಕಾಣಿಸಿಕೊಂಡು ಬುದ್ಧಿಯನ್ನು ಕಲಿಸಿದರೋ ಇಲ್ಲವೋ ಎಂದು ಕೇಳಲಾಮಾತಿಗೆ ವಲ್ಲಭೆಯು ಸಂಶಯಪಟ್ಟು ಸುಮ್ಮನೆ ಇರುವುದನ್ನು ಕಂಡು ಆ ವೇಷಧಾರಿಯು ಫಕ್ಕನೆ ನಕ್ಕು, ಎಲೈ ಪ್ರಾಣಪ್ರಿಯಳೇ! ನಿನ್ನಯ ಗುಣವಿಶೇಷಗಳನ್ನು ಪರೀಕ್ಷೆಮಾಡಲು ನಾನಿಷ್ಟುರೂಪುಗಳನ್ನು ಧರಿಸಿ ಬಂದೆನಲ್ಲದೆ ನಿಜವಾದ ವೃದ್ಧನಲ್ಲ, ನಾನು ನಿನ್ನ ಸೋದರತ್ತೆಯ ಮಗನೆಂದು ಸಕಲವನ್ನೂ ತಿಳುಹಿ ಕಾಳಿಕಾದೇವಿಯ ಮಹಾತ್ಮೆಯನ್ನು ಹೇಳಿ, ಎಲೈ ಕಮಲಾಕ್ಷಿಯೇ! ಕೋಕಿಲಾಯಂತ್ರವನ್ನು ಹೊಡೆಯಲು ನಾನಲ್ಲದೆ ಬೇರೊಬ್ಬರು ಸಮರ್ಥರೇ! ಎಂದು ನುಡಿದು ಅವಳೆದುರಿಗೆ ತನ್ನ ಪೂರ್ವದ ನಿಜವಾದ ರೂಪವನ್ನು ಧರಿಸಲು ಅದನ್ನು ನೋಡಿ, ಪುಷ್ಪವೇಣಿಯು ಅಪರಿಮಿತಾನಂದವನ್ನು ತನ್ನ ಮನದೊಳಗಣ ಸಂಶಯವನ್ನು ತ್ಯಜಿಸಿ, ಆಹಾ! ನನ್ನ ಭಾಗ್ಯವನ್ನೆಂತು ವರ್ಣಿಸಲೆಂಬದಾಗಿ ನುಡಿದು ಧರ್ಮದೇವತೆಯನ್ನು ಧ್ಯಾನಿಸಿ, ಪತಿಗೆ ನಮಸ್ಕರಿಸಿ, ಎಲೈ ಪುಣ್ಯಾತ್ಮನೇ! ನನಗೆ ತುಂಬಾ ತೊಂದರೆಯನ್ನು ಕೊಟ್ಟೆ, ಪಟ್ಟಣಕ್ಕೆ ಹೋಗೋಣ ಬನ್ನಿರೆಂದು ಕೇಳಲು ಶ್ರುತಕೀರ್ತಿಯು ಎಲೈ ವಲ್ಲಭೆಯೇ! ನಿನ್ನ ತಂದೆಯು ಆತುರಪಟ್ಟು ಕೋಕಿಲಾ ಯಂತ್ರವನ್ನು ನಿರ್ಮಿಸಿದ ವಿಷಯಕ್ಕಾಗಿ ನನಗೆ ಕೋಪವು ಸಂಭವಿಸಿರುವುದು, ಇದಕ್ಕಾಗಿ ನಾನು ಚತುರಂಗಬಲ ಸಮೇತನಾಗಿ ಮುಂಚಿತವಾಗಿ ಹೋಗಿ ನಿನ್ನ ತಂದೆಯನ್ನು ಭ್ರಾಂತಿಗೊಳಿಸುವೆನು, ನೀನು ಆಲಸ್ಯಮಾಡದೆ ತ್ವರೆಯಿಂದ ಬರುವಳಾಗೆಂದು ನುಡಿದು ಕಾಳಿಕಾದೇವಿಯ ಕರುಣದಿಂದ ಮೂರುಕೋಟಿ ಚತುರಂಗಬಲ ಸಮೇತನಾಗಿ ಹೊರಟು ಪಟ್ಟಣದ ಸುತ್ತಲೂ ಮುತ್ತಿಗೆ ಹಾಕಿ ರಣಭೇರಿಗಳನ್ನು ಬಾರಿಸಿದನು. ಆಗ ಕಾಂಬೋಜಾಧಿಪತಿಗೆ ಎದೆಯೊಡೆದು ಭಯಹೆಚ್ಚಿ ಯಾರೋ ಪಟ್ಟಣವ

ಸ್ನಾಕ್ರಮಿಸುವರೆಂದರಿತು, ವ್ಯಸನವನ್ನು ಮನದೊಳಿಟ್ಟುಕೊಂಡು ಉಪಾಯ ದಿಂದ ಕಾರ್ಯವನ್ನನುಕೂಲ ಮಾಡಿಕೊಳ್ಳಬೇಕೆಂದು ಚಿಂತಿಸಿ, ಅರಮನೆಯಿಂದ ಪಟ್ಟಣದ ಹೊರಗೆ ಬಂದು ಆ ರಾಜತನಯನಿಗೆದುರಾಗಿ ಕಪ್ಪಕಾಣಿಗಳನ್ನು ಕೊಟ್ಟು ಆತನ ಸೌಂದರ್ಯಕ್ಕಾಶ್ಚರ್ಯಪಟ್ಟು ಅವರನ್ನು ಕುರಿತು, ಎಲೈ ಮಹಾನು ಭಾವನೆ ! ನೀವು ಯಾವ ದೇಶದಿಂದ ಈ ಪಟ್ಟಣಕ್ಕೆ ಬಂದಿರಿ. ನಿಮ್ಮ ನಾಮ ಧೇಯವೇನು ? ನಾನು ಮತ್ತು ನನ್ನ ರಾಜ್ಯವು ನಿಮಗೆ ಎಷ್ಟರಮಾತ್ರವು ಎಂಬದಾಗಿ ವಿನಯದಿಂದ ನುಡಿದನು, ಆ ಮಾತಿಗೆ ರಾಜತನಯನು ಎಲೈ ಮಾವನೇ ! ನಾನು ನಿನ್ನ ತಂಗಿಯ ಮಗನಾದ ಶ್ರುತಕೀರ್ತಿಯು, ನಿನ್ನ ಕುವರಿ ಯನ್ನು ವಿಕಾರರೂಪವುಳ್ಳ ವೃದ್ಧನಿಗೆ ಕೊಟ್ಟು ವಿವಾಹವನ್ನೆಸಗಿದನೆಂದು ಕೇಳಿ ರೋಷದಿಂದ ಬಂದಿರುವೆನು, ಈಗ ಆ ಮುದುಕನನ್ನು ಕೊಂದು ನಿನ್ನ ಪಟ್ಟಣ ವನ್ನೆಲ್ಲಾ ಬೆಂಕಿವಾಲು ಮಾಡಿ, ನನ್ನ ಭಾರ್ಯೆಯಾದ ಪುಷ್ಪವೇಣಿಯನ್ನು ಕೊಂ ಡೊಯ್ವೆನು. ಇಂದ್ರಾದಿ ದೇವತೆಗಳು ನಿನಗೆ ಸಹಾಯವಾಗಿ ಬಂದರೂ ಅವರ ನ್ನೆಲ್ಲಾ ನಿರ್ಮೂಲಮಾಡುವೆನು, ಬೆಂಕಿಯಿಲ್ಲದ ಸ್ಥಳದೊಳು ಬೆಂಕಿಯನ್ನೂ ನೀರಿಲ್ಲದೆಡೆಯೊಳು ಜಲವನ್ನೂ ಸೃಷ್ಟಿಸುವೆನು, ಸೂರ್ಯಚಂದ್ರರನ್ನು ಬಡಿದು ಚಂಡಾಡುವೆನು, ಹಗಲನ್ನು ರಾತ್ರಿಯಾಗಿಯೂ, ರಾತ್ರಿಯನ್ನು ಹಗಲಾಗಿಯೂ, ಮಾಡುವೆನು, ನಾನು ಅರಣ್ಯದ ಪಾಲಾಗಿ ಮರಣವನ್ನೈದಿದನೆಂದೆಣಿಸಿದವನಾಗಿ ಯಂತ್ರವನ್ನು ನಿರ್ಮಿಸಿದೆಯಲ್ಲವೇ ? ಎಂಬದಾಗಿ ದಿಕ್ಕುಗಳು ಪ್ರತಿಧ್ವನಿಗಳನ್ನೀ ಯುವ ತೆರದೊಳು ಧನುಷ್ಟಾಂಕಾರವನ್ನು ಮಾಡಲು, ಕಾಂಬೋಜಪತಿಗೆ ಎದೆ ಯೊಡೆದು, ಬಾಯೊಳು ದ್ರವವಿಲ್ಲದೆ ಏನೂ ತಿಳಿಯದವನಾಗಿ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ನಿಶ್ಚೇಷ್ಟಿತನಾಗಿ ನಿಂತಿದ್ದನು.

ಅಷ್ಟರೊಳು ಪುಷ್ಪವೇಣಿಯು ಗಂಡನ ಬಳಿಗೆ ಬಂದು ನಮಸ್ಕರಿಸಿ ತಂದೆಯನ್ನು, ಕುರಿತು, ಎಲೈ ಜನಕನೆ ! ನೀನು ಮನಸದೊಳು ವ್ಯಸನವನ್ನು ತ್ಯಜಿ ಸುವವನಾಗಿ ನಿನ್ನ ಅಳಿಯನ ವೃತ್ತಾಂತವನ್ನು ಕೇಳೆಂದು ಸಮಸ್ತ ಸಂಗತಿಗ ಳನ್ನು ತಿಳಿಸಲಾಗಿ ರಾಜನಿಗೆ ಮನೋಸಂಶಯಗಳು ಬಿಡದೆ ಅಳಿಯನನ್ನಾಲಿಂಗಿ ಸಿಕೊಂಡು ಹಲವುಬಗೆಯಿಂದಾತನನ್ನು ಸ್ತುತಿಸಿ, ಎಲೈ ಪುಣ್ಯಾತ್ಮನೇ ! ನಿನ್ನ ಮಾಯಾರೂಪುಗಳನ್ನೆಲ್ಲಾ ತೋರಿಸೆನಲು, ಆತನು ವಿಕಾರವಾದ ವೃದ್ಧರೂಪ ವನ್ನೂ ಇಂದ್ರನ ಅವತಾರವನ್ನೂ ತೋರಿಸಲು, ಘೊರೆಗೂ ಮಂತ್ರಿಪ್ರಧಾನಿಗ ಳಿಗೂ ಮನೋಸಂಶಯಗಳು ಕಳೆದು ಆಹಾ ! ಈತನು ದೇವಸಮಾನನಾಗಿರು ವನು. ಇವನ ದರ್ಶನದಿಂದ ನಾವು ಪವಿತ್ರರಾದೆವೆಂದು ಬಹಳವಾಗಿ ಸ್ತುತಿಸಿ ದರು. ಬಳಿಕ ಕಾಂಬೋಜಪತಿಯು ತನ್ನ ಕುವರಿಯನ್ನು ನೋಡಿ, ಎಲೈ ಪುತ್ರಿಯೇ ! ನಿನ್ನ ಭಾಗವೇ ಭಾಗ್ಯ, ನಿನ್ನಂಥಾ ಪುಣ್ಯವತಿಯು ನನ್ನ ಉದರ

ದೊಳು ಜನಿಸಿದಕಾರಣ ನನ್ನ ವಂಶವೆಲ್ಲಾ ಪವಿತ್ರವಾಗಿ ನಾನು ಧನ್ಯನಾದೆನೆಂದು ಹಲವುಬಗೆಯಾಗಿ ಆನಂದಭಾಷ್ಪಗಳನ್ನು ಬಿಡುತ್ತಾ ಅಳಿಯನ್ನು ಪಟ್ಟದಾನೆಯಮೇಲೆ ಕುಳ್ಳಿರಿಸಿ. ಮಂಗಳವಾದ್ಯಗಳೊಡನೆ ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋಗಿ ಅತ್ಯಂತ ಸಂತೋಷದಿಂದ ಪುನಃ ವಿವಾಹವನ್ನೆಸಗಿ ಈ ಶುಭವಾರ್ತೆಯನ್ನು ತನ್ನ ತಂಗಿಯಾದ ಸುಮತೀದೇವಿಗೆ ಪತ್ರಿಕಾಮೂಲಕದಿಂದ ತಿಳಿಸಿದವನಾದನು.

ಅತ್ತ ಮಾಳವದೇಶಾಧಿಪನ ಬಳಿಗೆ ತ್ರಿಲೋಕಸಂಚಾರಿಯಾದ ನಾರದಮಹರ್ಷಿಯು ಬಂದು ಆತನಿಂದ ಅರ್ಘ್ಯಪಾದ್ಯಾದಿಗಳನ್ನು ಸ್ವೀಕರಿಸಿದಬಳಿಕ ಆತನನ್ನು ಕುರಿತು ಎಲೈ ದೊರೆಯೇ ! ನಿನ್ನ ಚಿಕ್ಕಹೆಂಡತಿಯ ಮೇಲಣ ಮೋಹಪರವಶನಾಗಿ ಸಕಲ ಸದ್ಗುಣ, ಶೌರ್ಯ, ಧೈರ್ಯ, ಸಾಹಸ ಪುಣ್ಯಮೂರ್ತಿಯಾದ ಶ್ರುತಕೀರ್ತಿಯೆಂಬ ಪುತ್ರನನ್ನು ಅಡವಿಪಾಲು ಮಾಡಿಸಿದವನಾದೆ ! ಎಂದು ಆತನ ಆಮೂಲಾಗ್ರವಾದ ವರ್ತಮಾನಗಳನ್ನೆಲ್ಲಾ ಕ್ರಮವಾಗಿ ತಿಳಿಸಿ, ತಾನು ಸ್ವರ್ಗಲೋಕಕ್ಕೆ ತೆರಳಿದನು. ಬಳಿಕ ಮಾಳವಾಧಿಪನು ತನ್ನ ಕಿರಿಹೆಂಡತಿಯನ್ನು ನಿಂದಿಸಿ, ಹಿರಿಹೆಂಡತಿಯ ಅಂತಃಪುರವನ್ನೈದಿ ಆಕೆಯಿಂ ಪೂಜಿಸಲ್ಪಟ್ಟವನಾಗಿ, ಶ್ರುತಕೀರ್ತಿಯ ವೃತ್ತಾಂತವನ್ನೆಲ್ಲಾ ತಿಳುಹಿ ತನ್ಮೂಲಕದಿಂದ ಬಹಳವಾಗಿ ಸಂತೋಷವನ್ನುಂಟುಮಾಡಿ, ಕಾಂಭೋಜಾಧಿಪನಾದ ಬೀಗನು ಕಳುಹಿಸಿದ ಶುಭವಾರ್ತಾ ಪತ್ರಿಕೆಗಳನ್ನು ಓದಿಕೊಂಡು ಪುತ್ರನ ಆಗಮನವನ್ನೆದುರುನೋಡುತ್ತಿದ್ದನು. ತರುವಾಯ ಶೃತಕೀರ್ತಿಮಹಾರಾಯನು ಮಾವನ ಪಟ್ಟಣದಲ್ಲಿ ಆರುತಿಂಗಳುಗಳವರೆಗೂ ಇದ್ದು ಬಳಿಕ ಪ್ರಯಾಣವನ್ನು ಬೆಳಸಿ ನಾನಾವಿಧಗಳಾದ ವಸ್ತುಗಳನ್ನೂ ಚತುರಂಗಬಲವನ್ನೂ ತೆಗೆದುಕೊಂಡು, ಹೆಂಡತಿಯಾದ ಪುಷ್ಪವೇಣಿಯನ್ನೂ ಸಂಗಡ ಕರೆದುಕೊಂಡು ಕೆಲವು ದಿವಸಗಳಿಗೆ ಕಾಳಿಕಾದೇವಿಯ ಗುಡಿಯನ್ನು ಸೇರಿ ಅಲ್ಲಿರುವ ಶಾಸನವನ್ನು ರಾಜಪುತ್ರರುಗಳ ವಸ್ತ್ರಾಭರಣಗಳನ್ನು ತನ್ನ ಹೆಂಡತಿಗೆ ತೋರಿಸಿ, ಅವುಗಳನ್ನು ತೆಗೆದುಕೊಂಡು ಅಲ್ಲಿಂದ ಹೊರಟುಬರುತ್ತಾ ತನ್ನ ತಾಯಿಗೆ ಸಮಾಚಾರವನ್ನು ಕಳುಹಿಸಲು, ಮಾಳವಾಧಿಪನು ಸುಮತೀದೇವಿಯು ಪುತ್ರನನ್ನು ಇದಿರ್ಗೊಳ್ಳುವನಿಮಿತ್ತವಾಗಿ ಪ್ರಯಾಣಮಾಡುವುದರೊಳಗಾಗಿಯೇ ಧೊರೆಯ ಕಿರಿಹೆಂಡತಿಯಾದ ಸುನಂದಿಯು ಮೋಸ ಸಂಭವಿಸುವದೆಂದು ಯೋಚಿಸಿ, ತನ್ನ ಪುತ್ರನನ್ನು ಕರೆದುಕೊಂಡು ತಾನು ಮುಂದಾಗಿ ಶ್ರುತಕೀರ್ತಿಯ ಎದುರಿಗೆ ಬರಲು ಶ್ರುತಕೀರ್ತಿಯು ಆಕೆಗೆ ನಮಸ್ಕರಿಸಿ, ಯೋಗಕ್ಷೇಮಗಳನ್ನು ವಿಚಾರಮಾಡಿ, ತಾಯೆ ! ಹುಲಿಯಹಾಲನ್ನು ತಂದೆನೆನಲಾಗಿ ಆ ಸುನಂದಿಯು ಅವನನ್ನು ಮುದ್ದಿಟ್ಟು ಮಗುವೇ ! ನನ್ನಲ್ಲಿ ಏನು ತಪ್ಪಿದ್ದರೂ ನೀನು ಮನದೊಳಿಡದೆ ನಿನ್ನ ಸಾಕ್ಷಾತ್ ಜನನಿ

ಯಂತೆ ನನ್ನನ್ನು ಭಾವಿಸಬೇಕೆನಲು ಶ್ರುತಕೀರ್ತಿಯು ತಾಯೇ! ನೀನು ಹೇಳಿದ ಮಾತಿಗಿಂತಲೂ ಅಧಿಕವಾಗಿ ನಡೆಯುವೆನೆಂದಾಕೆಯನ್ನು ಬಹಳವಾಗಿ ಸಂತೋಷ ಪಡಿಸಿ, ಮಂಗಳವಾದ್ಯಗಳಿಂದ ಎದುರಾಗಿ ಬಂದ ಜನನೀಜನಕರಿಗೆ ನಮಸ್ಕ ರಿಸಿ, ನಡೆದ ವೃತ್ತಾಂತವನ್ನೆಲ್ಲಾ ಬಿನ್ನೈಸಿದ ತರುವಾಯ ಪುಷ್ಪವೇಣಿಯು ತನ್ನ ಮಾವನಿಗೂ ಅತ್ತೆಗೂ ನಮಸ್ಕರಿಸಿದಳು. ಆಗ ನರೇಂದ್ರನು ಸಂತೋಷಭರಿತ ನಾಗಿ ಅವರನ್ನು ಪಟ್ಟಣಪ್ರವೇಶವನ್ನು ಮಾಡಿಸಿ ಶ್ರುತಕೀರ್ತಿಮಹಾರಾಯನಿಗೆ ಪಟ್ಟಾಭಿಷೇಕವನ್ನು ಮಾಡಲೆತ್ನಿಸಲು, ಆತನು ಸ್ವೀಕರಿಸದೆ ತನ್ನ ಅಣ್ಣನಿಗೆ ಪಟ್ಟವನ್ನು ಕಟ್ಟಿಸಿ, ತನ್ನ ಭುಜಬಲದಿಂದಲೂ ಕಾಳಿಕಾದೇವಿಯ ಕರುಣದಿಂ ದಲೂ ಚತುಸ್ಸಮುದ್ರ ಮುದ್ರಿತವಾದ ಭೂಮಂಡಲವನ್ನೆಲ್ಲಾ ಜೈಯಿಸಿ, ನವ ಖಂಡ ಮಂಡಲಾಧಿಪತಿಯಾಗಿ ರಾಜರನ್ನೆಲ್ಲಾ ತನ್ನ ಕೈಕೆಳಗೆ ತೆಗೆದುಕೊಂಡು ಅವರಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತಾ ರಾಜಾಧಿರಾಜನಾಗಿ ತನ್ನ ಕೀರ್ತಿಯು ದಿಗಂತ ವಿಶ್ರಾಂತವಾಗುವಂತೆ ಧರ್ಮವನ್ನು ನಾಲ್ಕು ಪಾದಗಳ ಮೇಲೆ ನಿಲ್ಲಿಸಿ, ತಂದೆತಾಯಿಗಳಿಗೆ ಅತ್ಯಂತ ಸಂತೋಷವಾಗಿ ಹಿರಿಯರನ್ನು ಪೂಜಿಸುತ್ತಾ ಯೋಗಿಗಳನ್ನು ಸೇವಿಸುತ್ತಾ ಸಚ್ಚಿದಾನಂದ ಯೋಗವನ್ನು ಮರೆ ಯದೆ ಅಭ್ಯಸಿಸುತ್ತಾ ದಂಪತಿಗಳೀರ್ವರೂ ಸುಖಾನಂದರಾಗಿ ಅನೇಕ ಪುತ್ರ ರನ್ನೂ ಕುವರಿಯರನ್ನೂ ಪಡೆದು ಬಹಳ ದಿವಸಗಳವರೆಗೂ ಜೀವಿಸಿ ಬಳಿಕ ಜನ ನಮರಣಗಳಿಗಾಕಾರವಾದ ದೇಹವನ್ನು ತ್ಯಜಿಸಿ, ಶಾಶ್ವತವಾದ ಪುಣ್ಯಲೋಕ ವನ್ನೈದಿದರೆಂದು ಭಗವಂತನುಸುರಲು, ಅರ್ಜುನನು ಪರಮ ಸಂತೋಷವನ್ನು ಹೊಂದಿ, ಆಹಾ! ಸಚ್ಚಿದಾನಂದಭಾವವು ಕೇವಲ ಶ್ಲಾಘನೀಯವಾದದ್ದೆಂದು ಆ ಶ್ರುತಕೀರ್ತಿಯನ್ನು ಬಹಳವಾಗಿ ಸ್ತುತಿಸಿ, ಶ್ರೀಕೃಷ್ಣನನ್ನು ಹೊಗಳಿ, ಎಲೈ ದೇವದೇವನೇ! ಇನ್ನು ನಿದ್ರೆಯು ಬಹಳವಾಗಿ ಬಾಧಿಸುವುದರಿಂದ ಶಯನಮಾ ಡಬೇಕೆನಲು, ಭಗವಂತನು ಸಮ್ಮತಿಸಿ, ಈರ್ವರೂ ಶಯನಮಾಡಿ ಸುಖನಿದ್ರೆ ಯನ್ನು ಪಡೆದರು.

ಆರನೆ ಕಥೆ ಸಂಪೂರ್ಣಂ.

---

*

ಶ್ರೀರಸ್ತು.

ಶ್ರೀ ಅಚ್ಯುತಾಯ ಪರಬ್ರಹ್ಮಣೇನಮಃ.

## ಚಂದ್ರಗುಪ್ತನೆಂಬ ಏಳನೆಯ ರಾಜಪುತ್ರನ ಕಥೆ.

ಏಳನೆ ದಿನದ ರಾತ್ರಿ ಕೃಷ್ಣಾರ್ಜುನರೀರ್ವರೂ ಯಮುನಾನದಿಯತೀರದ ಸೈತಕ ಪ್ರಾಂತ್ಯದೊಳು ಕುಳಿತುಕೊಂಡು ತಾಂಬೂಲವನ್ನು ಸ್ವೀಕರಿಸುತ್ತಾ ಗಂಧ ಪರಿಮಳಾದಿಗಳಿಂದುಕ್ತವಾದ ಚಂದನಗಳನ್ನು ಪೂಸಿಕೊಳ್ಳುತ್ತಾ ತಣ್ಣಗೆ ಬೀಸು ತಲಿರುವ ಮಂದಮಾರುತಕ್ಕಾನಂದಿಸುತ್ತಾ, ಸುಗಂಧ ಪುಷ್ಪಗಳ ವಾಸನೆಯನಾ ಘ್ರಾಣಿಸುತಲಿರಲಾಸಮಯದಲ್ಲಿ ಅರ್ಜುನನು ಶ್ರೀಕೃಷ್ಣನನ್ನು ನೋಡಿ, ಎಲೈ ದೇವೋತ್ತಮನೇ! ವೇದಾಂತರಹಸ್ಯಗಳೊಳು ಸಾಕಾರಭಾವವೆಂಬುದನ್ನು ನನಗ ಅನುಗ್ರಹದಿಂ ಬೋಧಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದ ಪಾರ್ಥನನ್ನು ಕುರಿತು, ಎಲೈ ಪಾಂಡುನಂದನಾ! ಸಾಕಾರಭಾವದ ರಹಸ್ಯವನ್ನು ತಿಳಿದು ಕೈವಲ್ಯವನ್ನು ಪಡೆದ ಚಂದ್ರಗುಪ್ತನೆಂಬ ರಾಜೋತ್ತಮನ ಇತಿಹಾಸ ವನ್ನು ಕೇಳೆಂದು ಹೇಳತೊಡಗಿದನು.

ಎಲೈ ಪಾಂಡುನಂದನನೇ! ಲಾಲಿಸು—ಪೂರ್ವದಲ್ಲಿ ಮಗಧದೇಶವನ್ನು ಪರಿಪಾಲಿಸುತಲಿದ್ದ ಸೂರ್ಯಗುಪ್ತನೆಂಬ ರಾಜೇಂದ್ರನಿಗೆ ಅನೇಕ ದಿವಸಗಳು ಮಕ್ಕಳಿಲ್ಲದಿರಲು. ರಾಯನು ಬಹುವಿಧವಾಗಿ ತಪವನ್ನು ಮಾಡಿ, ಅನೇಕ ವ್ರತ ಗಳನ್ನು ಮಾಡಿದ ಬಳಿಕ ದೈವಯೋಗದಿಂದಾತನ ಪಟ್ಟದ ರಾಣಿಯು ಗರ್ಭ ವನ್ನು ಧರಿಸಿ, ನವಮಾಸ ತುಂಬಿದನಂತರ ಸುಮುಹೂರ್ತದೊಳು ದಿವ್ಯಸುಂದರ ತೇಜಸ್ವಿಯಾದ ಮಗನನ್ನು ಹೆತ್ತಳು. ಆಗ ಆ ರಾಜನು ಅತ್ಯಂತ ಸಂತೋಷ ದಿಂದ ಪುಣ್ಯಪುರುಷರಿಗೆ ವಿವಿಧ ದಾನಧರ್ಮಂಗಳನ್ನು ಮಾಡಿ, ಮಗುವಿಗೆ ಜಾತ ಕರ್ಮಗಳನ್ನು ನೆರವೇರಿಸಿ, ಚಂದ್ರಗುಪ್ತನೆಂದು ಹೆಸರಿಟ್ಟು ಅತ್ಯಂತ ಪ್ರೇಮದಿಂದ ಸಲಹುತ್ತಾ ಐದನೆ ಸಂವತ್ಸರದಲ್ಲಿ ವಿದ್ಯಾಭ್ಯಾಸವನ್ನು ಮಾಡಿಸಿದನು. ತರು ವಾಯ ಬಾಲಕನು ಬಹಳ ಗ್ರಾಹಕಶಕ್ತಿಯುಳ್ಳವನಾಗಿ ಮಂತ್ರಿಪುತ್ರನಾದ ಪ್ರದೀಪನೆಂಬುವನ ಜೊತೆಯಲ್ಲಿ ಸೇರಿ ಸಕಲ ವಿದ್ಯೆಗಳನ್ನೂ ಕಲಿಯುತ್ತಾ ಬಾಲ ಭಾವವನ್ನು ತೋರಿಸುತ್ತಾ, ನೀತಿ, ಧರ್ಮ. ವೇದಾಂತ ಶಾಸ್ತ್ರಗಳನ್ನು ಸಂಗ್ರ ಹಿಸಿದವನಾಗಿ, ಅಸ್ತ್ರವಿದ್ಯಾವಿಶಾರದನಾದ ಗುರುವಿನಿಂದ ದಿವ್ಯಾಸ್ತ್ರಪ್ರಯೋಗ ಗಳನ್ನೂ ಅವುಗಳ ಉಪಸಂಹಾರ ಮಂತ್ರಗಳನ್ನೂ ತಿಳಿದು ಬಾಲಸೂರ್ಯನಂತೆ ಪ್ರಕಾಶಿಸುತ್ತಾ ದಿನದಿನಕ್ಕೂ ಅಭಿವೃದ್ಧಿಯನ್ನೈದಿ ಯೌವನವು ಪ್ರಾಪ್ತವಾ ಗಲು ಮಂತ್ರಿಪುತ್ರರೊಡನೆ ಅತ್ಯಂತ ಸ್ನೇಹವುಂಟಾಗಿ ನಾನಾವಿಧಗಳಾದ ವಿನೋ ದಗಳನ್ನು ಮಾಡುತ್ತ ತನ್ನ ತಂದೆಯ ರಾಜಾಸ್ಥಾನಕ್ಕೆ ಹೋಗಿ ಕುಳಿತುಕೊಂಡು ಸಕಲ ಧರ್ಮಾಧರ್ಮಗಳನ್ನು ಕೇಳುತಲಿದ್ದನು.

ಒಂದಾನೊಂದುದಿವಸ ಸೂರ್ಯಗುಪ್ತರಾಯನ ಸಭೆಗೆ ನಾರದಋುಷಿಯು ಬರಲು ನರೇಂದ್ರನು ಆತನಿಗೆ ಅರ್ಘ್ಯಪಾದ್ಯಾದಿ ವಿಧಿಗಳಿಂದ ಪೂಜಿಸಿ, ಎಲೈ—ಮುನಿವರ್ಯರೇ ನಿಮ್ಮದರ್ಶನದಿಂದ ನನ್ನ ಜನ್ಮವು ಸಾಫಲ್ಯವನ್ನೈದಿತು ಭೂಲೋಕದಲ್ಲಿ ವಿಚಿತ್ರವಾದ ವರ್ತಮಾನಗಳೇನಿದ್ದರೂ ದಯೆಯಿಂದ ಅರುಹಬೇಕೆಂದು ಪ್ರಾರ್ಥಿಸಲು, ಕಲಹಪ್ರಿಯನಾದ ಮಹರ್ಷಿಯು ಭೂಪಾಲನನ್ನು ಕರತು, ಎಲೈ—ಮನುಜಾಧಿಪನೇ ಹಿಮವತ್ಪರ್ವತದ ಶಿಖರದಲ್ಲಿ ಪ್ರತಿದಿನವು ರಾತ್ರಿಕಾಲದಲ್ಲಿ ಹಗಲಿನ ಸೂರ್ಯನಂತೆ ಪ್ರಕಾಶವುಳ್ಳ ಒಂದು ರತ್ನವು ಕಾಂತಿಯನ್ನುಂಟುಮಾಡುತಲಿರುವುದು, ಆ ರತ್ನದ ಬೆಳಕಿನಿಂದ ಆ ಸ್ಥಳದಲ್ಲಿ ಒಬ್ಬ ರಾಕ್ಷಸಿಯು ಸಂಚಾರಮಾಡುತ್ತಾ ಇರುವಳು, ನೇಪಾಳದೇಶದ ಅರಸನು ಆ ರತ್ನವನ್ನು ಯಾರು ತನಗೆ ತಂದುಕೊಡುವರೋ ಅವರಿಗೆ ತನ್ನ ಮಗಳಾದ ಭ್ರಮರವೇಣಿ ಎಂಬುವಳನ್ನು ಕೊಟ್ಟು ವಿವಾಹಮಾಡುವೆನೆಂದು ಸ್ವಯಂವರವನ್ನು ಸಾರಿಸಿರುವನು, ಆದರೆ ಆ ರತ್ನವನ್ನು ತರುವುದು ಕೇವಲ ಪ್ರಯಾಸವೆಂದು ನುಡಿದು ಮುನೀಂದ್ರನು ಅದೃಶ್ಯನಾದನು ಈ ವೃತ್ತಾಂತವನ್ನು ಆ ಸಭೆಯೊಳಿದ್ದ ಚಂದ್ರಗುಪ್ತನು ಕೇಳಿ, ಆ ಮಾಣಿಕ್ಯವನ್ನು ತರುವುದರಲ್ಲಾಸಕ್ತಿಯುಂಟಾಗಿ ಇದನ್ನು ತಂದೆತಾಯಿಗಳಿಗೆ ತಿಳಿಸಿದರೆ ಯತ್ನೀಕೃತಕಾರ್ಯಕ್ಕೆ ಭಂಗಬರುವುದೆಂದರಿತು ಸ್ನೇಹಿತನಾದ ಮಂತ್ರಿಪುತ್ರನೊಡನೆ ಯೋಚಿಸಿ ಇಬ್ಬರೂ ಭೂಸಂಚಾರಮಾಡಲು ಹೋಗಲೆತ್ನಿಸಿ ಅನೇಕ ಧನ, ಕನಕವಸ್ತ್ರಾಭರಣಗಳನ್ನು ತೆಗೆದುಕೊಂಡು ಕುದುರೆಗಳನ್ನೇರಿ ಅರ್ಧರಾತ್ರಿಯ ಸಮಯದಲ್ಲಿ, ಉತ್ತರದಿಗ್ಗಮನರಾಗಿ ಪೋಗುತಲಿದ್ದರು. ಬೆಳಗಾದಮೇಲೆ, ತಮ್ಮ ತಮ್ಮ ಮಕ್ಕಳನ್ನು ಕಾಣದೆ ರಾಜನು ರಾಜಪತ್ನಿಯೂ, ಮಂತ್ರಿಯು ಮಂತ್ರಿಪತ್ನಿಯೂ ಬಹಳವಾಗಿ ದುಃಖಿಸುತ್ತ ನಾಲ್ಕು ದಿಕ್ಕುಗಳಿಗೂ ದೂತರನ್ನು ಕಳುಹಿಸಿ ಹುಡುಕಿಸುತಲಿದ್ದರು. ಇತ್ತಲಾ ಚಂದ್ರಗುಪ್ತಪ್ರದೀಪರಿಬ್ಬರೂ ನಿರ್ಭಯರಾಗಿ ದಟ್ಟವಾದ ಅರಣ್ಯಗಳಲ್ಲಿ ಹೋಗುತ್ತಾ, ದುಷ್ಟಮೃಗಗಳನ್ನು ಸಂಹರಿಸುತ್ತಾ, ಮಧುರವಾದ ವನಫಲಗಳನ್ನು ಭಕ್ಷಿಸಿ ನೀರನ್ನು ಕುಡಿದು ದಾಹಶಾಂತಿಯನ್ನು ಮಾಡಿಕೊಳ್ಳುತ್ತಾ ಸೂರ್ಯನ ಕಿರಣಗಳ ಜ್ವಾಲೆಯನ್ನು ತಡೆಯಲಾರದೆ ತಮಾಲವೃಕ್ಷಗಳ ತಡಿಯಲ್ಲಿ ಕುಳಿತುಕೊಂಡು ವಿಶ್ರಾಂತಿಯನ್ನೈದುತ್ತಾ, ರಾತ್ರಿಕಾಲಗಳಲ್ಲಿ ಒಬ್ಬನು ನಿದ್ರಿಸುತಲಿದ್ದರೆ ಒಬ್ಬನು ಎಚ್ಚರದಿಂದ ಕಾಯುತ್ತಾ ಈ ರೀತಿಯಾಗಿ ಅತ್ಯಂತ ಪ್ರಯಾಸಪಟ್ಟು ಆರುತಿಂಗಳ ಕಾಲಕ್ಕೆ ನೇಪಾಳವೆನ್ನುವ ಪಟ್ಟಣವನ್ನು ಸೇರಿ ಆ ಪಟ್ಟಣದಲ್ಲಿ ಒಬ್ಬ ಅಡಿಗೆ ಕೂಲಿಯವಳ ಮನೆಯಲ್ಲಿ ಮಜ್ಜನಭೋಜನಾದಿಗಳನ್ನು ಮಾಡಿಕೊಂಡು ಮಾರ್ಗಾಯಾಸವನ್ನು ತೀರಿಸಿಕೊಳ್ಳುವಹಾಗೆ ಹತ್ತು ದಿವಸಗಳವರೆಗೂ ಅಲ್ಲಿಯೇ ವಾಸಮಾಡಿಕೊಂಡಿದ್ದರು.

ಒಂದಾನೊಂದುದಿವಸ ಅವರಿಬ್ಬರೂ ಆ ಮನೆಯ ಮುದುಕಿಯನ್ನು ನೋಡಿ ಎಲೈ—ವೃದ್ಧಳೇ ! ಈ ದೇಶಕ್ಕೆ ಹೆಸರೇನು ! ಈ ಪಟ್ಟಣವನ್ನಾಳುವ ಅರಸನು ಯಾರು ? ಈ ಪಟ್ಟಣದ ವಿಶೇಷ ಸಂಗತಿಗಳೇನು ? ಎಂಬದಾಗಿ ಕೇಳಲು ಆ ಮುದುಕಿಯು ಅಯ್ಯಾ, ಇದು ನೇಪಾಳದೇಶ, ಇದನ್ನು ಪರಿಪಾಲಿಸುವ ಧೊರೆಗೆ ಪ್ರಿಯಾಂಕನೆಂದು ಹೆಸರು, ನಮ್ಮ ಧೊರೆಗೆ ಓರ್ವ ಕುವರಿಯು ಇರುವಳು. ಅವಳ ರೂಪು, ರೇಖೆ, ಲಾವಣ್ಯಗಳನ್ನು ವರ್ಣಿಸಲು ಸೃಷ್ಟಿಕರ್ತನಾದ ಚತುರ್ಮುಖನು ಕೂಡ ಸಮರ್ಥನಲ್ಲ, ಅಂಥಾ ನಾರೀಮಣಿಗೆ ಸ್ವಯಂವರವನ್ನು ನಾಂಚಿರುವರು ಅನೇಕರು ಗರ್ವದಿಂದ ಹೋಗಿ ಆ ಮಾಣಿಕ್ಯವನ್ನು ತರಲು ಶಕ್ತಿಸಾಲದೆ ರಕ್ಕಸಿಯ ಬಾಯಿಗೆ ತುತ್ತಾದರು. ಆ ಹಿಮುಪತ್ಪರ್ವತದ ಶಿಖರದ ಮೇಲಿರುವ ಮಾಣಿಕ್ಯವು ಯಾರಿಗೆ ಲಭಿಸುವುದೋ ತಿಳಿಯದು ಇಷ್ಟೇ ನನಗೆ ತಿಳಿದಿರುವ ವರ್ತಮಾನಗಳೆಂದಳು. ಆಗಲಾ ಮಂತ್ರಿತನಯನು ಭಯಪಟ್ಟು ರಾಜನಂದನನನ್ನು ಕುರಿತು ಎಲೈ—ಸಹೋದರನೇ ನಾವು ತಂದೆತಾಯಿಗಳಿಗೆ ಹೇಳಿಬರದೆ ಬಹುದೂರದೇಶಕ್ಕೆ ಬಂದಿರುವೆವು. ಅಕಟಾ ! ಅವರು ದುಃಖವನ್ನು ಅನುಭವಿಸುತ್ತಾ ಏನಾಗಿರುವರೋ ತಿಳಿಯದು, ನಮಗಾಮಾಣಿಕ್ಯವು ಲಭಿಸುವುದೆಂದು ಕನಸಿನಲ್ಲೂ ಕೂಡ ಎಣಿಸತಕ್ಕದ್ದಲ್ಲ, ನಮ್ಮ ಸ್ವದೇಶಕ್ಕೆ ಹೋಗೋಣ ಬಾ ! ಎನಲು, ಅದಕ್ಕಾ ಚಂದ್ರಗುಪ್ತನು ಎಲೈ—ತಮ್ಮನೇ ನಾವಿಷ್ಟುದೂರದವರೆಗೂ ಬಂದು ವೃಥಾ ಹಿಂದಿರುಗಿ ಹೋಗತಕ್ಕದ್ದು ಉಚಿತವಲ್ಲ ನಮ್ಮ ನಮ್ಮ ಮನೋಭೀಷ್ಟಕಾರ್ಯವು ಸಫಲವಾಗುವುದೋ ಇಲ್ಲದೆ ವಿಫಲವಾಗುವುದೋ ಅದನ್ನು ಪರೀಕ್ಷಿಸಿ ನೋಡತಕ್ಕದ್ದೇರಾಜಧರ್ಮ ನೀನು ವ್ಯಥೆಪಡದೆ ನನ್ನೊಡನೆ ಬರುವವನಾಗೆಂದು ಹೇಳಿ ಅಲ್ಲಿಂದ ಇಬ್ಬರೂ ಪ್ರಯಾಣವಾಗಿ ಹೊರಟು ಕೆಲವು ದಿವಸಗಳಿಗೆ ಒಂದಾನೊಂದು ವಿಪಿನಮಧ್ಯದೊಳು ಏಕದಂಡ ಮುನೀಂದ್ರನ ಆಶ್ರಮವನ್ನು ಸೇರಿ ಆತನನ್ನು ಕಂಡು ಪಾದಕಮಲಗಳಿಗೆರಗಲಾಗಿ ಆ ಮುನಿ ಪೋತ್ತಮನು ಅವರನ್ನು ಸಂತೈಸಿ ಅವರು ಬಂದಿರುವ ವೃತ್ತಾಂತವನ್ನೆಲ್ಲಾ ಕೇಳಿ ಶಿರಃಕಂಪವನ್ನು ಮಾಡಿಕೊಂಡು ಎಲೈ—ರಾಜತನಯನೇ ನೀನು ಅಸಾಧ್ಯವಾದ ಕೋರಿಕೆಯನ್ನು ಅಪೇಕ್ಷಿಸಿ ಬಂದವನಾದೆ, ದೇವತೆಗಳಿಗೂ ಅಸಾಧ್ಯಳಾ ಆ ಘೋರರಾಕ್ಷಸಿಯನ್ನು ನೀನು ಜೈಸುವ ಮಾರ್ಗವಾವುದು ಲೋಕದಲ್ಲಿ ಉತ್ತಮ ಪುರುಷರು ಶಾಶ್ವತವಾದ ಮೋಕ್ಷಮಾರ್ಗಾವಲಂಬಿಗಳಾಗುವರಲ್ಲದೆ ತುಚ್ಛವಾದ ಭೂಲೋಕ ಸುಖಗಳಲ್ಲಿ ಆಸಕ್ತಿಯನ್ನಿಡರು. ನೀನು ಯೌವನಮದದಿಂದ ಸಾಕಾರ ಬ್ರಹ್ಮಸ್ವರೂಪರಾದ ತಂದೆತಾಯಿಗಳನ್ನು ನಿಸ್ಸಾರಮಾಡಿ ಈ ಮಂತ್ರಿತನಯನನ್ನು ಕರೆದುಕೊಂಡು ಘೋರವಾದ ಅಡವಿಯನ್ನು ಕುರಿತು ಬಂದಿರುವೆ, ನಿನ್ನ ತಂದೆತಾಯಿಗಳು ಕೇವಲ ದುಃಖಪರವಶರಾಗಿ ತಪಿಸುತಲಿರು

ವರು, ಆದ್ದರಿಂದ ನಿನ್ನ ಯತ್ನವು ಲಭಿಸುವುದು ಪ್ರಯಾಸವೆಂದಾತನಿಗೆ ಕೌಶಿಕ, ಧರ್ಮವಾದಿಗಳ ಚರಿತ್ರೆಯನ್ನು ತಿಳಿಸಿದವನಾಗಿ ನಿನ್ನ ರಾಜ್ಯವನ್ನು ಕುರಿತು ಹೋಗೆಂದು ಆಜ್ಞಾಪಿಸಿದನು. ತರುವಾಯ ರಾಜಪುತ್ರನು ದೀನಮುಖವುಳ್ಳವನಾಗಿ ತಪೋಧನನನ್ನು ಕುರಿತು, ಎಲೈ—ಮುನಿಪೋತ್ತಮನೇ ! ನಾನು ಪ್ರತಿಜ್ಞೆಯನ್ನು ಮಾಡಿಕೊಂಡು ಬಂದಿರುವೆನು ಕಾರ್ಯಸಾಫಲ್ಯವನ್ನೈದದೆ ಹಿಂತಿರುಗಿ ಹೋಗುವುದಕ್ಕೆ ಮನಬಾರದ ಕಾರಣ ನಿಮ್ಮಂಥಾ ಋಷಿಶ್ರೇಷ್ಠರ ದರ್ಶನವನ್ನು ಪಡೆದೆನಗೆ ಇಷ್ಟಕಾರ್ಯಾನುಕೂಲವೆಂತು ಸಿದ್ಧಿಸದೆ ಹೋಗುವುದು ತಾಯಿ ತಂದೆಗಳು ಮಾತ್ರವೇ ಸಾಕಾರಬ್ರಹ್ಮರೂಪರೆಂದು ಹೇಳುವುದಕ್ಕೆ ಕಾರಣ ವೇನು ? ಅವರಿಂದ ನಮಗೆ ಇಷ್ಟಸಿದ್ಧಿಯುಂಟಾಗುವ ಮಾರ್ಗವಾವುದು ಅದನ್ನು ಸರಿಯಾಗಿ ನನಗೆ ಬೋಧಿಸಬೇಕೆಂದು ಪ್ರಾರ್ಥಿಸಲಾಗಿ ತಪೋಧನನು ಕೇವಲ ಸಂತೋಷಪಟ್ಟು, ಎಲೈ—ರಾಜತನಯನೇ ಈವರೆಗೆ ಅನೇಕಜನ ರಾಜಪುತ್ರರು ನನ್ನ ಆಶ್ರಮಕ್ಕೆ ಬಂದು ನನ್ನ ವಾಕ್ಕುಗಳಿಗೆ ಪ್ರತ್ಯುತ್ತರಗಳನ್ನು ಕೊಡದೆ ವಿಮುಖರಾಗಿ ತೆರಳಿರುವರು, ಮತ್ತೆ ಕೆಲವರು ರಕ್ಕಸಿಗೆ ಆಹಾರಕ್ಕನುಕೂಲರಾದರು ನೀನು ಧೀರನಾದುದರಿಂದ ಇಷ್ಟಸಿದ್ಧಿಯುಂಟಾಗುವುದೆಂದು ಹೇಳಿ ಮುನಿಯು ಬೋಧಿಸಲಾರಂಭಿಸಿದನು.



ಚಂದ್ರಗುಪ್ತಮಹಾರಾಯ.



ಏಕದಂಡಮಹರ್ಷಿ.

## ಚಂದ್ರಗುಪ್ತ ಮಹಾರಾಯನಿಗೆ ಏಕದಂಡ ಮಹರ್ಷಿಯಿಂದ ಬೋಧಿಸಲ್ಪಟ್ಟ ಸಾಕಾರ ಬ್ರಹ್ಮರಹಸ್ಯ.

ಎಲೈ ರಾಜತನಯನೇ ? ಲಾಲಿಸು ಪ್ರಜ್ಞಾನಂ ಬ್ರಹ್ಮಾ, ಎನ್ನುವ ಶ್ರುತಿಯನ್ನನುಸರಿಸಿ ಚೈತನ್ಯಸ್ವರೂಪನಾದ ಆತ್ಮಾರಾಮಬ್ರಹ್ಮವು ಪಿಪೀಲಕವೇ

ಮೊದಲಾಗಿ ಬ್ರಹ್ಮಪರ್ಯಂತರವೂ, ಮೂರು ವಿಧಗಳಾದ ಶರೀರಗಳಲ್ಲಿ ಇರುವುದನ್ನು ಕುರಿತು ಶರೀರಗಳೆಲ್ಲಾ ಸಾಕಾರಬ್ರಹ್ಮಸ್ವರೂಪಗಳಾದುವು ಇದು ಸತ್ಯ, ಆದಾಗ್ಯೂ ತಂದೆತಾಯಿಗಳ ಶುಕ್ಲಶೋಣಿತ ಸಂಬಂಧಗಳಿಂದ ಜನಿಸಿ ಆದರಿಂದ ಅಭಿವೃದ್ಧಿಯನ್ನೈದುತ್ತಾ ಉತ್ತಮನಾದ ಗುರುವಿನಿಂದ ಸಕಲ ರಹಸ್ಯಗಳನ್ನು ತಿಳಿದು ಬ್ರಹ್ಮಸ್ವರೂಪವನ್ನು ತಿಳಿಯುವಕಾರಣ ತಂದೆ, ತಾಯಿ, ಗುರುವು ಈ ಮೂರುಜನಗಳೂ ಪೂಜಾರ್ಹರಾಗಿರುವರು. ಅರ್ಚನ ವಂದನಾದಿ ಪೂಜೆಗಳು ಇವರಿಗಲ್ಲದೆ ಗುಡಿಗಳಿಗೆ ಹೋಗಿ ವಿವಿಧವಾದ ದಾರು, ಲೋಹ, ಪಾಷಾಣ ರೂಪಗಳಿಂದಿರುವ ಶಿಲೆಗಳಿಗೆ ಮಾಡಿದಪೂಜೆ ಮೊದಲಾದುವುಗಳೆಲ್ಲಾ ನಿಷ್ಪ್ರಯೋಜನ ದೇವಮಾನವರಲ್ಲಿ ಯಾರಾದರೂ, ಅವರವರ ಇಷ್ಟವಾದ ಶಿವ, ಕೇಶವ ಮಂತ್ರಗಳನ್ನಾಗಲೀ ಇತರ ದೇವತೆಗಳ ಮಂತ್ರಗಳನ್ನಾಗಲೀ ಕೇವಲ ಶ್ರದ್ಧೆಯಿಂದ ಗುರುಮುಖದಿಂದ ಗ್ರಹಿಸಲ್ಪಟ್ಟು ಅಂತರ್ಮುಖವುಳ್ಳವರಾಗಿ ಪ್ರಾಣವಾಯುಗಳೊಡನೆ ಮನಸ್ಸಿಟ್ಟು ದೃಗ್ಧ್ಯಾನಗಳನ್ನು ಲಿಂಗಸ್ಥಾನದಲ್ಲಿ ನಿಲ್ಲಿಸಿ ಬ್ರಹ್ಮನನ್ನು ನಾಭಿಸ್ಥಾನದೊಳು ನಿಲ್ಲಿಸಿ ಆ ವಿಷ್ಣುದೇವರನ್ನಾದರೂ ಹೃದಯಸ್ಥಾನದಲ್ಲಿ ನಿಲ್ಲಿಸಿ ಯಾವ ದೇವರನ್ನಾದರೂ ಧ್ಯಾನಿಸುವವರಿಂದ ಅವರವರ ಶಕ್ತ್ಯಾನುಸಾರವಾದ ಪದವಿಯೂ, ಇಷ್ಟಸಿದ್ಧಿಯುಂಟಾಗುವಕಾರಣ ನೀನು ನಾರಾಯಣಾಷ್ಟಾಕ್ಷರೀಮಂತ್ರವನ್ನು ನಿಯಮವ್ರತವುಳ್ಳವನಾಗಿ ಜಪಿಸಿದರೆ ಪರಬ್ರಹ್ಮಸ್ವರೂಪನಾದ ಶ್ರೀಮನ್ನಾರಾಯಣನು ನಿನ್ನ ಇಷ್ಟಸಿದ್ಧಿಯನ್ನು ಮಾಡುವನೆಂದು ಓನ್ನಮೋ ನಾರಾಯಣಾಯ, ಎಂಬ ಮಂತ್ರವನ್ನು ಆ ಮುನಿಯು ಉಪದೇಶಿಸಿದನು, ಎಂಬದಾಗಿ ಶ್ರೀಕೃಷ್ಣನು ಹೇಳಲಾಗಿ, ಅರ್ಜುನನು ಸಂತೋಷಪಟ್ಟವನಾಗಿ, ಎಲೈ—ಮಹಾನುಭಾವನೇ ಸಾಕಾರಧ್ಯಾನಗಳುಳ್ಳ ಮನುಜ ಮಾತ್ರದವರಿಗೆ ಪದವಿಯು ಇಷ್ಟಸಿದ್ಧಿಯು ಉಂಟಾಗುತಲಿರಲಾಗಿ ನಿರಾಕಾರ ಧ್ಯಾನಗಳೇನು ನಿಮಿತ್ತಕ್ಕೆಂದು ಪ್ರಶ್ನೆಮಾಡಲಾಗಿ ಭಗವಂತನು ಕೇಳಯ್ಯಾ ಅರ್ಜುನನೇ ! ಪದವಿ ಎಂಬುವದು ಶಾಶ್ವತವಾದ ಸುಖಾನಂದವನ್ನೀಯುವದಲ್ಲವು ಅವರವರ ಲೋಕಗಳಿಗನುಸಾರವಾದ ಪದವಿಗಳು. ಇಷ್ಟಸಿದ್ಧಿಯೆಂದರೆ ಮೋಕ್ಷಾಪೇಕ್ಷೆಯೇ ಅಲ್ಲ ಅದು ದೇಹಸುಖಕ್ಕೆ ಕಾರಣಭೂತವು. ಮೋಕ್ಷಪದವಿಗೂ, ವಿದೇಹ ಕೈವಲ್ಯಕ್ಕೂ ಭೇದರಾಹಿತ್ಯಗಳಿಂದಿಗೂ ಉಂಟಾಗಲಾರವು. ಭಕ್ತಿ ವೈರಾಗ್ಯ, ಯೋಗ ಜ್ಞಾನಗಳು ಕಾರಣಸಹಿತವಾದವುಗಳಂತೆ ಮಾಡಿ, ದೇವ ಮಾನವರು ಸುಗುಣ ನಿರ್ಗುಣಗಳುಳ್ಳ ದೈವಗಳನ್ನು ಭಜಿಸಿ, ಅವರವರಿಗೆ ತಕ್ಕ ಪದವಿಗಳನ್ನು ಹೊಂದುವುದು ನಿಜವಲ್ಲದೆ ನಿರ್ಹೇತುಕಜಾಯಮಾನಕಟಾಕ್ಷವೆಂದು ಹೇಳುವುದು ವಿರೋಧಮಾರ್ಗ ಆದರೂ, ನಿರ್ಹೇತುಕವನ್ನು ಸ್ಥಾಪಿಸಿದರೆ ಗುರುಶಿಷ್ಯರು, ಹಿರಿಯರು, ಕಿರಿಯರು, ಉತ್ತಮರು, ಕನಿಷ್ಟರು, ಇವರು ಕೃತಕೃತ್ಯಗ

ಳನ್ನು ತಿಳಿಯದವರನ್ನು ಕುರಿತು ಮನುಷ್ಯರು ತಮ್ಮ ದುಷ್ಕಾರ್ಯಗಳನ್ನು ಬಿಟ್ಟು ಸನ್ಮಾರ್ಗಪ್ರವರ್ತಕರಾಗುವುದಿಲ್ಲವೆಂಬುವುದು ನಿಜ. ನಿರ್ಹೇತುಕನೆಂದರೆ ತನಗೆ ಅನ್ಯರು ತಿಳಿಯದೆ ಮೂರು ಲೋಕಗಳಲ್ಲಿಯೂ ತಾನಾಗಿಯೇ ಪರಿಣಮಿಸಿ ಪರಿಪೂರ್ಣಭಾವದಲ್ಲಿ ಭರಿತನಾಗಿರುವದೆಂದು ಹೇಳಲಾಗಿ ಇಂದ್ರನಂದನನು ಸಂತೋಷಪಟ್ಟು ಎಲೈ ಭಕ್ತಪರಾಧೀನನೇ ! ಚಂದ್ರಗುಪ್ತರಾಯನು ಇದನ್ನು ತಿಳಿವ ಬಳಿಕ ಏನುಮಾಡಿದನೋ ಅದನ್ನು ಅರುಹಬೇಕೆನಲಾಗಿ ಭಗವಂತನಿಂತೆಂದನು, ಕೇಳು ಪಾರ್ಥನೇ ! ಚಂದ್ರಗುಪ್ತರಾಯನು ತನ್ನ ಗುರುವಾದ ಏಕದಂಡ ಮಹರ್ಷಿಗೆ ನಾನಾವಿಧವಾದ ಶುಶ್ರೂಷೆಗಳನ್ನು ಮಾಡುತ್ತಾ ಕೇವಲ ವೈರಾಗ್ಯವನ್ನನುಸರಿಸಿ ಒಂದು ಸಂವತ್ಸರದವರೆಗೂ ಆ ಮಂತ್ರಪುನಶ್ಚರಣ ಮಾಡುತಲಿದ್ದದ್ದರಿಂದ ಶ್ರೀಮನ್ನಾರಾಯಣನು ಅವನಿಗೆ ಪ್ರಸನ್ನನಾಗಿ “ ಅದೃಶ್ಯಕರಣಿ ” ಎಂಬ ಮಂತ್ರವನ್ನು ಉಪದೇಶಿಸಿ ಅಂತರ್ಧಾನವಾದನು. ಬಳಿಕ ರಾಜಪುತ್ರನು ಮುನೀಂದ್ರಂಗಭಿವಂದಿಸಿ, ಶ್ರೀಮನ್ನಾರಾಯಣಮೂರ್ತಿಯು ಉಪದೇಶಿಸಿದ ಮಂತ್ರವನ್ನು ಹೇಳಲು ಮುನಿಯು ಎಲೈ ಮಗುವೇ ! ನೀನೀ ಮಂತ್ರವನ್ನು ಜಪಿಸುತ್ತಲೇ ಇದ್ದರೆ ಯಾರಿಗೂ ಕಾಣಬರುವುದಿಲ್ಲ. ಆ ರಾಕ್ಷಸಿಯ ರೂಪವನ್ನು ವಿರೂಪಮಾಡಬಹುದು, ನೀನು ಭಯವನ್ನು ಬಿಟ್ಟು ಹೋಗೆಂದಾಜ್ಞೆಯನ್ನಿತ್ತು ಕಳುಹಿದನು.

ತರುವಾಯ ಚಂದ್ರಗುಪ್ತನು ಮಂತ್ರಿಪುತ್ರನನ್ನಾಸ್ಥಳದಲ್ಲಿಯೇ ಬಿಟ್ಟು ತಾನು ಮಂತ್ರವನ್ನು ಜಪಿಸುತ್ತಾ, ಪರ್ವತವನ್ನೇರಿ ಶಿಖರವನ್ನು ಕಂಡು ಒಂದಾನೊಂದು ಪ್ರದೇಶದೊಳು ಕುಳಿತುಕೊಂಡು ಅಕಟಾ ! ಇಂದ್ರಾದಿ ದೇವತೆಗಳಿಗೂ ಸಾಧ್ಯವಲ್ಲದ ಈ ಘೋರ ರಾಕ್ಷಸಿಯನೆಂತು ಕೊಂದು ಮಾಣಿಕ್ಯವನ್ನು ಗ್ರಹಿಸುವ ಮಾರ್ಗವಾವುದೆಂದು ಯೋಚಿಸುತ್ತಲಿರುವ ಸಮಯಕ್ಕೆ ಸರಿಯಾಗಿ ರಾಕ್ಷಸಿಯು ಸೂರ್ಯಾಸ್ತಮಾನವಾದ ಬಳಿಕ ತನ್ನ ಬಿಲದೊಳಗಿನಿಂದ ಹೊರಗೆ ಬಂದು ಆ ರಾಜಕನಯನನ್ನು ಕಂಡುಹಿಡಿಯಲಾರದೆ ಆತನ ಸಮೀಪದಲ್ಲಿ ಆ ಮಾಣಿಕ್ಯವನ್ನಿಟ್ಟು ಘೋರವಾದ ಆಕಾರವನ್ನು ತಾಳ್ದು ದಿಗಂತ ವ್ಯಾಪ್ತವಾಗುವಂಥಾ ಆರ್ಭಟವನ್ನು ಮಾಡುತ್ತಾ, ಆ ಮಾಣಿಕ್ಯದ ಕಾಂತಿಯ ಬೆಳಕಿನಿಂದ ಸಂಚಾರಕ್ಕೆ ತೆರಳಿದಳು. ಚಂದ್ರಗುಪ್ತನು ರಾಕ್ಷಸಿಯ ಆಕಾರವನ್ನು ನೋಡಿ ಭಯವುಂಟಾದವನಾಗಿ ತನಗೆ ದೈವಸಹಾಯವಿರುವುದೆಂದು ಧೈರ್ಯವನ್ನೂ, ಉತ್ಸಾಹವನ್ನೂ ಹೊಂದಿದವನಾಗಿ ತನ್ನ ವಸ್ತ್ರವನ್ನು ಹನ್ನೆರಡು ಮಡಿಕೆಗಳಾಗಿ ಮಡಿಸಿ, ಆ ರತ್ನದ ಮೇಲೆ ಮುಚ್ಚಿದನು, ತಕ್ಷಣವೇ ಕತ್ತಲಾದದ್ದನ್ನು ರಾಕ್ಷಸಿಯು ಕಂಡು, ಮಾಣಿಕ್ಯವನ್ನಾರೋ ಅಪಹರಿಸಿದರೆಂದು ದಿಕ್ಕುಗಳು ಒಡೆಯುವಂತೆ ಬೊಬ್ಬಿಡುತ್ತಾ ಹಿಂತಿರುಗಿ ಬರುತ್ತಿರುವುದನ್ನು ಕಂಡು ರಾಜಪುತ್ರನು

ಧನುಷ್ಟಂಕಾರವನ್ನು ಮಾಡಿ, ಸಿಡಿಲಿನೋಪಾದಿಯಲ್ಲಿರುವ ನೂರು ಬಾಣಗಳನ್ನು ಪ್ರಯೋಗಿಸಿದನು. ಆ ಬಾಣಗಳು ರಕ್ಕಸಿಯ ವಕ್ಷಸ್ಥಲವನ್ನು ಪೊಗಲು ಅವಳು ಚಲಿಸಲಾರದೆ ಶತ್ರುವಂ ತಿಳಿಯದೆ ದೇವ ಗಂಧರ್ವರು ಮಾಡಿದ ಕಾರ್ಯವೆಂದು ಯೋಚಿಸಿ, ಆಕಾಶಕ್ಕೆ ನೆಗೆದು ನಾಲ್ಕು ದಿಕ್ಕುಗಳನ್ನೂ ನೋಡಿ ಯಾರನ್ನೂ ಕಾಣದೆ ಪುನಃ ಬರುತ್ತಿರಲು, ಆ ರಾಜಪುತ್ರನು ಅತಿ ಶೀಘ್ರವಾಗಿ ಆಗ್ನೇಯಾಸ್ತ್ರವನ್ನು ಪ್ರಯೋಗಿಸಲು ಅದನ್ನಾ ರಾಕ್ಷಸಿಯು ಕೈಯೊಳು ಹಿಡಿದುಕೊಂಡು ಆಚೆಗೆ ಬಿಸಾಡಿದಳು ರಾಜಪುತ್ರನು ಕಂಡು ಆಶ್ಚರ್ಯಭರಿತನಾಗಿ ವರುಣಾಸ್ತ್ರವನ್ನು ಪ್ರಯೋಗಿಸಿದನು, ಅದನ್ನೂ ಲಕ್ಷ್ಯಮಾಡದೆ ದಾಟಿಬರುತ್ತಿರಲು ರಾಜಪುತ್ರನು ನೋಡಿ ಓಹೋ! ನನ್ನ ದಿವ್ಯಾಸ್ತ್ರಗಳೆಲ್ಲವೂ, ನಿಷ್ಪ್ರಯೋಜನವಾಗುತ್ತಾ ಬಂದವೆಂದು ಯೋಚಿಸಿ, ಪೂರ್ವ ದಿಕ್ಕನ್ನು ನೋಡಿ ಬೆಳಗಾಗುತ್ತಾ ಬಂದಿತು, ಈ ಕಾಲವು ರಾಕ್ಷಸಿಗೆ ಶಕ್ತಿಯುಂಟಾಗುವ ಸಮಯವೆಂದರಿತು ತನ್ನ ಗುರುವನ್ನು ಮನದೊಳು ಧ್ಯಾನಿಸಿ, ನಾರಾಯಣಾಸ್ತ್ರವನ್ನು ಪ್ರಯೋಗಿಸಲಾಗಿ ಆ ಬಾಣವು ಅಘೋರವಾದ ಆಕಾರವನ್ನು ಪೊಂದಿ ಅವಳ ವಕ್ಷಸ್ಥಳದಲ್ಲಿ ಪೊಕ್ಕು ಬೆನ್ನಿನ ಮಾರ್ಗವಾಗಿ ತೂರಲು, ರಾಕ್ಷಸಿಯು ರಕ್ತಮಾಂಸಗಳನ್ನು ಕಾರುತ್ತಾ ವಿಲಪಿಲನೆ ಒದ್ದಾಡಿ ಪ್ರಾಣಗಳಂ ತೊರೆದು ಕಡೆಗೆ ಮಾನುಷಸ್ತ್ರೀ ರೂಪವನ್ನು ಧರಿಸಲಾಗಿ ಅದನ್ನು ಕಂಡು ರಾಜತನಯನು ಆಶ್ಚರ್ಯವನ್ನು ಹೊಂದಿ ಆಕೆಗೆ ನಮಸ್ಕರಿಸಿ, ಎಲೈ ತಾಯೇ! ನೀನಾರು? ರಾಕ್ಷಸಿಯ ಆಕಾರವನ್ನು ಹೊಂದಿರಲು ನಿಮಿತ್ತವೇನು? ತಿಳುಹಬೇಕೆನಲು, ಆ ಬ್ರಾಹ್ಮಣಿಯು ರಾಜೋತ್ತಮನೇ ಲಾಲಿಸು, ನಾನು ಏಕದಂಡ ಮಹರ್ಷಿಯ ಪತ್ನಿಯು, ಆ ಮುನೀಂದ್ರನ ಮಾತುಗಳಿಗೆ ಪ್ರತ್ಯುತ್ತರವನ್ನಿತ್ತಕಾರಣ ನನಗಾತನು ಶಾಪವನ್ನಿತ್ತನು. ಅದಕ್ಕಾಗಿ ನಾನು ದುಃಖಿಸಿ ಪ್ರಾರ್ಥಿಸಲು, ಆ ಮಹಾತ್ಮನು ನನ್ನ ಪ್ರಾರ್ಥನೆಯನ್ನಂಗೀಕರಿಸಿ, ಶೀಘ್ರವಲ್ಲಿಯೇ ಶಾಪವಿಮೋಚನೆಯಾಗುವುದೆಂದು ನುಡಿದನು, ಒಡನೆಯೇ ನಾನು ಘೋರವಾದ ರಾಕ್ಷಸಿಯ ಆಕಾರವನ್ನು ಹೊಂದಿ ನಿರ್ಭಯಳಾಗಿ ಮೂರುಲೋಕಗಳಲ್ಲಿಯೂ ಸಂಚರಿಸುತ್ತಾ ದೇವಲೋಕದಲ್ಲಿ ದಿವ್ಯರತ್ನಗಳಿಂದ್ಯುಕ್ತಮಾದ ದೇವಕನ್ನೆಯನ್ನೂ ನಾಗಲೋಕದಲ್ಲಿ ಮಾಣಿಕ್ಯ ಸಮೇತವಾದ ನಾಗಕನ್ನೆಯರನ್ನೂ ತಂದು ಈ ಬಿಲದಲ್ಲಿಟ್ಟು ಪೋಷಿಸುತಲಿದ್ದೆನು, ಎಲೈ ಪುಣ್ಯಾತ್ಮನೇ! ನೀನು ಆ ಕನ್ಯೆಯರನ್ನು ವಿವಾಹ ಮಾಡಿಕೊಂಡು ಸಮಸ್ತ ವಸ್ತುರತ್ನಗಳನ್ನೂ ಮಾಣಿಕ್ಯವನ್ನೂ ತೆಗೆದುಕೊಳ್ಳುವವನಾಗೆನಲು, ಆತನು ಆಶ್ಚರ್ಯವುಳ್ಳವನಾಗಿ ಗುರುಪತ್ನಿಯ ಪಾದಗಳಿಗೆರಗಿ ಆಕೆಯನ್ನು ಬಹುಪ್ರಕಾರವಾಗಿ ಸ್ತುತಿಸಿ, ಆ ಮಾಣಿಕ್ಯಮಂ ಭದ್ರವಾಗಿಟ್ಟುಕೊಂಡು ಮುನಿಪತ್ನಿ ಹಿಂದೆಯೇ ಬಿಲವಂ ಪೊಕ್ಕು ಬರಲು ಬಳಿಕ ಮುನಿಪತ್ನಿಯು ದೇವ

ನಾಗ ಕನ್ಯೆಯರಿಗೆ ತನ್ನ ವೃತ್ತಾಂತವನ್ನೆಲ್ಲಾ ತಿಳುಹಿ, ಎಲೈ ನಾರೀಮಣಿಗಳೇ ನೀವೀ ರಾಜಪುತ್ರನನ್ನು ವಿವಾಹ ಮಾಡಿಕೊಂಡು ಸುಖವನ್ನನುಭವಿಸಿರೆಂದು ಆತನ ವೃತ್ತಾಂತವನ್ನೆಲ್ಲಾ ತಿಳಿಸಲಾಗಿ ಆ ನಾರೀಮಣಿಗಳಿಗೆ ಮನೋಃ ಸಂಶಯವು ತಪ್ಪದೆ ಬಿಲದಿಂದ ಹೊರಗೆ ಬಂದು ರಾಕ್ಷಸಿಯ ಕಳೇಬರವನ್ನು ಕಂಡು ಕೇವಲ ದುಃಖವನ್ನೂ ಆಶ್ಚರ್ಯವನ್ನೂ ಹೊಂದಿ ಮುನಿಪತ್ನಿಯ ಪಾದಕಮಲಗಳಿಗೆರಗಿ ಆಕೆಯಿಂದ ಅಪ್ಪಣೆಯನ್ನು ಕೈಕೊಂಡು ಆವಳ ಅಪ್ಪಣೆಯಂತೆ ರಾಜನಂದನನನ್ನು ಗಾಂಧರ್ವ ವಿವಾಹದಿಂದ ವರಿಸಿ, ಆತನೊಡನೆ ಸಕಲ ಸುಖಗಳನ್ನನುಭವಿಸುತ್ತ ಲಿದ್ದರು. ಆ ದಿನ ರಾತ್ರಿ ಪರ್ವತಶಿಖರದಮೇಲ ಮಾಣಿಕ್ಯದ ಪ್ರಕಾಶವನ್ನು ಕಾಣದೆ ಅಮರಾಧಿಪನು ಆಶ್ಚರ್ಯವನ್ನೈದಿ ಯಾರೋ ಪುಣ್ಯಪುರುಷನು ಬಂದು ರತ್ನವನ್ನಪಹರಿಸಿ ಮುನಿಪತ್ನಿಗೆ ಶಾಪವಿಮೋಚನೆ ಮಾಡಿದನೆಂದು ಯೋಚಿಸಿ ಉತ್ಸಾಹಭರಿತನಾಗಿ ಬೆಳಗಾಗುತಲೂ ದೇವಬೃಂದನೊಡಗೂಡಿ ಆ ಗಿರಿಯ ಶಿಖರಕ್ಕೆ ಬಂದು ದೇವವಾದ್ಯಗಳನ್ನು ಬಾರಿಸುತ್ತ ಬಿಲವಂ ಪ್ರವೇಶಿಸಲು ಅಲ್ಲಿದ್ದ ಅಂಗನೆಯರೊಡನೆ ರಾಜಪುತ್ರನು ಆ ದೇವೇಂದ್ರನಿಗೆ ನಮಸ್ಕರಿಸಿ, ನಡೆದ ವೃತ್ತಾಂತವನ್ನೆಲ್ಲಾ ತಿಳುಹಿ, ಋಷಿಪತ್ನಿಯನ್ನು ತೋರಿಸಲು ಆಗ ದೇವೇಂದ್ರನು ಮುನಿಪತ್ನಿಯನ್ನು ಕೀರ್ತಿಸಿ ರಾಜತನಯನನ್ನು ಶ್ಲಾಘಿಸಿ ಋಷ್ಯಾಶ್ರಮಕ್ಕೆ ತೆರಳಿರೆಂದು ಅನುಗ್ರಹಿಸಿ, ದೇವವಿಮಾನವನ್ನಿತ್ತು ಆ ಕನ್ನೆಯರನ್ನು ಸಂತೈಸಿ, ಅಮರಪುರಿಯನ್ನು ಸಾರಿದನು.

ತರುವಾಯ ರಾಜಪುತ್ರನು ಅಲ್ಲಿದ್ದ ದಿವ್ಯತರವಾದ ರತ್ನಗಳನ್ನೂ ನಾನಾ ವಿಧಗಳಾದ ವಸ್ತುಗಳನ್ನು ವಿಮಾನದಮೇಲಿಟ್ಟುಕೊಂಡು ಹೆಂಡತಿಯನ್ನು ಋಷಿ ಪತ್ನಿಯನ್ನು ಆ ವಿಮಾನದ ಮೇಲೆ ಕುಳ್ಳಿರಿಸಿಕೊಂಡು ಅಮರಪತಿಯನ್ನು ಮನದೊಳು ನೆನೆಯುತ್ತಾ ಬಂದು ಋಷಿ ಸನ್ನಿಧಿಯನ್ನು ಸೇರಿ ನಡೆದ ವಿವರನ್ನೆಲ್ಲಾ ತಪೋಧನನಿಗೆ ತಿಳುಹಿ ಮಾಣಿಕ್ಯವನ್ನು ತೋರಿಸಿದನು. ಬಳಿಕಲಾ ಮುನಿಪತ್ನಿಯು ಗಂಡನ ಪಾದಗಳಮೇಲೆ ಬಿದ್ದು ದುಃಖಿಸುತ್ತಿರಲಾಗಿ ಆತನು ಸಂತೈಸಿ ಎಲೈ—ವಲ್ಲಭೆಯೇ ! ಲೋಕದಲ್ಲಿ ಪತಿಯ ಅಪ್ಪಣೆಯನ್ನತಿಕ್ರಮಿಸುವುದುಚಿತವೇ ಎಂದು ಹೇಳಿ ಸನ್ಮಾನಿಸಿದವನಾಗಿ ರಾಜಪುತ್ರನನ್ನು ನೋಡಿ ಎಲೈ ಪುಣ್ಯಪುರುಷನೇ ಮುಂಚಿತವಾಗಿ ನನ್ನ ಹೆಂಡತಿಯೆಂದು ನಿನಗೆ ಹೇಳದೇ ಇದ್ದುದರಿಂದಲೇ ನಿನಗೆ ಬಹಳವಾದ ಧೈರ್ಯ ಸಾಹಸಗಳುಂಟಾಗಿ ಜಯವನ್ನು ಪಡೆದವನಾದೆ, ಇಲ್ಲದಿದ್ದರೆ ವಶವಾಗದೆಂದು ಹೇಳಿ ಆ ದೇವ ನಾಗ ಕನ್ಯೆಯರಿಗೆ ವಿವೇಕವನ್ನು ಬೋಧಿಸಿ ಅಪ್ಪಣೆಯನ್ನು ಕೊಟ್ಟು ರಾಜಪುತ್ರನ ಪೂರ್ವದ ಪಟ್ಟಣಕ್ಕೆ ಕಳುಹಿದನು. ಆಗಲಾ ಚಂದ್ರಗುಪ್ತನು ಹೆಂಡತಿಯರನ್ನು ಕುದುರೆಯ ಮೇಲೆ ಕುಳ್ಳಿರಿಸಿಕೊಂಡು ಮಂತ್ರಿಪುತ್ರನು ತಾನು ನಡೆದುಬರುತ್ತಾ ಪ್ರದೀಪನಿಗೆ ತಾನು

ರಕ್ಕಸಿಯನ್ನು ಕೊಂದ ರೀತಿಯನ್ನು ದೇವಿ, ನಾಗಕನ್ನೆಯರ ವೃತ್ತಾಂತವನ್ನು
ಇಂದ್ರಾದಿ ದೇವತೆಗಳ ದರ್ಶನವನ್ನು ಹೇಳಲಾಗಿ ಆತನು ರಾಜಪುತ್ರತನ್ನು
ಬಹಳವಾಗಿ ಸ್ತುತಿಸಿ, ಆ ಮಾಣಿಕ್ಯವನ್ನು ನೋಡುವುದಕ್ಕೆ ಕಣ್ಣುಗಳು ಸಾಲಂ
ನಾನಾಪ್ರಕಾರವಾಗಿ ವರ್ಣಿಸಿದನು, ಬಳಿಕ ಅತ್ಯಂತ ಸಂತೋಷದಿಂದೆಲ್ಲರು
ಮಾರ್ಗಾಯಾಸವನ್ನು ಕಾಣದವರಾಗಿ ನೇಪಾಳ ದೇಶಕ್ಕೆ ಬಂದು ಮೊದಲ
ತಾವು ಇಳಿದಿದ್ದ ಅಡಿಗೆ ಕೂಲಿಯವಳ ಮನೆಯಲ್ಲಿಯೇ ಇಳಿದು ಮಜ್ಜನ ಭೋ
ನಾದಿಗಳನ್ನು ಮಾಡಿದರು, ಚಂದ್ರಗುಪ್ತನು ತನ್ನ ಹೆಂಡತಿಯರಿಗೆ ನೇಪಾ
ದೇಶಾಧಿಪನ ಪುತ್ರಿಯ ವರ್ತಮಾನವನ್ನೆಲ್ಲಾ ಹೇಳಿ ಇನ್ನು ನಿಮ್ಮ ಮನೋಭ
ಪ್ರಾಯಗಳು ಯಾವರೀತಿಯಾಗಿರುವುವೆನಲು, ಆ ನಾರೀರತ್ನಗಳು ಮುಗುಳ
ನಗೆಯುಳ್ಳವರಾಗಿ ಗಂಡನಿಗೆ ನಮಸ್ಕರಿಸಿ ಪ್ರಾಣೇಂದ್ರನೇ ನಿಮ್ಮ ಅಪ್ಪಣೆ
ವ್ಯತಿರಿಕ್ತವಾಗಿ ನಡೆಯುವವರಲ್ಲ, ನೀವಾ ಕನ್ಯೆಯ ನೋಡಿದನಂತರ ನಿಮ್ಮಿಷ್ಟ
ದಂತೆ ನಡೆಯಬಹುದೆನಲಾಗಿ ರಾಜತನಯನು ಒಳ್ಳೇದೆಂದು ಶೃಂಗಾರಬಾಣ
ನಾಗಿ, ಮಾಣಿಕ್ಯವನ್ನು ತೆಗೆದುಕೊಂಡು ಹಗಲು ಮೂರು ಜಾವದ ಹೊತ್ತಿ
ನೊಳು ಅದೃಷ್ಯಕರಣಿ ಎಂಬ ಮಂತ್ರವನ್ನು ಜಪಿಸುತ್ತಾ ಯಾರಿಗೂ ಕಾಣಿ
ದಂತೆ ಏಳು ಅಜಾರಗಳನ್ನು ದಾಟ ಆ ಭ್ರಮರವೇಣಿಯ ಅಂತಃಪುರಕ್ಕೆ ಹೋ
ದಿವ್ಯ ವಸ್ತ್ರಾಭರಣಗಳನ್ನು ಧರಿಸಿಕೊಳ್ಳುತ್ತಲಿರುವ ಆ ಕಮಲಾಕ್ಷಿಯನ್ನು ಕಂಡ
ಅವಳ ರೂಪುರೇಖಾಲಾವಣ್ಯಗಳಿಗೆ ಆನಂದವನ್ನೈದಿ ಮನ್ಮಥವಿಕಾರ ಪರವ
ನಾಗಿ ಸಾವಿರಾರು ದಾಸೀಜನಗಳ ಮಧ್ಯದಲ್ಲಿ ದೇದೀಪ್ಯಮಾನಳಾಗಿರುವ
ನಾರೀರತ್ನವನ್ನಾಲಿಂಗಿಸಿ ಮುದ್ದಾಡಿದನು. ಆ ಕಮಲಾಕ್ಷಿಗೆ ಶರೀರವೆಲ್ಲಾ
ಕಂಪಾಯಮಾನವಾಗಿ ತನ್ನ ದೂತಿಯರನ್ನು ನೋಡಿ ಎಲ್ಲೆ— ದೂತಿಯರೇ
ನನ್ನನ್ನು ಓರ್ವ ಪುರುಷನು ಆಲಿಂಗಿಸಿ ಮುದ್ದಾಡಿದನು ಆತನ ಆಕಾರ ಮಾತ್ರ
ನನಗೆ ಕಾಣಿಸಲಿಲ್ಲ. ಇದೇನಾಶ್ಚರ್ಯವೆಂದು ನುಡಿಯಲಾ ದೂತಿಯರ
ನಗುತ್ತಾ, ಎಲ್ಲೆ—ರಾಜಕನ್ಯಾರತ್ನವೇ ನಿನ್ನ ಅಂತಃಪುರಕ್ಕೆ ಒಂದು ಗಂ
ನೊಣವೂ ಕೂಡ ಬರಬಾರದಂತೆ ನಿನ್ನ ತಂದೆಯು ಏಳುಉಕ್ಕಡದ ಕಾವಲ
ಇಟ್ಟಿರುವನು, ಎಲ್ಲೆ—ಅಂಗನೆಯೇ ನಿನಗೆ ಪ್ರಾಪ್ತವಾಗಿರುವ ಯೌವನ ಮದ
ದಿಂದ ನಿನಗೆ ಈ ಪ್ರಕಾರ ತೋರುವುದು, ಇದಕ್ಕೆ ನೀನು ಭಯಪಡಬೇಡ
ವೆನಲು, ರಾಜಪುತ್ರಿಯು ನಿಜವೆಂದು ನಂಬಿ ಅಂತಃಪುರಮಂ ಸಾರ್ದು ದೂತಿಯ
ರೊಡನೆ ವಿನೋದಕರವಾದ ಆಟಗಳನ್ನಾಡುತ್ತಲಿದ್ದಳು ಅಷ್ಟರಲ್ಲಿಯೇ ಚಂದ್ರ
ಗುಪ್ತನು ಆ ಇಂದುಮುಖಿಯ ಸೆರಗನ್ನೆಳೆದು ಅಧರೋಷ್ಟ ಪಾನವಮಾಡಲಾಗಿ
ರಾಜತನಯಳು ಓಹೋ ದೂತಿಯರೇ ಇದೇನೋ ಆಶ್ಚರ್ಯವಾಗಿರುವುದೆಂದ
ಸಂಗತಿಯನವರೊಡನೆ ತಿಳುಹಲಾಗಿ ಅವರು, ಎಲ್ಲೆ—ನಾರೀಮಣಿಯೇ ಇದ

ಶುಕವಾಹನನಾದ ಅನಂಗಚೇಷ್ಟೆಯಲ್ಲದೆ ಮತ್ಯಾರೂ ಇಲ್ಲಿಗೆ ಬರತಕ್ಕವರಿಲ್ಲ ವೆಂದು ಹೇಳಿ ಅವಳನ್ನು ಮಜ್ಜನಶಾಲೆಯನ್ನೈದಿಸಿ ಪನ್ನೀರು ಸ್ನಾನವನ್ನೆಸಗಿ ಭಯಪಟ್ಟಿರುವಳೆಂದು ಮಂತ್ರ ತಂತ್ರಗಳನ್ನು ಮಾಡಿಸಿ ವಿಭೂತಿಯನ್ನಿಟ್ಟು ದೃಷ್ಟಿಯಂ ತೆಗೆದು ಕರ್ಪೂರವೀಳೆಯವನ್ನಿತ್ತು ರಾಜಕನ್ಯಾರತ್ನವೇ ಭಯಪಡ ಬೇಡವೆಂದು ಸಮಾಧಾನಪಡಿಸಿ ಈಕೆಯ ಶಯನಗೃಹಕ್ಕೆ ಸೇರಿಸಿ ವಿವಿಧ ಫಲ ಭಕ್ಷ್ಯಗಳನ್ನಿತ್ತು ಸಂತೈಸುತ್ತಲಿದ್ದರು. ಆಗಲಾ ರಾಜಪುತ್ರನು ರಾಜತನಯಳ ಕೈಯೊಳು ದೂತಿಯರು ಕೊಟ್ಟಿದ್ದ ಫಲಭಕ್ಷ್ಯಗಳನ್ನು ಕಿತ್ತುಕೊಳ್ಳುತ್ತಲಿರಲಾಗಿ ಅದಕ್ಕಾ ಸುಂದರಿಯು, ಎಲೈ—ದೂತಿಯರೇ ಏನೋ ಆಶ್ಚರ್ಯಕರವಾಗಿರ್ಪುದು. ನನ್ನ ಕೈಗಳಲ್ಲಿದ್ದ ಫಲಭಕ್ಷ್ಯಗಳನೊಂದೊಂದಾಗಿ ಯಾರೋ ಕಿತ್ತುಕೊಂಡರು ಇದೇ ಅದ್ಭುತವಾಗಿರುವದರಿಂದ ನನಗೇನೂ ತೋರುವುದಿಲ್ಲವೆಂದು ನುಡಿಯ ಲಾಗಿ, ದೂತಿಯರು ತಾಯೇ ನೀನು ಬೆದರಿ ಇರಬಹುದು ಕೆಲವು ಹೊತ್ತು ಮಲಗಿ ನಿದ್ರೆಮಾಡಿದರೆ ತರುವಾಯ ವಿಕಾರಗಳೊಂದೂ ಉಂಟಾಗುವುದಿಲ್ಲ ವೆಂದು ನುಡಿದು ಅವಳನ್ನು ಹಾಸಿಗೆಯ ಮೇಲೆ ಮಲಗಿಸಿ ಗವಾಕ್ಷಗಳನ್ನು ಮುಚ್ಚಿ ಬಾಗಿಲನ್ನು ಬಂಧಿಸಿ ತಾವು ಹೊರಗೆ ಬಂದು ಹಲವು ಬಗೆಯಾಗಿ ಆಲೋಚಿಸುತ್ತಲಿದ್ದರು. ಆಗಲಾ ಚಂದ್ರಗುಪ್ತನು ರಾಜಪುತ್ರಿಯ ಪಕ್ಕದಲ್ಲಿ ಕುಳಿತುಕೊಂಡು, ಎಲೈ—ಪ್ರಾಣಕಾಂತೆಯೇ ನನ್ನನ್ನು ಪಿಶಾಚವನ್ನಾಗಿ ಅರಿಯ ಬೇಡ, ಘೋರರಾಕ್ಷಸಿಯನ್ನು ಕೊಂದು ಲೋಕೋತ್ತಮವಾದ ಮಾಣಿಕ್ಯವನ್ನು ತಂದಿರುವ ರಾಜತನಯನು ನಾನು ನನ್ನ ಮಹಿಮೆಯಿಂದ ನಿನ್ನ ಕಣ್ಣುಗಳಿಗೆ ನಾನು ಕಾಣಿಸದೆ ಇರುವೆನು ಮಾಣಿಕ್ಯವನ್ನು ನೋಡೆಂದು ರತ್ನವನ್ನು ಹೊರಗೆ ತೆಗೆಯಲು, ಅದನ್ನು ನೋಡಿದಮಾತ್ರದಿಂದಲೇ ಆ ಲತಾಂಗಿಯು ಸಮೀಪ ದೊಳು ಕಂಡ ಮಿಂಚಿನ ರಭಸದಂತೆ ಕಣ್ಣುಗಳನ್ನು ಸ್ವಲ್ಪ ಹೊತ್ತು ಮುಚ್ಚಿ ಕೊಂಡು ಆ ಮೇಲೆ ಮೆಲ್ಲಗೆ ತೆಗೆದು ಪಕ್ಕದೊಳಿರುವ ರಾಜೇಂದ್ರತನಯನನ್ನು ನೋಡಿ ಆನಂದವನ್ನೈದಿ ಪಟ್ಟಮಂಚದಿಂದ ಕಳಗಿಳಿದು ಆ ಮಹಾತ್ಮನಿಗ ನಮಸ್ಕರಿಸಿ, ಎಲೈ—ಮಹಾನುಭಾವನೇ! ಇಲ್ಲಿಗೆ ಹದಿನೈದು ದಿವಸಗಳಿಂದ ಈ ಮಾಣಿಕ್ಯದ ಪ್ರಕಾಶವು ನನ್ನ ಅಂತಃಪುರದ ಮೇಲೆ ಬೀಳದೆ ಇರುವುದನ್ನು ಕುರಿತು, ನನ್ನ ತಂದೆಯು ನಾನಾಪ್ರಕಾರವಾಗಿ ಯೋಚಿಸುತಲಿದ್ದನು. ಎಲೈ— ತೇಜಸ್ವಿಯೇ ಮಹಾತ್ಮನೇ ನನ್ನ ಭಾಗ್ಯೋದಯದಿಂದ ನಿನ್ನನ್ನು ಸೇರಿದವಳಾದೆ ನೆಂದು ಬಹುಪ್ರಕಾರವಾಗಿ ಆತನನ್ನು ಶ್ಲಾಘನೆಮಾಡಿ ಆತನ ವೃತ್ತಾಂತವನ್ನೂ ಮಾಣಿಕ್ಯವನ್ನು ತಂದ ರೀತಿಯನ್ನೂ ದೇವನಾಗಕನ್ಯೆಯರ ವೃತ್ತಾಂತವನ್ನೂ ಕೇಳಿ ಆಶ್ಚರ್ಯವನ್ನು ಹೊಂದಿ ಪುಳಕಾಂಕಿತ ಶರೀರಳಾದ ಆತನ್ವಿಯು ರಾಜಪುತ್ರ ನೊಡನೆ ಭೋಗಿಸಲಾನಂದಿಸಿದಳು, ಆಗಲಾ ರಾಜಪುತ್ರನು ಬಿಸರುಹದಳಾಕ್ಷಿ

ಯನ್ನು ಮುದ್ದಿಸಿ, ಎಲೈ—ಪ್ರಾಣಕಾಂತೆಯೇ ನಾಳೇ ದಿವಸಕ್ಕೆ ಈ ರತ್ನವನ್ನು ನಿನ್ನ ತಂದೆಗೆ ತೋರಿಸಿ ಬಳಿಕ ನಿನ್ನನ್ನು ವಿವಾಹ ಮಾಡಿಕೊಳ್ಳುವೆನೆಂದು ಹೇಳಿ ಆ ಇಂದುವದನೆಯನ್ನು ಸಂತೋಷಪಡಿಸಿ ಅಲ್ಲಿಂದ ಬಿಡದಿಗೆ ಬಂದು ದೇವಕನ್ಯೆಯರಿಗೆ ನಡೆದ ಸಮಾಚಾರವನ್ನೆಲ್ಲಾ ತಿಳುಹಿಸಿದನು.

ತರುವಾಯ ದೇವ ನಾಗಕನ್ನೆಯರು, ತಮ್ಮ ವಲ್ಲಭನ ಇಷ್ಟಪ್ರಕಾರ ಸಮ್ಮತಿಸಿದವರಾಗಿ ಆತನಿಗೆ ದಿವ್ಯ ವಸ್ತ್ರಾಭರಣಗಳನ್ನು ಅಲಂಕಾರವಾಡಿ ರಾಜ ಸಭೆಗೆ ಹೋಗಿ ಬರಬಹುದೆಂದು ಹೇಳಲಾಗಿ, ಇಳೆಯೊಡೆಯನ ತನಯನು ತನ್ನ ಸ್ನೇಹಿತನಾದ ಮಂತ್ರಿತನಯನನ್ನು ದೇವನಾಗಕನ್ನೆಯರ ಸಮೀಪದಲ್ಲಿರುವಂತೆ ಹೇಳಿ ರಾಜನ ಸಭೆಯನ್ನು ಹೊಕ್ಕು ಅಲ್ಲಿ ಸಕಲ ಮರ್ಯಾದೆಗಳನ್ನು ಸ್ವೀಕರಿಸಿ ಉಚಿತವಾದ ಆಸನದಲ್ಲಿ ಕುಳಿತುಕೊಂಡು ರಾಜೋತ್ತಮನೇ ಹಿಮವತ್ಪರ್ವತದ ಶಿಖರದಮೇಲಿದ್ದ ಮಣಿಕ್ಯವನ್ನು ತಂದಿರುವೆನೆಂದು ಹೇಳಿ ಆ ರತ್ನವನ್ನು ಹೊರಗೆ ತೆಗೆದನು. ಆಗಲಾ ಮಾಣಿಕ್ಯದ ಕಾಂತಿಯನ್ನು ನೋಡಲಾರದೆ ರಾಜನು ಆತನ ಸಭಿಕರು, ತಮ್ಮತಮ್ಮ ಕಣ್ಣುಗಳನ್ನು ಮುಚ್ಚಿಕೊಂಡಿದ್ದು ಸ್ವಲ್ಪಹೊತ್ತಿನ ಮೇಲೆ ಕಣ್ಣುಗಳನ್ನು ತೆರೆದು ಬಹಳವಾದ ಆನಂದವನ್ನೈದಿ ರಾಜತನಯನನ್ನಾರಾಜನು ಆಲಿಂಗಿಸಿ, ಎಲೈ—ಪುಣ್ಯಪುರುಷನೇ ! ನಿನ್ನನ್ನು ನೋಡಿದರೆ ಪರಾತ್ಪರನಾದ ಶ್ರೀಮನ್ನಾರಾಯಣನನ್ನು ಕಂಡಂತಿರುವುದು. ನನ್ನ ಭಾಗ್ಯವನ್ನೆಷ್ಟೆಂದು ವರ್ಣಿಸಲಿ ನಿನ್ನ ತಂದೆತಾಯಿಗಳನ್ನು ಮತ್ತು ನೀನು ರಕ್ಕಸಿಯನ್ನು ಕೊಂದು ಮಾಣಿಕ್ಯವನ್ನು ತಂದು ರೀತಿಯನ್ನು ತಿಳಿಸೆನಲು ಆ ರಾಜತನಯನು ಸಕಲ ವೃತ್ತಾಂತಗಳನ್ನು ಕ್ರಮವಾಗಿ ತಿಳುಹಿಸಿದನು. ಆಗ ಮಾನವೇಂದ್ರನು ಬಾಲವನ್ನು ತುಳಿದ ಸರ್ಪದೋಪಾದಿಯಲ್ಲಿ ಭುಸುಗುಟ್ಟುತ್ತಾ ರಕ್ತಾಂತಲೋಚನನಾಗಿ, ಎಲೈ ಮಂತ್ರಿಪ್ರಧಾನ ಸಾಮಾಜಿಕರೇ ! ಈ ಅದ್ಭುತ ಕಾರ್ಯವನ್ನು ಕೇಳಿದಿರಾ ! ಇಲ್ಲಿಗೆ ಏಳುತಲೆಗಳಿಂದಲೂ ನಮಗೂ ಮಗಧದೇಶದ ರಾಜರಿಗೂ ಶತ್ರುತ್ವವುಂಟಾಗಿ ಅವರ ಹಿರಿಯರು ನಮ್ಮ ದೇಶದಲ್ಲಿಯೂ ನಮ್ಮ ಪೂರ್ವೀಕರು ಅವರ ದೇಶದಲ್ಲಿಯೂ ವೈರ ಕಾರಣದಿಂದ ಮೃತಿಯನ್ನೈದಿರುವುದನ್ನು ನೀವು ಕೇಳಿ ಅರಿಯಿರಾ ! ನಾವೀಗ ಮಾಡತಕ್ಕದ್ದೇನು ನೀನು ಸ್ವಯಂವನ್ನು ಸಾರಿಸಿರುವುದರಿಂದ ಆ ಭಾಗದಲ್ಲಿ ವಾಗ್ದಾನಕ್ಕೆ ತಪ್ಪದೇ ನಮ್ಮ ಪುತ್ರಿಯನ್ನು ಈತಂಗಿತ್ತು ವಿವಾಹವನ್ನು ನಡೆಸುವುದೆ ಸತ್ಯ ಆದಾಗ್ಯೂ ಈತನ ತಂದೆಯು ನಮಗೆ ಸಮಾಧಾನ ಪತ್ರಿಕೆಯನ್ನು ಕಳುಹಿಸುವಂತೆ ಏರ್ಪಡಿಸಬೇಕು, ಇದಕ್ಕಾಗಿ ಆ ರಾಜತನಯನನ್ನು ನಾವು ಕಾರಾಗೃಹದೊಳಿಟ್ಟಿರುವಂತೆ ಕಾಗದಗಳನ್ನು ಬರೆದು ಈತನ ತಂದೆಯ ಬಳಿಗೆ ಕಳುಹಿದರೆ, ಆತನು ಮಗನಮೇಲಣ ವ್ಯಾಮೋಹ

ದಿಂದ ನಮಗೆ ವಿಧೇಯನಾಗಿ, ಬರುವನೆಂದು ನುಡಿಯಲು ಸಭಿಕರೆಲ್ಲರೂ ಇದು ಒಳ್ಳೆಯ ಉಪಾಯವೆಂದು ಗೋಣಗುಟ್ಟುತಲಿದ್ದರು.

ಆ ಮಾತುಗಳನ್ನು ಕೇಳಿದ ಚಂದ್ರಗುಪ್ತನು ಪ್ರಳಯಕಾಲದ ರುದ್ರನಂತೆ ಕಣ್ಣುಗಳಲ್ಲಿ ಕಿಡಿಗಳನ್ನು ಕೆದರುತ್ತಾ ಕೋಪಾಟೋಪದಿಂದ ಆ ರಾಜನನ್ನು ಕುರಿತು, ಎಲೈ ನರೇಂದ್ರನೇ ನನ್ನನ್ನು ಕಾರಾಗೃಹದೊಳಿಡುವುದಕ್ಕೆ ದೇವತೆಗಳಿಂದಲೂ ಆಗಲರಿಯದು, ನೀವು ನಿಮ್ಮ ಸೈನಿಕರೂ ನನಗೆ ಎಷ್ಟುಮಾತ್ರ, ನನ್ನ ತಂದೆಯು ನಿನಗೆ ಅಧೀನನಾದಂತೆ ನೀವು ಸ್ವಪ್ನದಲ್ಲಿಯೂ ಎಣಿಸಬೇಡಿ, ನಿಮಿಷ ಮಾತ್ರದಲ್ಲಿ ಈ ಸಭಿಕರನ್ನೂ ನಿಮ್ಮನ್ನೂ ಭಂಗಪಡಿಸಿ ನಿಮ್ಮ ಪುತ್ರಿಯನ್ನು ಕರೆದುಕೊಂಡು ಹೋಗುವೆನು, ನನ್ನ ಪ್ರಭಾವವನ್ನು ನೀವು ಕಾಣಿರೆಂದು ಮಂತ್ರವನ್ನು ಜಪಿಸಿ ಅವರಿಗೆ ಅದೃಶ್ಯನಾಗಿ ರಾಜನ ಕಿರೀಟವನ್ನೂ ಸಭಿಕರ ಕಿರೀಟಗಳನ್ನೂ ಭೂಮಿಯಮೇಲೆ ಕೆಡಹಿ ಭ್ರಮರವೇಣಿಯ ಅಂತಃಪುರವನ್ನೈದಿ ಅವಳಿಗೀವೃತ್ತಾಂತವನ್ನೆಲ್ಲಾ ತಿಳುಹಿಸಿದನು. ಆಗಲಾ ಅಂಗನೆಯು ಭಯಪಟ್ಟವಳಾಗಿ ವಲ್ಲಭನ ಕೋಪವನ್ನು ಸಮಾಧಾನಪಡಿಸಿ, ಅವನನ್ನು ಅಲ್ಲಿಯೇ ಬಿಟ್ಟು ತಾನು ತಂದೆಯ ಅಂತಃಪುರಕ್ಕೆ ಹೋಗುತಲಿದ್ದಳು, ಇಷ್ಟರೊಳಗೆ ರಾಜನು ತನ್ನ ಕಿರೀಟವು, ಸಭಿಕರ ಕಿರೀಟಗಳೂ ಭೂಮಿಯ ಮೇಲೆ ಬಿದ್ದಿರುವುದಕ್ಕಾಗಿ ದುಃಖಪಡುತ್ತಾ ರಕ್ತನೇತ್ರಗಳುಳ್ಳವನಾಗಿ ರಾಜಪುತ್ರನನ್ನು ಕಾಣದೆ ಕೇವಲ ದುಃಖದಿಂದ ಸಭಿಕರೂ ತಾನೂ ಅಲ್ಲಿಂದ ಎದ್ದು ತಮ್ಮತಮ್ಮ ನಿವಾಸಸ್ಥಾನಗಳಿಗೆ ತೆರಳುತಲಿದ್ದರು. ಭ್ರಮರವೇಣಿಯು ತಂದೆಯ ಬಳಿಗೆ ಹೋಗಿ ವಿಚಾರಿಸಿ ಮಧುರವಾಕ್ಯಗಳಿಂದ ಆತನನ್ನು ಸಮಾಧಾನಗೊಳಿಸಿ ತಂದೆಯೇ! ಆ ರಾಜಪುತ್ರನು ಕೇವಲ ಮಾನವನೆಂದು ಭಾವಿಸಬೇಡ, ಕೇವಲ ಮಹಿಮೆಯುಳ್ಳವನಾಗಿಯೂ, ಏಕದಂಡ ಮಹರ್ಷಿಯ ಅನುಗ್ರಹದಿಂದ ಘೋರರಕ್ಕಸಿಯನ್ನು ಕೊಂದು ದೇವ ನಾಗಕನ್ಯೆಯರನ್ನು ವಿವಾಹ ಮಾಡಿಕೊಂಡು, ಇಂದ್ರಾದಿ ದೇವತೆಗಳಿಂದ ಕೀರ್ತಿಸಲ್ಪಟ್ಟು, ಮಾಣಿಕ್ಯವನ್ನು ತಂದ ಮಹಾನುಭಾವನಾಗಿಯೂ ಇರುವನು, ನಿನ್ನೆಯದಿವಸ ಹಗಲು ಮೂರು ಜಾವದ ಹೊತ್ತಿನಲ್ಲಿ ಅದೃಶ್ಯರೂಪವನ್ನು ಸ್ವೀಕರಿಸಿ, ನನ್ನ ಅಂತಃಪುರಕ್ಕೆ ಬಂದು ಕಣ್ಣಿಗೆ ಕಾಣಿಸದೆ ಬಹಳವಾದ ಮಾಯೆಗಳನ್ನು ನಡೆಸಿದನೆಂದು ಸಕಲ ವೃತ್ತಾಂತವನ್ನು ತಿಳುಹಿಸಿ ತಂದೆಯೇ! ಲೋಕದಲ್ಲಿ ಹೆಣ್ಣು ಮಕ್ಕಳನ್ನು ಹಡೆದವರಿಗೆ ಪೌರುಷ ಶಕ್ತಿಯು ಇರುವುದೇ ಇದನ್ನು ನೀನು ಕಾಣೆಯಾ ಆ ಮಹಾತ್ಮನಿಗೆ ನನ್ನನ್ನು ಕೊಟ್ಟು ವಿವಾಹವನ್ನು ಮಾಡೋಣದರಿಂದ ನಮ್ಮ ವಂಶವೆಲ್ಲಾ ಪಾವನವಾಗುವದಲ್ಲದ ಲೋಕದಲ್ಲಿ ಕೀರ್ತಿಪ್ರತಿಷ್ಠೆಗಳು ಸಂಭವಿಸುವವು. ಇಲ್ಲದಿದ್ದರೆ ಮಾನನಾಶವೂ ಪ್ರಾಣನಾಶವೂ ಉಂಟಾಗುವುದು. ನನ್ನ ಮಾತುಗಳನ್ನು ಕೇಳಿ ತ್ವರಿತವಾಗಿ

ಆತನ ಬಿಡದಿಗೆ ಹೋಗಿ ಉತ್ತಮವಾದ ಮಾತುಗಳಿಂದಾತನನ್ನು ಸಮಾಧಾನ ಪಡಿಸಿ, ಆ ದೇವ ನಾಗಕನ್ಯೆಯರೊಂದಿಗೆ ನಮ್ಮ ಅಂತಃಪುರಕ್ಕೆ ಕರೆತರುವನಾಗೆನಲು, ಆ ಮಾತಿಗೆ ಮಂಡಲಾಧಿಪನು ಮಂತ್ರಿ ಪ್ರಧಾನಿಗಳನ್ನು ಕರೆಸಿ ತನ್ನ ಪುತ್ರಿಯ ವಾಕ್ಯಗಳನ್ನೆಲ್ಲಾ ಅವರಿಗೆ ತಿಳುಹಿ, ಅವರನ್ನು ಕರೆದುಕೊಂಡು, ರಾಜಪುತ್ರನಿರುವ ಬಿಡದಿಗೆ ಹೋಗಿ, ಆ ಮಹಾತ್ಮನನ್ನು ಆಲಿಂಗನ ಮಾಡಿಕೊಂಡು ಎಲೈ ಪುಣ್ಯಪುರುಷನೇ! ನಾನು ಪೂರ್ವದ ಮತ್ಸರವನ್ನೆಣಿಸಿ ತಕ್ಕ ಉಪಾಯವನ್ನು ಹುಡುಕಬೇಕೆಂದು ನುಡಿದ ಮಾತ್ರದಿಂದಲೇ ನೀನು ಕೋಪವನ್ನು ಹೊಂದಿ ನನಗೂ ಸಭಿಕರಿಗೂ ಪರಾಭವವನ್ನುಂಟುಮಾಡಿದೆ, ನಿನ್ನ ಮಹಿಮೆಯನ್ನು ತಿಳಿಯುವುದಕ್ಕೆ ನಾವು ಸಮರ್ಥರಲ್ಲ, ನಿನ್ನ ಇಷ್ಟದಂತೆಯೇ ನಡೆಸುವೆನು ನಮ್ಮ ಪಟ್ಟಣಕ್ಕೆ ಬರಬೇಕೆಂದು ಪ್ರಾರ್ಥಿಸಲಾಗಿ ಆ ರಾಜಪುತ್ರನು ಎಲೈ ಸಾರ್ವಭೌಮನೇ! ನಾನು ಪೂರ್ವದ ವೈರವನ್ನು ಅರಿಯದವನಾಗಿಯೇ ಬಂದೆನು ನಾನೀಗ ನಿನ್ನ ಪುತ್ರಿಯನ್ನು ಮದುವೆ ಮಾಡಿಕೊಂಡರೆ ನನ್ನ ತಂದೆಯು ನನ್ನ ಮುಖಾವಲೋಕನವನ್ನು ಮಾಡನು, ದೇವನಾಗಕನ್ಯೆಯರೀರ್ವರು ಭಾರ್ಯೆಯರು ನನಗಿರುವರು ನಿನ್ನ ಪುತ್ರಿಯನ್ನು ಇಷ್ಟಬಂದವರಿಗೆ ಕೊಟ್ಟು ಮದುವೆಯನೆಸಗೆನಲು ಆ ನರಾಧಿಪನು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ನೀನೀರೀತಿಯೊಳುಸುರಬಹುದೆ ನನ್ನ ಪುತ್ರಿಯ ಪ್ರಾಣಗಳನ್ನೂ ನನ್ನ ಕೀರ್ತಿಯನ್ನೂ ಕಾಪಾಡಬೇಕೆಂದು ಪ್ರಾರ್ಥಿಸಿ, ಆತನನ್ನು ಸಮಾಧಾನಪಡಿಸಿ, ರಾಜಪುತ್ರನನ್ನೂ ದೇವ ನಾಗಕನ್ಯೆಯರನ್ನೂ ಪುರದೊಳಕ್ಕೆ ಕರೆದುಕೊಂಡು ಬಂದು ಮುಹೂರ್ತವನ್ನು ನಿಶ್ಚೈಸಿ, ಮರ್ಯಾದಾರ್ಹನಾದ ಪುರುಷನೊಂದಿಗೆ ಮಗಧಾಧಿಪನ ಬಳಿಗೆ ಶುಭಪತ್ರಿಕೆಗಳನ್ನು ಕಳುಹಿ ಪಟ್ಟಣವನ್ನು ಶೃಂಗರಿಸುತಲಿದ್ದನು.

ಇತ್ತ ಶುಭಪತ್ರಿಕೆಯನ್ನು ನೋಡಿದ ಸೂರ್ಯಗುಪ್ತಮಹಾರಾಯನು ತನ್ನ ಪುತ್ರನ ಶುಭವಾರ್ತೆಯನ್ನು ಕೇಳಿ ಸಂತೋಷಪಟ್ಟು ನೇಪಾಳದೇಶದ ದೊರೆಯು ನಮಗೆ ಒಳಗಾದನೆಂದು ತನ್ನ ಮಂತ್ರಿ ಪ್ರಧಾನ ಸಾಮಾಜಿಕರಿಗೆ ತಿಳುಹಿಸಿ, ಮಂತ್ರಿಯನ್ನು ರಾಜ್ಯದೊಳಿಟ್ಟು ಹೆಂಡತಿಯನ್ನೂ ಬಂಧುಮಿತ್ರರನ್ನೂ ಲಕ್ಷಚತುರಂಗಬಲವನ್ನೂ ಸಂಗಡ ಕರೆದುಕೊಂಡು ನೇಪಾಳಪುರಕ್ಕೆ ಬಂದನು. ಆತನ ಬರುವಿಕೆಯನ್ನು ಕೇಳಿ ಮೀನಾಂಕರಾಯನು ಇದಿರುಗೊಂಡು ಮರ್ಯಾದೆಮಾಡಿ ಕರೆದುಕೊಂಡು ಬಂದು ಉಚಿತವಾದ ಬಿಡದಿಯೊಳಿಳಿಸಿದನು. ಚಂದ್ರಗುಪ್ತನು ದೇವ ನಾಗಕನ್ಯೆಯರೊಡನೆ ತನ್ನ ತಂದೆತಾಯಿಗಳಿಗೆ ನಮಸ್ಕರಿಸಲು ಅವರು ತನಯನನ್ನೂ ಸೊಸೆಯರನ್ನೂ ಆಲಿಂಗಿಸಿ ಮುದ್ದಾಡಿ ಸಂತೈಸಿ, ಆನಂದಪರವಶರಾಗಿ ಏಕದಂಡಮಹರ್ಷಿಯನ್ನು ಕೊಂಡಾಡಿ ಸಂತೋಷಸಮುದ್ರದಲ್ಲಿ ಮುಳುಗಿದರು. ಮೀನಾಂಕಮಹಾರಾಯನು ಶುಭದಿನದಲ್ಲಿ ಮಂಗಳವಾದ್ಯಗಳನ್ನು

ಭೋಗೋಳಿಸಿ, ದೇವ ನಾಗಕನ್ಯೆಯರ ಇಷ್ಟಪ್ರಕಾರ ಚಂದ್ರಗುಪ್ತನಿಗೆ ಭ್ರಮ್ಮ ರವೇಣಿಯನ್ನು ಕೊಟ್ಟು ಅತಿ ಸಂಭ್ರಮದಿಂದ ವಿವಾಹಮಹೋತ್ಸವವನ್ನು ನಡೆಸಿ ದನು. ತರುವಾಯ ಚಂದ್ರಗುಪ್ತನು ಆ ಪಟ್ಟಣದಲ್ಲಿ ಹದಿನೈದು ದಿವಸಗಳಿದ್ದು ಬಳಿಕ ಪ್ರಯಾಣವಾಗಿ ಹೊರಟು ಮಾವನು ಕೊಟ್ಟ ಚತುರಂಗಬಲವನ್ನು ವಿವಿಧ ವಸ್ತುವಾಹನಗಳನ್ನೂ ತೆಗೆದುಕೊಂಡು ತನ್ನ ಬಳಿಯಲ್ಲಿದ್ದ ದಿವ್ಯರತ್ನಗಲ್ಲೊಂದ ರಿಂದ ಮಾವನನ್ನು ಪೂಜಿಸಿ, ಮೂರುಜನ ಹೆಂಡತಿಯರನ್ನು ಹಿಂದಿಟ್ಟುಕೊಂಡು ತಂದೆತಾಯಿಗಳ ಸಹಿತವಾಗಿ ತನ್ನ ಪಟ್ಣಕ್ಕೆ ಬಂದು ಪುರಜನಗಳಿಗೂ ಮಂತ್ರಿ ಸಾಮಾಜಿಕರಿಗೂ ಸಂತೋಷವನ್ನುಂಟುಮಾಡಿ ತನ್ನ ಮಹಿಮಾತಿಶಯದಿಂ ಸಕಲ ದೇಶಗಳನ್ನು ಗೆದ್ದು ನವಖಂಡಮಂಡಲಾಧಿಪನಾಗಿ ರಾಜರನ್ನೆಲ್ಲಾ ತನ್ನ ಕೈಕೆಳಗೆ ತೆಗೆದುಕೊಂಡು ಅವರಿಂದ ಕಪ್ಪಕಾಣಿಕೆಗಳನ್ನು ಹೊಂದುತ್ತಾ ಚಕ್ರವರ್ತಿಯೆಂ ದೆನಿಸಿ ಧರ್ಮಗಳನ್ನು ನಾಲ್ಕುಪಾದದಮೇಲಿರಿಸಿ, ತಂದೆತಾಯಿಗಳಿಗೆ ನೇತ್ರಾನಂ ದಾದಿ ಸುಖಾನುಭವಗಳನ್ನು ಪಡಿಸುತ್ತಾ ಹಿರಿಯರನ್ನು ಪೂಜಿಸಿ, ಪ್ರದೀಪನೊ ಡನೆ ರಾಜ್ಯಭಾರವನ್ನು ಮಾಡುತ್ತಾ ಕಡೆಗೆ ದೇಹವನ್ನು ತ್ಯಜಿಸಿ ವಿಷ್ಣುಲೋಕ ದೊಳು ಲೀಲಾಮಾನುಷವಿಗ್ರಹದ ಸಾನ್ನಿಧ್ಯದೊಳು ಶಾಶ್ವತನಾಗಿದ್ದನೆಂದು ವಸು ದೇವಸುತನುಸುರಲಾಗಿ, ಇಂದ್ರನಂದನನು ಸಂತೋಷವನ್ನು ತಾಳ್ದು ಚಂದ್ರಗು ಪ್ತನನ್ನು ಸ್ತುತಿಸಿ, ಗೋವಿಂದನನ್ನು ಹೊಗಳಿ, ಎಲೈ ಪುರುಷೋತ್ತಮನೇ ! ಈ ಕಥೆಯು ಕೇವಲ ಅದ್ಭುತವಾಗಿಯೂ ಆನಂದಕರವಾಗಿಯೂ ಇರುವುದು, ಇನ್ನು ನಿದ್ರೆ ಮಾಡಲು ಅಪ್ಪಣೆಯನ್ನೀಯಬೇಕೆಂದು ಕೇಳಲಾಗಿ ವಾಸುದೇವನು ಸಮ್ಮ ತಿಸಿದನು. ಈರ್ವರೂ ಸುಖಶಯನದೊಳು ಪವಡಿಸಿ ನಿದ್ರಾಪರವಶರಾದರು.

ಏಳನೆಯ ಕಥೆಯು ಸಂಪೂರ್ಣ.



ಶ್ರೀರಸ್ತು.

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.

## ವಿಕ್ರಮಸೇನನೆಂಬ ಎಂಟನೆಯ ರಾಜಪುತ್ರನಕಥೆ.

ಎಂಟನೆ ದಿವಸ ರಾತ್ರಿ ನರನಾರಾಯಣರೀರ್ವರು ಭೋಜನಾನಂತರದಲ್ಲಿ ಯಮುನಾನದೀಪ್ರಾಂತದ ಸೈಕತಭೂಮಿಯೊಳು ತಾಂಬೂಲವನ್ನು ಸವಿಯುತ್ತಾ ತಣ್ಣಗೆ ಬೀಸುವ ಮಾರುತವನ್ನಾಘ್ರಾಣಿಸುತ್ತಾ ಸಂತೋಷದಿಂದಿರುವಾಗ ಅರ್ಜು ನನು ಕೃಷ್ಣನನ್ನು ಕುರಿತು ಎಲೈ—ಪರಮಪುರುಷನೇ ನಿರಾಕಾರಭಾವವು. ನನಗೆ ಹೃದ್ಗೋಚರವಾಗುವಂತೆ ಒಂದು ಪುಣ್ಯಚರಿತ್ರೆಯನ್ನು ಬೋಧಿಸಿ ನನ್ನನ್ನು ಮುಕ್ತ

ನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಿದ ಕುಂತೀನಂದನನಿಗೆ ಶ್ರೀಕೃಷ್ಣನು ಪಾವನನಾದ ವಿಕ್ರಮಸೇನನೆಂಬ ರಾಜೇಂದ್ರನ ಇತಿಹಾಸವನ್ನು ಪೇಳತೊಡಗಿದನು.

ಕೇಳು—ಕುಂತೀನಂದನನೇ ಪೂರ್ವಕಾಲದೊಳು ಮಹಾರಾಷ್ಟ್ರ ದೇಶವನ್ನು ಚಿತ್ರಸೇನನೆಂಬ ಸಾರ್ವಭೌಮನು ಪಾಲಿಸುತಲಿದ್ದನು. ಆತನಿಗೆ ವೀರಸೇನನೆಂತಲೂ, ರೌದ್ರಸೇನನೆಂತಲೂ, ವಿಕ್ರಮಸೇನನೆಂಬದಾಗಿಯೂ, ಮೂರುಜನ ಮಕ್ಕಳಿದ್ದರು. ಅವರಲ್ಲಿ ಕಡೆಯ ಮಗನಾದ ವಿಕ್ರಮಸೇನನೆಂಬುವನು ಸೌಂದರ್ಯದಲ್ಲಿಯೂ, ಗುಣವಿಶೇಷಗಳೊಳಗೂ ಶೌರ್ಯಧೈರ್ಯ ಸಾಹಸಗಳಲ್ಲಿಯೂ ವಿದ್ಯೆಯೊಳಗೂ, ತನ್ನ ಅಣ್ಣಂದಿರಿಗಿಂತಲೂ ಅಧಿಕನಾಗಿ ಇರುವುದು ಕಂಡು ಆ ಪಟ್ಟಣದ ಜನಗಳೆಲ್ಲಾ ಆಶ್ಚರ್ಯವನ್ನೈಸುತ್ತಾ ಇವನು ದೇವಾಂಶಸಂಭೂತನಲ್ಲದೆ ಕೇವಲ ಮನುಷ್ಯಮಾತ್ರದವನಲ್ಲವೆಂದು ನಾನಾಪ್ರಕಾರದಿಂದ ಸ್ತುತಿಸುತಲಿದ್ದರು. ಒಂದಾನೊಂದು ದಿವಸ ರಾಜತನಯರಾದ ಮೂರು ಜನಗಳೂ ಬೇಟೆಯಾಡುವುದಕ್ಕಾಗಿ ಪ್ರಯತ್ನಿಸಿ ತಂದೆತಾಯಿಗಳ ಅಪ್ಪಣೆಯನ್ನು ಪಡೆದು ಬೇಟೆಗಾರರನ್ನು ಜೊತೆಮಾಡಿಕೊಂಡು ಅರಣ್ಯಕ್ಕೆ ಹೋಗಿ ವಿನೋದದಿಂದ ವನಮೃಗಗಳನ್ನು ಬೇಟೆಯಾಡುತ್ತಾ ಉತ್ಸಾಹದಿಂದ ಆ ಅರಣ್ಯವನ್ನು ಕಳೆದು ಘೋರಾರಣ್ಯ ಮಧ್ಯದಲ್ಲಿ ಪ್ರವೇಶಿಸಿ ಅಲ್ಲಿ ವಿಶೇಷವಾಗಿರುವ ದುಷ್ಟತರವಾದ ಹುಲಿ, ಕರಡಿ ಮೊದಲಾದ ದುಷ್ಟಮೃಗಗಳನ್ನು ನೋಡಿ ಒಬ್ಬರಿಗೊಬ್ಬರು ಪಂಥಗಳನ್ನಾಡಿ ಬಾಣಗಳಿಂದ ಹೊಡೆಯುತ್ತಾ ಅವುಗಳನ್ನು ಬೆನ್ನಟ್ಟಿ ಹೋಗುತ್ತಾ ಬರಲಾಗಿ ಅರಣ್ಯಮಧ್ಯದೊಳು ಆ ಮೂವರೂ ಒಬ್ಬರಿಗೊಬ್ಬರು ಕಾಣಿಸದಂತೆ ಒಬ್ಬರೊಬ್ಬರು ಒಂದೊಂದು ದಾರಿಯನ್ನು ಸೇರಿದವರಾದರು, ವಿಕ್ರಮಸೇನನೆಂಬ ಕಿರಿಯವನು ಒಂದು ಹುಲಿಯನ್ನು ಅಟ್ಟಿಕೊಂಡು ಹೋಗುತ್ತಾ, ಅದು ತನ್ನ ಬಾಣಗಳಿಗೆ ಸಿಕ್ಕಿ ಸಾಯದೆ ಇರುವದರಿಂದ ಕೋಪಕ್ರಾಂತನಾಗಿ, ತನ್ನ ಗುರುವನ್ನು ಮನದೊಳು ಧ್ಯಾನಿಸಿ ದಿವ್ಯಾಸ್ತ್ರವೊಂದನ್ನು ಅದರಮೇಲೆ ಪ್ರಯೋಗಿಸಿದನು ಆಗಲಾ ಹೆಬ್ಬುಲಿಯು ಭೂಮಿಯಮೇಲೆ ಬಿದ್ದು ಕಳವಳಪಡುತ್ತಾ ತನ್ನ ಪ್ರಾಣಗಳನ್ನು ಬಿಟ್ಟು ಬಳಿಕ ಸುಂದರವಾದ ಜಿಂಕೆಯರೂಪವನ್ನು ತಾಳ್ದು ನೆಗೆಯುತ್ತಾ ಮುಖವನ್ನೆತ್ತಿ ರಾಜಪುತ್ರನನ್ನು ನೋಡುತ್ತಾ ಹೋಗುತ್ತಲಿತ್ತು ಆ ರಾಜೇಂದ್ರತನಯನದನ್ನು ನೋಡಿ ಆಶ್ಚರ್ಯಪಡುತ್ತಾ ಇದು ಕೇವಲ ವಿನೋದವಾಗಿರುವುದು, ಏನಾದರೂ ಮಾಡಿ ಇದನ್ನು ಹೊಡೆಯಬೇಕೆಂದು ಯೋಚಿಸಿ, ರುಕ್ಮಪುಂಖಗಳನ್ನು ಪ್ರಯೋಗಿಸುತ್ತಾ ಅದರ ಹಿಂದಟ್ಟಿ ಹೋಗುತಲಿದ್ದನು. ತರುವಾಯ ಆ ಮಾಯಾಮೃಗವು ರಾಜನಂದನನನ್ನು ಬಹಳ ದೂರವಾಗಿ ಕೊಂಡೊಯ್ದು, ಅಲ್ಲಿ ಜಿಂಕೆಯರೂಪವನ್ನು ತೋರಿಸದಂತೆ ಮಾಯಾರೂಪವನ್ನು ಬಿಟ್ಟು ದಿವ್ಯರೂಪ ಸುಂದರ, ಯೌವನಗಳಿಂದ ಪ್ರಕಾಶಿಸುತಲಿರುವ ಒಬ್ಬ

ಸ್ತ್ರೀರೂಪವಾಗಿ ಅಲ್ಲಿರುವ ಗಿಡಗಳಬಳಿಗೆ ಹೋಗಿ ಪುಷ್ಪಗಳನ್ನು ಕೀಳುತಲಿದ್ದಳು, ವಿಕ್ರಮಸೇನನು ಕ್ಷುತ್ಪಿಪಾಸೆಗಳಿಂದ ಬಹಳವಾಗಿ ಬಳಲಿ ಹಿಂತಿರುಗಿನೋಡಿ ತನ್ನ ಅಣ್ಣಂದಿರನ್ನೂ ಬೇಟೆಗಾರರನ್ನೂ ಕಾಣದೇ ಇದ್ದುದರಿಂದ ವಿಚಾರಪಡುವವನಾಗಿ ಕುದುರೆಯನ್ನಿಳಿದು, ಒಂದು ಪುನ್ನಾಗ ವೃಕ್ಷದಕೆಳಗೆ ಕುಳಿತುಕೊಂಡು ಬಹಳವಾಗಿ ಯೋಚಿಸುತ್ತಾ, ನಾಲ್ಕು ದಿಕ್ಕುಗಳನ್ನು ನೋಡುತ್ತಾ ಅಲ್ಲಿ ಪುಷ್ಪಗಳಂ ಕೊಯ್ಯು ತಲಿರುವ ಸ್ತ್ರೀರತ್ನವನ್ನು ನೋಡಲಾಗಿ, ಅವಳ ದೇಹಕಾಂತಿಗಳು ಇವನ ಕಣ್ಣುಗ ಳಿಗೆ ಮಿಂಚಿನೋಪಾದಿಯಲ್ಲಿ ಕಾಣಿಸಲು ಆ ರಾಜತನಯನು ಭಯಪಟ್ಟವನಾಗಿ ಕಣ್ಣುಗಳಂ ಮುಚ್ಚಿಕೊಂಡು ಸ್ವಲ್ಪಹೊತ್ತು ನಿಶ್ಚೇಷ್ಟಿತನಾಗಿ ಆಮೇಲೆ ಧೈರ್ಯವ ನ್ನವಲಂಬಿಸಿ ಓಹೋ ಈ ವಸಂತಋತುವಿನೊಳು ಮಿಂಚುಗಳುಂಟಾಗಲುಕಾರಣ ವಿಲ್ಲ ಇದು ಈಕೆ ವನದೇವತೆಯಾಗಿರಬಹುದೆಂದು ಚಿಂತಿಸಿ ಮೆಲ್ಲಗೆ ಕಣ್ಣುಗಳನ್ನು ತೆರೆದುನೋಡಿ ವನದೇವತೆಯಾದರೆ ಪುಷ್ಪಗಳನ್ನು ಕೀಳುತಲಿರಲು ನಿಮಿತ್ತವೇನು ಇದು ವನದೇವತೆಯೂ ಅಲ್ಲ ಈ ಅಬಲೆಯನ್ನು ನೋಡಿದರೆ ದೇವ, ನಾಗಕನ್ಯೆ ಯರಲ್ಲಿ ಯಾರೋ ಓರ್ವ ವನಿತೆಯಾಗಿರಬಹುದೆಂದು ಮನಸ್ಸಿನಲ್ಲಿ ನಿಶ್ಚೈಸಿ ಕೊಂಡು ಮೆಲ್ಲಮೆಲ್ಲಗೆ ಆ ಕನ್ಯೆಯ ಸಮೀಪಕ್ಕೆ ಹೋಗಿ ಅವಳನ್ನು ಕುರಿತು, ಎಲೈ ಚಂದ್ರವದನೆಯೇ ! ನೀನು ಯಾರು ? ಏನುಕಾರಣದಿಂದೀ ನಿರ್ಜನ ಪ್ರದೇಶವಾದ . ಅರಣ್ಯಮಧ್ಯದಲ್ಲಿ ಏಕಾಂಗಿಯಾಗಿ ಚರಿಸುತಲಿರುವೆ. ನೀನೀ ಪುಷ್ಪಗಳನ್ನು ಕೊಯ್ಯುತಲಿರಲು ನಿಮಿತ್ತವೇನು ? ಎಂದೀ ರೀತಿಯಾಗಿ ಕೇಳಲು ಆ ಪೂರ್ಣೇಂದುಮುಖಿಯು, ಹುಸಿನಗೆಯಿಂದಾತನನ್ನು ನೋಡಿ, ಎಲೈ ರಾಜ ಕುವರನೇ ! ನೀನೀ ಅರಣ್ಯದಲ್ಲಿ ಏಕಾಂಗಿಯಾಗಿರಲು ನಿಮಿತ್ತವೇನು ? ಭಯ ವಿಲ್ಲದವನಂತೆ ನನ್ನಂಥಾ ಅಬಲೆಯರ ಬಳಿಗೆ ಬರುಬಹುದೇ ? ನಾನು ನಾಗ ಕನ್ಯೆಯು, ಪುಷ್ಪಗಳ ನಿಮಿತ್ತವಾಗಿ ಈ ಅರಣ್ಯಕ್ಕೆ ಬಂದಿರುವೆನು. ನಿನ್ನ ವೃತ್ತಾಂತವನ್ನೆಲ್ಲಾ ತಿಳುಹಿ ತುಂಟರಾದ ಬೇಟೆಗಾರರು ಬರುವದರೊಳಗಾ ಗಿಯೇ ನೀನು ನಿನ್ನ ಪುರವನ್ನು ಸೇರೆಂದು ಹೇಳಿ, ಓರೆಗಣ್ಣಿನಿಂದಾತನನ್ನು ನೋಡುತ್ತಾ, ಸೆರಗನ್ನು ಸವರಿಕೊಳ್ಳುತ್ತಿದ್ದಳು. ಆಗ ರಾಜಪುತ್ರನಿಗೆ ಚಿತ್ತ ಚಾಂಚಲ್ಯವುಂಟಾಗಿ, ಎಲೈ ನಾರೀಮಣಿಯೇ ! ನಾನು ಮಹಾರಾಷ್ಟ್ರದೇಶದ ರಾಜಪುತ್ರನು ಬೇಟೆಗೆ ಬಂದು ದುಷ್ಟ ಮೃಗಗಳನ್ನು ಬೇಟೆಯಾಡುತ್ತಾ ನನ್ನ ಸಹೋದರ ಬೇಟೆಗಾರರನ್ನು ಕಾಣದೆ ಒಂಟಿಯಾಗಿರುವೆನು ನಿನ್ನ ಸೌಂದರ್ಯ ವಾದ ದೇಹವನ್ನು ನೋಡಿದ ಮೊದಲ್ಗೊಂಡು ನನಗೆ ಚಿತ್ತಚಾಂಚಲ್ಯವುಂಟಾ ಯಿತು. ಅಕಟ ! ನಿನ್ನನ್ನು ಬಿಟ್ಟುಹೋಗುವುದಕ್ಕೆ ನನ್ನ ಕಾಲುಗಳು ತಡೆಮಾಡು ತಲಿರುವ, ಕಾರಣ ಪುಷ್ಪಧನ್ವನು ನನಗೆ ಹೊಂಚಿಹೊಂಚಿ ಬಾಣಗಳನ್ನು ಹಾಕು ತ್ತಿರುವನು, ಇಲ್ಲಿ ನಾನು ನಿಲ್ಲಲಾರೆನು ಎಲೈ ಪ್ರಾಣನಾಯಕಿಯೇ ! ನನ್ನನ್ನಾಲಿಂ

ಗನ ಮಾಡಿಕೊಂಡು ಮುದ್ದಿಟ್ಟು ನನ್ನ ಪ್ರಾಣಗಳನ್ನು ನಿಲ್ಲಿಸುವವಳಾಗು, ನಿನಗೆ ಕೇವಲ ಪುಣ್ಯ ಲಭಿಸುವುದೆನಲು, ಆ ಮಾತಿಗೆ ಮಾಯಾಕನ್ಯೆಯು ಮುಗುಳು ನಗೆಯಿಂದ ಅವನನ್ನು ಕುರಿತು, ರಾಜತನಯನೇ ನೀನೀ ರೀತಿಯಾಗಿ ಹೇಳ ಬಹುದೆ, ನಿನ್ನನ್ನು ನೋಡಿದ ಮಾತ್ರದಿಂದಲೇ ನನಗೂ ಚಿತ್ತಚಾಂಚಲ್ಯದಿಂದ ಮನ್ಮಥವಿಕಾರ ಉಂಟಾಗಿರುವುದು ನಾನು ನಾಗೇಂದ್ರನ ತನಯಳಾದಕಾರಣ ಆತನ ಅಪ್ಪಣೆಯಿಲ್ಲದೆ ನಿನ್ನ ಅಭೀಷ್ಟವನೆಂತು ನಡೆಸಲಿ, ಎಲೈ ಪ್ರಾಣನಾಥನೇ ನಾವುಗಳೇನೂ ಈಗ ಮಾಡಕೂಡದು, ತ್ವರೆಪಡದೆ ನನ್ನ ಹಿಂದೆಯೇ ಬಾ, ಮಹಾಮಹಿಮೆಯುಳ್ಳ ನನ್ನ ತಂದೆತಾಯಿಯನ್ನು ಸಮ್ಮತಿಪಡಿಸಿ ಬಳಿಕ ಇಷ್ಟ ವನ್ನು ನೆರವೇರಿಸಿಕೊಳ್ಳಬಹುದೆಂದು ಹೇಳಿ ತನ್ನ ಮಾಯೆಯಿಂದ ಎರಡು ಕುದುರ ಗಳನ್ನು ತರಿಸಿ, ಈರ್ವರೂ ಆ ಕುದುರೆಗಳನ್ನು ಹತ್ತಿ ವಾಯುವೇಗದಿಂದ ಹೋಗುತ್ತಾ ಅಲ್ಲಿ ಒಂದು ಆಲದಮರವನ್ನು ಕಂಡು ಕುದುರೆಗಳನ್ನಿಳಿದು ರಾಜ ಪುತ್ರಿಯು ಆ ವಿಶಾಲವಾದ ಸ್ಥಳದಲ್ಲಿ ದೊಡ್ಡದಾಗಿರುವ ಒಂದು ಹುತ್ತವನ್ನು ರಾಜತನಯನಿಗೆ ತೋರಿಸಿ, ಎಲೈ ರಾಜತನಯನೇ! ನೀನು ಭಯರಹಿತನಾಗಿ ಈ ಹುತ್ತದ ಸಮೀಪದಲ್ಲಿಯೇ ಕುಳಿತಿರುವವನಾಗು, ನಾನು ನನ್ನ ತಂದೆಯನ್ನು ಕರೆದುಕೊಂಡು ಬರುವೆನೆಂದು ಹೇಳಿ ಆ ಹುತ್ತದೊಳಗೆ ಹೋಗಲು ಇಷ್ಟರ ಲ್ಲಿಯೇ ಮಾಯಾ ಕುದುರೆಗಳೆರಡೂ ಅಲ್ಲಿ ನಿಲ್ಲದೆ ಅದೃಶ್ಯವಾದವು, ರಾಜಪುತ್ರನು ತನ್ನ ಮನದೊಳಗೆ ಓಹೋ! ನಾಗೇಂದ್ರನಿಂದ ನನಗೇನು ಪ್ರಮಾದವು ಸಂಭ ವಿಸುವುದೋ ಎಂದು ಭಯಪಡುತ್ತಿರುವಷ್ಟರಲ್ಲಿ ಆ ಹುತ್ತದಿಂದ ಘೋರವಾದ ಸರ್ಪವು ಬರಲು ಅದನ್ನು ಕಂಡು ರಾಜತನಯನು ಭಯವನ್ನು, ಆಶ್ಚರ್ಯವನ್ನು ಹೊಂದಿ, ಆ ನಾಗೇಂದ್ರನಿಗೆ ಸಾಷ್ಟಾಂಗವೆರಗಿ ನಮಸ್ಕರಿಸಿದನು, ಆಗಲಾ ನಾಗರಾಜನು ಆತನನ್ನು ಸಂತೈಸಿ ಎಲೈ—ಮಗುವೇ ನೀನು ನನ್ನನ್ನು ನೋಡಿ ಭಯಪಡಬೇಡ, ನಾನು ಪ್ರಯತ್ನಪೂರ್ವಕವಾಗಿಯೇ ನಿನ್ನನ್ನು ಬರಮಾಡಿ ದೆನು ನಿನ್ನನ್ನು ಕರೆದುಕೊಂಡು ಬಂದ ಅಬಲೆಯು ನನ್ನ ಮಾಯಾ ಶಕ್ತಿಯಲ್ಲದೆ ನಿಜವಾದ ಸ್ತ್ರೀಯಲ್ಲ. ನಿನ್ನನ್ನು ಬಹುದೂರವಾಗಿ ತಿರುಗಿಸಿ ನಿನ್ನ ಲಕ್ಷ್ಯಕ್ಕೆ ಸಿಕ್ಕದೆ ನಿನಗೆ ಆಯಾಸವನ್ನುಂಟುಮಾಡಿದ ಹುಲಿಯು, ಆ ರೂಪವನ್ನು ಬಿಟ್ಟು ಸುಂದರವಾದ ಆಕಾರವನ್ನು ತಾಳಿ ನಿನ್ನ ಬಾಣಗಳಿಗೆ ಸಿಕ್ಕದೆ ನಿನ್ನನ್ನು ದೂರ ವಾಗಿ ಕರೆತಂದ ಜಿಂಕೆಯು, ಇವೆರಡೂ ನನ್ನ ಮಾಯೆಯಿಂದೇ ತಿಳಿಯುವವ ನಾಗು. ಎಲೈ ಪುಣ್ಯಾತ್ಮನೇ! ಆ ಕನ್ನೆಯನ್ನು ಕುರಿತು, ನೀನು ವೃಥಾ ಚಿಂತಿ ಸಬೇಡ. ಅವಳಿಗಿಂತಲೂ, ಮತ್ತು ದೇವ, ನಾಗ, ಯಕ್ಷ, ಗಂಧರ್ವ, ಕನ್ಯೆ ಯರಿಗಿಂತಲೂ ಮಿಂಚಿದವಳಾಗಿ ಸಕಲ ತೇಜಃಪುಂಜದಿಂದಲೂ ಸಕಲ ಸದ್ಗುಣ ಗಳಿಂದಲೂ ಕೂಡಿರುವ ಮಳೆಮಲ್ಲಿಗೆ ಹೂವುಗಳಷ್ಟು ತೂಕವುಳ್ಳ ಪದ್ಮಿನೀ

ಜಾತಿಯ ಅಬಲೆಯನ್ನು ಪಾಂಚಾಳ ಪುರುಷನಾದ ನಿನಗೆ ಅನುಕೂಲ ಮಾಡಿಸ ಲೆಳಸಿ, ನಿನ್ನನ್ನಿಲ್ಲಿಗೆ ಬರಮಾಡಿದೆನು. ಕಾಶ್ಮೀರ ದೇಶಾಧಿಪನಾದ ಕನಕಾಂಗದ ಮಹಾರಾಯನು ಝುಲ್ಲಿಕಾ ಎನ್ನುವ ಯಂತ್ರವನ್ನು ನಿರ್ಮಿಸಿ ಅದನ್ನು ಹೊಡೆದವನಿಗೆ ತನ್ನ ಪುತ್ರಿಯಾದ ಹೇಮಕಾಂತಾಮಣಿಯನ್ನು ಕೊಟ್ಟು ವಿವಾಹ ಮಾಡುವದಾಗಿ ಸ್ವಯಂವರ ಮಹೋತ್ಸವನ್ನು ಸಾರಿಸಿರುವನು. ದೇವ ಮಾನವರಿಗೆ ಕೂಡ ಆ ಯಂತ್ರವು ಅಸಾಧ್ಯವಾಗಿರುವುದು. ನೀನು ಎನ್ನೊಳು ಗುರು ಭಾವವನ್ನಿಟ್ಟು ಈ ಬಾಣದಿಂದಾ ಯಂತ್ರವನ್ನು ಹೊಡೆದು ಆ ಕನ್ಯಾರತ್ನ ವನ್ನು ಮದುವೆ ಮಾಡಿಕೊಂಡು ಅವಳೊಡನೆ ಸಂಭೋಗಿಸದೆ ಹಳದಿಯ ವಸ್ತ್ರಗ ಳನ್ನು ಧರಿಸಿಕೊಂಡು ಇಲ್ಲಿಗೆ ಬಂದು ಸ್ನಾನವನ್ನು ಮಾಡಿ ನೀವೀರ್ವರೂ ನಿರ್ಭ ಯರಾಗಿ ಬಲದ ಕೈಗಳನ್ನು ನನ್ನ ಹೆಡೆಗಳ ಮೇಲೆ ಇಟ್ಟರೆ ನನಗೆ ಶಾಪವಿಮೋ ಚನೆಯುಂಟಾಗುವುದು. ನಿನಗೆ ಹಿತವನ್ನು ಬಯಸಿರುವೆನಾದುದರಿಂದ ನನ್ನ ಮಾತುಗಳನ್ನು ನಡೆಸೆಂದು ಹೇಳಿ ಆ ಬಾಣವನ್ನು ಕೊಟ್ಟನು. ಆಗಲಾ ರಾಜ ತನಯನು ಆಶ್ಚರ್ಯಭರಿತನಾಗಿ ಈ ನಾಗೇಂದ್ರನಿಂದ ನನಗೆ ನಾನಾವಿಧಗಳಾದ ಸುಖಗಳು ಸಂಭವಿಸುವವು ಎಂದು ನಂಬಿ ಆತನ ಮಹಿಮೆಯನ್ನು ಕೊಂಡಾಡಿ, ಎಲೈ—ಸ್ವಾಮಿಯೇ ನಿನ್ನ ಅಪ್ಪಣೆಯಂತೆ ನಡೆಯುವೆನೆಂದು ನುಡಿದು ಆ ನಾಗ ರಾಜನಿಗಭಿವಂದಿಸಿ ಅಪ್ಪಣೆಯನ್ನು ಪಡೆದು ಆ ಬಾಣವನ್ನು ಭದ್ರವಾಗಿಟ್ಟು ಕೊಂಡು ಅದೇ ನಾಗೇಂದ್ರನು ಕೊಟ್ಟ ಮಾಯಾ ಕುದುರೆಯನ್ನೇರಿ ಪ್ರಯಾಣ ವಾಗಿ ಹೋಗುತಲಿದ್ದನು. ಅತ್ತಲಾ ವಿಪಿನಮಧ್ಯದೊಳು ವಿಕ್ರಮಸೇನನ ಸಹೋದರರಾದ ವೀರಸೇನ, ರೌದ್ರಸೇನರಿಬ್ಬರೂ ದೊಡ್ಡದೊಡ್ಡ ಮೃಗಗಳನ್ನು ಹೊಡೆದು ಹಿಂತಿರುಗಿ ಬೇಟೆಗಾರರಿಂದೊಡಗೂಡಿ ಅನುಜನನ್ನು ಕಾಣದೆ ಅವನ ಜೊತೆಯಲ್ಲಿದ್ದ ಬೇಟೆಗಾರರನ್ನು ಕಂಡು ಎಲೈ ಭಟರುಗಳಿರಾ ಪ್ರಿಯನಾದ ತಮ್ಮನು ಎಲ್ಲಿ ಹೋಗಿರುವನು. ನೀವಾತನ ಜೊತೆಯಲ್ಲಿಯೇ ಇರದೆ ಇಲ್ಲಿಗೆ ಬಂದಕಾರಣವೇನು ಎಂಬೀರೀತಿಯಾಗಿ ಕೇಳಲು, ಅವರು ರಾಜತನಯರಿಗೆ ನಮಸ್ಕರಿಸಿ, ಎಲೈ—ರಾಜಪುತ್ರರೇ ನಿಮ್ಮ ತಮ್ಮನು ಒಂದು ಹುಲಿಯ ಬೆನ್ನಟ್ಟಿ ಹೋದನು. ನಾವಾತನ ಕುದುರೆಯ ಹಿಂದೆ ಹೋಗಲಾರದೆ ಹಿಂದಿ ರುಗಿದೆವೆನಲು, ಆ ಮಾತಿಗೆ ರಾಜತನಯರು ವಿಚಾರಪಟ್ಟು ಆತನ ಕುದುರೆಯು ಹೋದ ಜಾಡವನ್ನು ಹಿಡಿದು ಹುಡುಕುವುದಕ್ಕೆ ಹೋಗಿ ಮೂರನೆಯ ದಿವಸ ಆತನ ಕುದುರೆಯನ್ನು ಮಾತ್ರ ಕಂಡು ಹಿಡಿದು ತಮ್ಮನನ್ನು ಕಾಣದೆ ಎಲೈ,— ಪ್ರಿಯನಾದ ಅನುಜನೆ ದುಷ್ಟಮೃಗಗಳ ವಶವಾದೆಯಾ ಎಂದು ಘಟ್ಟಿಯಾಗಿ ಅಳುತ್ತಾ ಪಟ್ಟಣಕ್ಕೆ ಹೋಗಿ ತಂದೆತಾಯಿಗಳಿಗೆ ವೃಂತ್ತಾಂತವನ್ನರುಹಿದರು, ಅವರೀಪಾರ್ತೆಯನ್ನು ಕೇಳಿದ ಮಾತ್ರದಿಂದಲೇ ಮೂರ್ಛಾಪರವಶರಾಗಿ

ಭೂಮಿಯ ಮೇಲೆ ಬಿದ್ದು ಸ್ವಲ್ಪ ಹೊತ್ತಿನ ಮೇಲೆ ಎಚ್ಚತ್ತು ಪುತ್ರನ ಸೌಂದರ್ಯವನ್ನೂ ಗುಣವಿಶೇಷಗಳನ್ನೂ ನೆನೆಯುತ್ತಾ ಪಾರವಿಲ್ಲದೆ ಶೋಕಿಸುತಲಿದ್ದರು. ಪಟ್ಟಣದ ಜನಗಳೆಲ್ಲಾ ವಿಕ್ರಮಸೇನನಗುಣಗಳನ್ನು ನೆನೆನೆನೆದು ಕಣ್ಣೀರುಗಳನ್ನು ಸುರಿಸುತ್ತಾ ಚಿತ್ತಭ್ರಮೆಯುಳ್ಳವರಾಗಿದ್ದರು.

ಅತ್ತಲಾ ವಿಕ್ರಮಸೇನನು ವಾಯುವೇಗದಿಂದ ಕಾಶ್ಮೀರದೇಶಕ್ಕೆ ಹೋಗಿ ಅಲ್ಲಿ ಮಾಯಾ ಕುದುರೆಯನ್ನು ಬಿಟ್ಟು ವಿವಿಧವಾದ ವಾದ್ಯಗಳಶ್ಬಾಲೈಸಿ ನಾನಾ ದೇಶದಿಂದ ಬಂದಿರುವ ರಾಜಾಧಿರಾಜರುಗಳ ಬಿಹಾರಗಳನ್ನೂ ಚತುರಂಗ ಬಲಗಳನ್ನೂ ನೋಡುತ್ತಾ ಆ ಜನಸಂದಣಿಯನ್ನು ತಪ್ಪಿಸಿಕೊಂಡು ಆ ಯಂತ್ರದ ಸಮೀಪವನ್ನೈದಿದನು. ಅಲ್ಲಿರುವ ರಾಜರೆಲ್ಲರೂ ಆ ಯಂತ್ರವನ್ನು ನೋಡಿ ಓಹೋ ಈ ಝಲ್ಲಿಕಾ ಯಂತ್ರವನ್ನು ಹೊಡೆಯುವುದು ದೇವ, ಗಂಧರ್ವ, ಯಕ್ಷ, ಸಿದ್ಧರಿಗೂ ಅಸಾಧ್ಯವಾಗಿರುವುದು. ಹೀಗಿರುವಲ್ಲಿ ಮನುಜಮಾತ್ರದವನಿಗೆಂತು ಸಾಧ್ಯ. ಈ ನರೇಂದ್ರನು ಎಂಥಾ ಯಂತ್ರವನ್ನು ನಿರ್ಮಿಸಿದನೆಂದು ಬಹು ಪ್ರಕಾರವಾಗಿ ಮಾತನಾಡುತ್ತಲಿರುವುದನ್ನು ಕೇಳುತ್ತಾ ರಾಜನಂದನನು ನಾಗೇಂದ್ರನ ಕರುಣದಿಂದ ಕ್ಷುತ್ಪಿಪಾಸಾದಿಗಳಿಲ್ಲದವನಾಗಿ ಅಲ್ಲಿರುವ ಮಂತ್ರಿ ಪುರೋಹಿತರನ್ನು ನೋಡಿ ನಿಮ್ಮೊಡೆಯನಾದ ಭೂಪಾಲನು ಬಂದಿರುವನೋ ಬಾರದಿದ್ದರೆ ಜಾಗ್ರತೆಯಾಗಿ ಕರೆಸುವರಾಗಿ, ನಾನೀಯಂತ್ರವನ್ನು ಹೊಡೆಯುವೆನೆಂದು ನುಡಿಯಲಾಗಿ ಆ ರಾಜನ ಮಂತ್ರಿಯು ಫಕ್ಕನೆ ನಕ್ಕು ಓಹೋ ಬಾಲ ದೊರೆಯೇ ನೀನು ಬಾಲ್ಯಭಾವದಿಂದ ಇದನ್ನು ತೃಣೀಕರಿಸಿ ನುಡಿಯುವವನಾದೆ ಕೆಳಗಿರುವ ಕನ್ನಡಿಯಲ್ಲಿ ಲಕ್ಷ್ಯವನ್ನು ನಿಲ್ಲಿಸಿಕೊಂಡು ಒಂದೇಬಾಣದಿಂದೀ ಯಂತ್ರವನ್ನು ಹೊಡೆಯುವುದಕ್ಕೆ ದೇವತೆಗಳಿಗಾದರೂ ಅಳವಲ್ಲ. ಅನೇಕವಾದ ಯುದ್ಧಗಳಲ್ಲಿ ಶೂರರೆಂದೆನಿಸಿಕೊಂಡಿರುವ ರಾಜಾಧಿರಾಜರಾದ ಅಂಗ, ವಂಗ, ಕಳಿಂಗ, ಕಾಂಭೋಜ, ಮಾಳವ, ಘೂರ್ಜರ, ಬರ್ಬರ, ಸಿಂಧು ಮೊದಲಾದ ದೇಶಗಳ ಅವನೀಪತಿಗಳು ಬಂದು ಈ ಯಂತ್ರವನ್ನು ನೋಡಿ ಕಂಪಿತ ಶರೀರರಾಗಿ ದಿಕ್ಕುತೋರದೆ ಮುಖಗಳಂ ಬಾಡಿಸಿಕೊಂಡು ವಿಮುಖರಾಗಿರುವರು. ಅಯ್ಯೋ ನಿನಗೆ ಇದು ಸಾಧ್ಯವಾಗಲರಿಯದು ಹೋಗುಹೋಗೆಂದು ನುಡಿಯಲಾಗಿ, ಆ ರಾಜತನಯನು ಕೋಪಿಸಿಕೊಂಡು ಕಣ್ಣುಗಳನ್ನು ಕೆಂಪಗೆಮಾಡಿ ಎಲೈ—ಮಂತ್ರಿಯೇ ಇನ್ನು ನೀನು ಮಾತನಾಡದಿರೆಂದು ಗದ್ದಿಸಿಹೇಳಿ ನಾಗರಾಜನನ್ನು ಮನದೊಳು ಧ್ಯಾನಿಸಿ ದಿಕ್ಕುಗಳು ಕಂಪಿಸುವಂತೆ ಧನುಷ್ಟಂಕಾರವಂ ಮಾಡಿ ಫಣಿಪತಿಯು ಕೊಟ್ಟಿದ್ದ ಬಾಣವನ್ನು ಆರೋಪಿಸಿ ಕನ್ನಡಿಯಲ್ಲಿ ಲಕ್ಷ್ಯವನ್ನಿಟ್ಟು ಪ್ರಯೋಗಿಸಿದನು. ಆ ಬಾಣವು ತ್ರೇತಾಗ್ನಿಗಳನ್ನಾರಿಸಿಕೊಂಡು ಅಗ್ನಿಯ ಕಿಡಿಗಳನ್ನುಗುಳುತ್ತಾ ಚಟಪಟವೆಂಬ ಶಬ್ದಗಳನ್ನೂ ಅನೇಕ ಘಂಟಾ

ರವಗಳನ್ನೂ ಉಳ್ಳದ್ದಾಗಿ ನಾಲಿಗೆಗಳನ್ನು ಚಾಚುತ್ತಾ ಹೋಗಿ ಆ ಝಲ್ಲಿಕಾ ಸಹಿತಮಾದ ಯಂತ್ರವನ್ನು ಹೊಡೆದು ಸೌಮ್ಯರೂಪದಿಂದ ಬಂದು ರಾಜತನಯನ ತೂಣೀರದಲ್ಲಿ ಸೇರಿತು. ದೇವತೆಗಳು ಅಂತರಿಕ್ಷದಲ್ಲಿದ್ದುಕೊಂಡು ಬಹಳವಾಗಿ ಕೀರ್ತಿಸುತ್ತಾ ದೇವದುಂದುಭಿಯನ್ನು ಬಾರಿಸಿದರು. ಅಲ್ಲಿ ನೆರೆದಿದ್ದ ಭೂಪಾಲರೆಲ್ಲರೂ ಇವನಾರು ಇಂದ್ರನೋ ಚಂದ್ರನೋ ವರುಣನೋ ಆಗಿರಬಹುದು, ಮನುಷ್ಯನಲ್ಲವೆಂದು ಮೂಗುಗಳಮೇಲೆ ಬೆರಳುಗಳನ್ನಿಟ್ಟುಕೊಂಡು ಆತನನ್ನು ಕೀರ್ತಿಸಿ ಎಲ್ಲರೂ ಏಕಕಾಲದಲ್ಲಿ ಕೈ ಚಪ್ಪಾಳೆ ತಟ್ಟಿದರು. ದಿಕ್ಕುಗಳು ಪ್ರತಿಧ್ವನಿಗಳನ್ನು ಕೊಡುವಂತೆ ಜಯಭೇರಿಗಳು ಮೊಳಗುತ್ತಲಿದ್ದವು. ಕಾಶ್ಮೀರಪತಿಯು ಆಶ್ಚರ್ಯಭರಿತನಾಗಿ ಅಳಿಯನನ್ನು ಆಲಿಂಗನ ಮಾಡಿಕೊಂಡು ಎಲೈ—ಮಹಾತ್ಮನೇ ನನ್ನ ವಂಶವನ್ನುದ್ಧಾರ ಮಾಡಲೋಸುಗ ಈ ಭೂಲೋಕದಲ್ಲಿ ಅವತರಿಸಿದ ಪುಣ್ಯಮೂರ್ತಿಯು ನೀನೆಂದು ಬಹು ಪ್ರಕಾರದಿಂದ ಸ್ತುತಿಸಿದನು. ಬಳಿಕಲಾರಾಜತನಯಳು ಅಲ್ಲಿ ನೆರೆದಿರುವ ರಾಜರುಗಳ ಕಣ್ಣುಗಳಿಗೆ ಮಿಂಚಿನ ಹೊಳಪಿನಂತೆ ಕಾಂತಿಯನ್ನುಂಟುಮಾಡುವ ಅಂದಚಂದದ ಸೊಬಗುಳ್ಳವಳಾಗಿ ಸಾವಿರಮಂದಿ ತನ್ನ ಸಖಿಯರೊಡನೆಯೂ, ಮುತ್ತೈದೆಯರೊಡನೆಯೂ ಬಂದು ರಾಜತನಯನ ಕಂಠದೊಳು ಪುಷ್ಪಮಾಲಿಕೆಯನ್ನು ಹಾಕಿದಳು. ಅಷ್ಟರಲ್ಲಾ ಪೃಥ್ವೀಶನು ಅಳಿಯನನ್ನು ಪಟ್ಟದಾನೆಯ ಮೇಲೆ ಕುಳ್ಳಿರಿಸಿಕೊಂಡು ಮಂಗಳವಾದ್ಯಗಳ ರಭಸದಿಂದ ಪಟ್ಟಣಕ್ಕೆ ಕರೆದುಕೊಂಡು ಹೋಗಿ ಆತನ ವೃತ್ತಾಂತವನ್ನೆಲ್ಲಾ ಕೇಳಿ ತಿಳಿದುಕೊಂಡು ಅತ್ಯಂತ ಸಂಭ್ರಮದಿಂದ ಶುಭ ಮುಹೂರ್ತದೊಳಗೆ ವಿವಾಹ ಮಹೋತ್ಸವವನ್ನು ನೆರವೇರಿಸಿದನು. ಐದನೆಯ ದಿನದ ರಾತ್ರಿ ರಾಜಪುತ್ರಿಯು ಅಂತಃಪುರದ ವಿವಿಧವಾದ್ಯ ಸಂಗೀತಾದಿ ಭರತಶಾಸ್ತ್ರ ಪದ್ಧತಿಗಳನ್ನೆಲ್ಲಾ ಮುಗಿಸಿ ವಲ್ಲಭನು ಶಯನಮಾಡಿದ ನವರತ್ನ ಖಚಿತವಾದ ಹಾಸಿಗೆಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಲಾಗಿ ಆ ಸುವರ್ಣಪ್ರತಿಮೆಯಂತಿರುವ ರಾಜತನಯಳನ್ನು ವಿಕ್ರಮಸೇನನು ಸಂತೈಸಿ, ಎಲೈ—ಬಾಲಚಂದ್ರಿಕಾರತ್ನವೇ ಪೀಠದಮೇಲೆ ಕುಳಿತುಕೊಂಡು ನನ್ನ ವರ್ತಮಾನವನ್ನೆಲ್ಲಾ ತಿಳಿದು ನಿನ್ನ ಭರ್ತನಾದ ನನಗೆ ಮೇಲನ್ನು ಕೋರುವವಳಾಗೆಂದು ನುಡಿದು ನಾಗರಾಜನ ಮಹಿಮೆಯನ್ನು ಆತನ ಅಭೀಷ್ಟವನ್ನು ತಿಳಿಸಿದವನಾಗಿ ಪ್ರಾಣರಕ್ಷಕಳೇ ಆ ಮಹಾನುಭಾವನ ಅಪ್ಪಣೆಯಂತೆ ನಾವು ನಡೆಯದಿದ್ದರೆ ಉತ್ಪಾತಗಳು ಸಂಭವಿಸುವುದರಲ್ಲಿ ಸಂಶಯವಿಲ್ಲವೆಂದು ಹೇಳಿದನು. ಆಗಲಾನಾರೀಮಣಿಯು ಸಾವಕಾಶದಿಂದ ಯೋಚಿಸಿ ನಾಗೇಂದ್ರನ ಮಹಿಮೆಯನ್ನು ಸ್ತುತಿಸಿ ಗಂಡನಿಗೆ ನಮಸ್ಕರಿಸಿ ಪ್ರಾಣನಾಥನೇ ನಿಮ್ಮ ಇಷ್ಟವನ್ನೂ ನಾಗರಾಜನ ಅಭಿಪ್ರಾಯವನ್ನೂ ನಡಸುವುದಕ್ಕೆ ಸಂಶಯವಿಲ್ಲ. ನೀವೀ ಕಾರ್ಯ

ಕ್ಕಾಗಿ ಶಂಕಿಸಕೂಡದು. ನಾನು ಅದಕ್ಕೆ ತಕ್ಕ ಉಪಾಯವನ್ನು ಮಾಡುವೆನೆಂದು ನುಡಿದು ತನ್ನ ದೂತಿಯರ ಕೈಯಿಂದ ಜಡೆಯನ್ನು ಬಿಚ್ಚಿಸಿಕೊಂಡು ಆಭರಣಗಳನ್ನೆಲ್ಲಾ ತೆಗೆದು ಭದ್ರಪಡಿಸಿ ವಲ್ಲಭನ ಹಾಸಿಗೆಯ ಕೆಳಗೆ ಬೇರೊಂದು ಹಾಸಿಗೆಯನ್ನು ಹಾಕಿಸಿಕೊಂಡು ಅದರಮೇಲೆ ರಾತ್ರಿಯಲ್ಲಾ ಮಲಗಿದ್ದು ಬೆಳಗಾದಮೇಲೆ ತಾನು ಗಂಡನೊಡನೆ ಸುಖಪಟ್ಟವಳಂತೆ ತಂದೆ ತಾಯಿಗಳಿಗೆ ಹೇಳುತ್ತಾ ಈ ರೀತಿಯಾಗಿ ಹದಿನೈದು ದಿನಗಳು ಕಳೆಯಲಾಗಿ ರಾಜಪುತ್ರನು ಮಾವನಿಗೆ ತನ್ನ ಪ್ರಯಾಣವನ್ನರುಹಿ, ಆತನು ಕೊಟ್ಟ ಧನ, ಕನಕ, ವಸ್ತ್ರ, ವಾಹನಗಳನ್ನು ತೆಗೆದುಕೊಂಡು ಹೆಂಡತಿಯನ್ನು ಪಲ್ಲಕ್ಕಿಯೊಳು ಕುಳ್ಳಿರಿಸಿಕೊಂಡು ಚತುರಂಗಬಲ ಸಮೇತನಾಗಿ ಪ್ರಯಾಣಮಾಡಿ ಬರುತ್ತಾ ಕೆಲವು ದಿವಸಗಳಿಗೆ ಆ ವಟವೃಕ್ಷವನ್ನು ಸೇರಿ ಅಲ್ಲಿ ಬಿಡಾರಗಳನ್ನು ಮಾಡಿಕೊಂಡು ದಂಪತಿಗಳಿಬ್ಬರೂ ಸ್ನಾನವನ್ನು ಮಾಡಿ ಆ ಸರ್ಪದ ಹುತ್ತದಬಳಿಗೆ ಹೋಗಿ ನಾಗೇಂದ್ರನನ್ನು ಕುರಿತು ಪ್ರಾರ್ಥಿಸಲಾಗಿ ಆ ಭುಜಗೇಂದ್ರನು ಹೊರಗೆ ಬಂದನು. ಆಗಲಾ ದಂಪತಿಗಳು ಭಯರಹಿತರಾಗಿ ಆ ಸರ್ಪಕ್ಕೆ ನಮಸ್ಕರಿಸಿ ಅದರ ಹೆಡೆಗಳ ಮೇಲೆ ತಮ್ಮ ಹಸ್ತಗಳನ್ನಿಟ್ಟರು. ತಕ್ಷಣವೇ ಆ ಭುಜಗೇಂದ್ರನಿಗೆ ಶಾಪವಿಮೋಚನೆಯಾಗಿ ಜಟಾವಲ್ಕಲ ದಂಡಕಮಂಡಲಗಳಿಂದ ಯುಕ್ತನಾದ ಋಷಿಯ ಆಕಾರವನ್ನು ತಾಳಿದ್ದನ್ನು ಕಂಡು ವಿಕ್ರಮಸೇನನು ಆಶ್ಚರ್ಯಪಟ್ಟು ಆತನಿಗೆ ನಮಸ್ಕರಿಸಿ ಎಲೈ ಮಹಾತ್ಮನೇ ನಿನ್ನಂಥಾ ಮಹಾಪುರುಷನಿಗೆ ಶಾಪವು ಸಂಭವಿಸಲು ನಿಮಿತ್ತವೇನು ? ಇದರ ವೃತ್ತಾಂತವನ್ನು ನನಗರುಹಬೇಕೆನಲಾಗಿ ಮುನೀಂದ್ರನಿಂತೆಂದನು.

ಕೇಳಯ್ಯಾ—ವಿಕ್ರಮಸೇನರಾಯನೇ, ನಾನು ಜಲಧರನೆಂಬ ತಾಪಸನು ವಿಭಾಂಡಕನೆಂಬೊಬ್ಬ ಋಷಿವರ್ಯನಲ್ಲಿ ನಾನು ಅತಿ ಸ್ನೇಹವನ್ನು ಸಂಪಾದಿಸಿ ನಾವೀರ್ವರೂ ಬದರಿಕಾಶ್ರಮದಲ್ಲಿರುತ್ತಿರಲಾಗಿ ಒಂದಾನೊಂದು ದಿವಸ ನಾನು ಹಾಸ್ಯಕಾರಣದಿಂದ ಒಂದು ಹಗ್ಗವನ್ನು ಆತನ ಮೇಲೆ ಹಾಕಿ ಹಾವು ಹಾವು ಎಂಬದಾಗಿ ಹುಸಿಯನ್ನು ನುಡಿದೆನು. ಆಗಲಾ ಮುನೀಂದ್ರನು ನನ್ನನ್ನು ನೋಡಿ ಕೋಪಾವೇಷದಿಂದ ಎಲೈ—ಜಲಧರನೇ ಇಂದು ಮೊದಲ್ಗೊಂಡು ನೀನು ಸರ್ಪವಾಗಿ ಹೋಗೆಂದು ಶಾಪವನ್ನಿತ್ತನು. ತಕ್ಷಣದಲ್ಲಿಯೇ ನಾನು ಸರ್ಪದ ಆಕಾರವನ್ನು ತಾಳಿ ಹರಿದುಹೋಗುತಲಿರಲಾಗಿ ಮುನೀಂದ್ರನಿಗೆ ಕನಿಕರ ಹುಟ್ಟಿ ತಾನಾಗಿಯೇ ಶಾಪ ಪರಿಹಾರವನ್ನು ಯೋಚಿಸಿ ದುಃಖಿಸುತ್ತಾ ತಾನಿತ್ತಶಾಪಕ್ಕೆ ವಿಮೋಚನ ಉಂಟಾಗುವ ಸದುಪಾಯಗಳನ್ನು ತಿಳಿಸಿ ನಿನಗೆ ಮಹಿಮೆಯೂ ಪೂರ್ವಜ್ಞಾನವೂ ಉಂಟಾಗಿರುವುದೆಂದು ಹೇಳಿದನು. ಆದಕಾರಣ ಪ್ರಯತ್ನಪೂರ್ವಕವಾಗಿ ನಿಮ್ಮಿಬ್ಬರಿಗೂ ನಾನು ದಾಂಪತ್ಯವನ್ನುಂಟುಮಾಡಿ ನಿಮ್ಮಿಂದ

ಶಾಪವಿಮುಕ್ತನಾದೆನು. ಎಲೈ—ಮಹಾತ್ಮನೇ, ಈ ಸನ್ನ ಹುತ್ತವನ್ನು ಅಗಿಸಿ ಇದರಲ್ಲಿರುವ ಅಮೌಲ್ಯವಾದ ರತ್ನಗಳನ್ನು ತೆಗೆದುಕೊಳ್ಳುವವನಾಗೆಂದುಸುರಲಾ ಮುನೀಂದ್ರನ ಮಾತನ್ನು ಕೇಳಿದ ರಾಜತನಯನು ಆಶ್ಚರ್ಯಪರವಶನಾಗಿ, ಎಲೈ—ತಾಪಸೋತ್ತಮನೇ ಪಾಂಚಭೌತಿಕಗಳಾದ ಸಾಕಾರ ಶರೀರಗಳಿಗೆ ವೃದ್ಧಿಕ್ಷೀಣಗಳೂ, ಜನನ ಮರಣಗಳೂ ಉಂಟಾಗಿರುವ ಹಾಗೆ ನಿಮ್ಮಿಂದ ನನಗೆ ತಿಳಿಯಲ್ಪಟ್ಟಿತು. ನಿರಾಕಾರ ಭಾವವೆಂಬುದನ್ನು ನನಗೆ ಸ್ಪಷ್ಟವಾಗಿ ತಿಳಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಲಾಗಿ ಆ ತಪೋಧನನು ಇಂತೆಂದನು.


ವಿಕ್ರಮಸೇನರಾಯನು.


ಜಲಧರಮುನಿಯು.

## ಜಲಧರ ಮಹರ್ಷಿಯಿಂದ ವಿಕ್ರಮಸೇನರಾಯನಿಗೆ ಹೇಳಲ್ಪಟ್ಟ ನಿರಾಕಾರ ಭಾವವು.

ಎಲೈ ಪ್ರೊಢವಿಸಾಲಕ ತನಯನೇ! ದೇವತೆಗಳಿಗೂ ಅಸಾಧ್ಯವಾದಂಥಾ ಪ್ರಶ್ನೆಯನ್ನು ಮಾಡಿದವನಾದೆ. ಆಹಾ! ನೀನು ಕೇವಲ ಪುಣ್ಯಪುರುಷನು. ನಿನ್ನಲ್ಲಿ ನನಗುಂಟಾಗಿರುವ ಪ್ರೇಮಕ್ಕಾಗಿ ತಿಳಿಸುವೆನು ಲಾಲಿಸು. ಪಿಪೀಲಕವೇ ಮೊದಲಾದ ತ್ರಿಮೂರ್ತಿಗಳ ಪರ್ಯಂತರವೂ ಉಳ್ಳ ಶರೀರಗಳೆಲ್ಲವೂ ಸಾಕಾರ ಗಳಾಗುವುದು ಸತ್ಯನೆಂದಾತನಿಗೆ ಹಂಸ, ಪಂಚಾಕ್ಷರೀ ಮಂತ್ರವನ್ನು ಬೋಧಿಸಿ ಕೇಳು ಕಂದನೇ ಅಯಮಾತ್ಮಾ ಬ್ರಹ್ಮ ಎನ್ನುವ ಶ್ರುತಿಯನ್ನನುಸರಿಸಿ, ರೂಪ ನಾಮ ಕ್ರಿಯಾದಿಗಳಿಲ್ಲದಂಥಾ ಆತ್ಮಾರಾಮ ಬ್ರಹ್ಮವು ಸಾಕಾರಶರೀರದಲ್ಲಿ ವಾಯುರೂಪದಿಂದ ಪ್ರವೇಶಿಸಿ ಅಂತರ್ಬಹಿರ್ವ್ಯಾಪಕತ್ವಗಳುಂಟಾಗಿ, ಜಾಗ

ರಣ, ಸ್ವಪ್ನ, ಸುಷುಪ್ತಿಯೇ ಆದಿಯಾಗಿರುವ ಅವಸ್ಥೆಗಳೂ, ಹಗಲು ರಾತ್ರಿಗಳೂ, ಕ್ಷುತ್ಪಿಪಾಸಗಳೂ, ಅಸ್ಥಿತೆ, ಜಾಯತೆ, ವರ್ಧತೆ, ಪರಿಣಮಿತೆ, ಅಪಕ್ಷೀಯತೆ, ವಿನಶ್ಯತೆ ಎಂಬುವ ಷಡ್ಭಾವ ವಿಕಾರಗಳೂ ಇಲ್ಲದೆ ಕಳಾಸ್ವರೂಪನಾಗಿ ಸೂತ್ರಧಾರಿಯೆನ್ನಲ್ಪಟ್ಟು, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ಪಂಚಕೋಶಗಳಿಗೆ ವ್ಯತಿರಿಕ್ತನಾಗಿ, ತಂತಿಗಳಂತೆ ಷಟ್ಚಕ್ರಗಳನ್ನು ಸುತ್ತಿಕೊಂಡು ರೇಚಕ, ಪೂರಕ, ಕುಂಭಕಗಳಿಂದ ಈಡಾಪಿಂಗಳ ಸುಷುಮ್ನ ನಾಡಿಗಳಲ್ಲಿ ಸಂಚಾರಮಾಡುತ್ತಲಿರುವದು. ಅದರ ಆರೋಹಣ ಅವರೋಹಣಗಳೆಂಬೆರಡೂ ಪ್ರಣವಾಕ್ಷರದ್ವಯವೆಂದೂ ಪ್ರಾಜ್ಞ ಪುರುಷರು ಧ್ಯಾನಿಸುವರು. ಅಂಥಾ ಹಂಸೆಯನ್ನು ನಿರಾಕಾರನೆಂತಲೂ, ಆತನ ಮಹಿಮೆಯನ್ನು ಕಾಣಲಾರವೆಂಬದಾಗಿಯೂ ತ್ರಿಮೂರ್ತಿಗಳು ಹೇಳಿದರು. ನಾಮ ರೂಪಗಳಿಲ್ಲದಿರುವುದರಿಂದ ನಿರಾಕಾರನೆಂದು ಹೇಳಬೇಕಾಯಿತು. ಇವಕ್ಕೆ ಮಹಾವಾಕ್ಯಗಳೇ ಪ್ರಮಾಣಗಳು, ಇದೇ ಚೈತನ್ಯವು, ಮತ್ತು ಸಚ್ಚಿದಾನಂದವು. ಇವರಿಂದ ಕೇವಲ ಆತ್ಮನಾದ ಪರಿಪೂರ್ಣನನ್ನು ಗಣಿಸಿ, ಅದೇ ನೀನೆಂದು ತಿಳಿ. ಇದೇ ವೇದಾಂತವು ವೇದವಾಕ್ಯಗಳೇ ಇವಕ್ಕೆ ಮಾರ್ಗವೆಂದು ಅರಿ, ಈಡಾಪಿಂಗಳ ನಾಡಿಗಳೆರಡೂ ಸೂರ್ಯಚಂದ್ರರು ಸಂಚರಿಸುವ ದಾರಿಗಳು. ಆ ದಾರಿಗಳಲ್ಲಿ ಸಂಚರಿಸುವ ಹಂಸವು ಜಲಕುಂಡಲಿಯನ್ನು ಭೇದಿಸಿ ಸುಷುಮ್ನ ನಾಳಗಳನ್ನು ಹತ್ತಿಹೋಗಿ ಗಂಗಾ ಯಮುನೆಗಳಲ್ಲಿ ಸ್ನಾನಮಾಡಿ, ಆಗ್ನೇಯ ಮಂಟಪದಲ್ಲಿ ನಿಂತು ಅಲ್ಲಿಂದ ದೇವ, ನಾಗರತ್ನ ಕಾಂತಿಗಳನ್ನು ಕಳೆದು ಸೂರ್ಯಚಂದ್ರರ ಪ್ರಕಾಶವನ್ನು ಬಯಲಿನೊಳಿಟ್ಟು ಆನಂದಿಸುವನಾಗು. ವಿವೇಕಶೂನ್ಯರಾದ ಕೆಲವರು ಹಂಸಮಹಿಮೆಯನ್ನು ಗುರುಮುಖದಿಂದ ತಿಳಿಯಲಾರದೆ ಅದನ್ನೇ ಪ್ರಾಣವಾಯುವನ್ನಾಗಿ ಅರಿಯುವರು, ಗುದಸ್ಥಾನದಲ್ಲಿ ಅಪಾನವಾಯುವೂ, ನಾಭಿಯೊಳಗೆ ಸಮಾನವಾಯುವೂ, ಹೃದಯದಲ್ಲಿ ಪ್ರಾಣವಾಯುವೂ, ಕಂಠದಲ್ಲಿ ಉದಾನವಾಯುವೂ, ಶರೀರದ ಎಲ್ಲಾ ಪ್ರದೇಶದಲ್ಲಿಯೂ ವ್ಯಾನವಾಯುವು ನೆಲೆಸಿರುವುದೆಂದು ಪ್ರಮಾಣಸಿದ್ಧಗಳಾಗಿರುವಲ್ಲಿ ಪ್ರಾಣವಾಯುವು ತನ್ನ ಸ್ಥಾನವನ್ನು ಬಿಟ್ಟು ಉದಾನವಾಯುವನ್ನು ಕಳೆದು ರೇಚಕಪೂರಕಾದಿಗಳನ್ನುಂಟುಮಾಡುವುದೆಂಬ ವಿಷಯವು ವಿಪರ್ಯಾಸವಾಗಿರುವುದು. ಪ್ರಾಣವಾಯುವು ಹೃದಯಕಮಲದಲ್ಲಿ ನೀರು ತುಂಬಿದ ಹರವಿಯಂತೆ ಯಂತ್ರದೋಪಾದಿಯಲ್ಲಿದ್ದು ಟಕ, ಟಕ ಎಂಬದಾಗಿ ಶಬ್ದಮಾಡುತ್ತಲಿರುವುದು ಎಂಬದಾಗಿ ಸಕಲ ರಹಸ್ಯಗಳನ್ನು ತಿಳಿಸಿ ತನ್ನ ಆಶ್ರಮವನ್ನು ಕುರಿತು ಹೋದನೆಂದು ಹೇಳಲಾಗಿ ಇಂದ್ರನಂದನನು ಕೇಳಿ ಸ್ವಾಮಿಯೇ ನಿರಾಕಾರಭಾವವು ಕೇವಲ ಶ್ಲಾಘನೀಯವಾಗಿರುವುದೆಂದು ಅದರ

ಸಕಲ ಮಾರ್ಗಗಳನ್ನು ತಿಳಿಸು ಎನ್ನೈ—ಪುರುಷೋತ್ತಮನೇ, ಜಲಧರ ಮಹರ್ಷಿಯು ಆಶ್ರಮವನ್ನು ಕುರಿತು ತೆರಳಿದ ತರುವಾಯ ವಿಕ್ರಮಸೇನನು ನಡೆಸಿದ ಕಾರ್ಯಗಳನ್ನೆಲ್ಲಾ ತಿಳಿಸಬೇಕೆನಲಾಗಿ ವಾಸುದೇವನು ಹೇಳಲಾರಂಭಿಸಿದನು.

ಕೇಳೈಯ್ಯಾ—ಪಾರ್ಥನೇ ವಿಕ್ರಮಸೇನನು ಆ ಹುತ್ತವನ್ನು ಅಗೆಸಿ ಅದರೊಳಿದ್ದ ದೇವನಾಗರತ್ನಗಳನ್ನು ತೆಗೆದುಕೊಂಡು ಹೆಂಡತಿಯೊಡನೆ ಸರಸಸಲ್ಲಾಪಗಳನ್ನಾಡುವವನಾಗಿ ಸಂತೋಷದಿಂದ ತನ್ನ ದೇಶಕ್ಕೆ ಬರುತ್ತಾ ತಂದೆತಾಯಿಗಳಿಗೆ ತನ್ನ ವರ್ತಮಾನವನ್ನರುಹಿನಲಾಗಿ' ಆ ಚಿತ್ರಸೇನರಾಜನು ಪುತ್ರನು ಕಳುಹಿಸಿದ್ದ ಲಿಖಿತಗಳನ್ನು ಓದಿನೋಡಿ ಆಶ್ಚರ್ಯವನ್ನೈದಿ ಆತನ ಬರುವಿಕೆಯನ್ನೆ ಎದುರುನೋಡುತಲಿದ್ದನು. ಈಅಂತರಾಳದಲ್ಲಿ ಕೋಶಲದೇಶವನ್ನು ಆಳುತಲಿರುವ ಚಕ್ರವರ್ತಿಯು ತನಗೆ ಸಂತಾನವಿಲ್ಲದ ಕಾರಣದಿಂದ ತನ್ನ ಪಟ್ಟದಾನೆಯು ಯಾರನ್ನು ಕರೆತರುವುದೋ ಅವರಿಗೆ ರಾಜ್ಯವ ಪದವಿಯನ್ನಿತ್ತು ತಾನು ಪತ್ನಿಸಮೇತನಾಗಿ ವಾನಪ್ರಸ್ಥಾಶ್ರಮಕ್ಕೆ ಹೋಗಲೆಳಸಿ ತನ್ನ ಪಟ್ಟದಾನೆಯನ್ನು ಸಿಂಗರಿಸಿ ಬಿಟ್ಟಿದ್ದನು. ಆ ಪಟ್ಟದಾನೆಯು ಅನೇಕ ದೇಶಗಳನ್ನೂ, ಪಟ್ಟಣಗಳನ್ನೂ, ಗ್ರಾಮಗಳನ್ನೂ ತಿರುಗಿ ಮಾರ್ಗದಲ್ಲಿ ಸಿಕ್ಕಿದ ವಿಕ್ರಮಸೇನರಾಯನನ್ನು ಕಂಡು ಅವನನ್ನು ತನ್ನಮೇಲೆ ಕುಳ್ಳಿರಿಸಿಕೊಂಡು ಹೋಗುತಲಿತ್ತು. ಆತನ ಭಾರ್ಯೆಯೇ ಮೊದಲಾದ ಚತುರಂಗಬಲವೆಲ್ಲಾ ಆ ಪಟ್ಟದಾನೆಯು ಹಿಂದೆ ಬರುತಲಿದ್ದುದರಿಂದ ಸಕಲ ವೃತ್ತಾಂತವನ್ನೂ ಅರಿತು ಸಂತೋಷಪಡುತ್ತಾ ಆತನ ಹಿಂದೆಯೇ ಹೋಗುತಲಿದ್ದರು. ಆ ಪಟ್ಟದಾನೆಯು ಬರುತ್ತಿರುವುದನ್ನು ಕಂಡು ಮಂತ್ರಿ ಪ್ರಧಾನ ಮೊದಲಾದವರು ಆ ಮಹಾತ್ಮನಿಗೆದುರಾಗಿ ಹೋಗಿ ದೇವೇಂದ್ರನಂತೆ ಪ್ರಕಾಶಿಸುತಲಿರುವ ರಾಜಪುತ್ರನಿಗೆ ನಮಸ್ಕರಿಸಿ ಅವನ ವರ್ತಮಾನವನ್ನೆಲ್ಲಾ ವಿಚಾರಿಸಿ ತಿಳಿದವರಾಗಿ ಆಶ್ಚರ್ಯವನ್ನು ಹೊಂದಿ ಬಹುವಿಧಗಳಿಂದಾತನನ್ನು ಸ್ತುತಿಸಿ ಪಟ್ಟಣದೊಳಕ್ಕೆ ಕರೆತಂದು ರಾಜಾಸ್ಥಾನದೊಳುಚಿತಾಸನದಲ್ಲಿ ಕುಳ್ಳಿರಿಸಿ, ಚಕ್ರವರ್ತಿಗೆ ನಮಸ್ಕರಿಸಿ ಆ ರಾಜತನಯನ ದೇಶವನ್ನೂ, ತಂದೆತಾಯಿಗಳನ್ನು ಇವನು ಝುಲ್ಲಿಕಾಯಂತ್ರವನ್ನು ಹೊಡೆದು ಹೇಮಕಾಂತಾಮಣಿಯನ್ನು ತಂದಿರುವದನ್ನು ಇದನ್ನೆಲ್ಲಾ ತಿಳುಹಿಸಿದರು. ಆಗಲಾ ಚಕ್ರವರ್ತಿಯು ಆನಂದಪರವಶನಾಗಿ ದಿಗ್ಗನೆ ಎದ್ದು ಆತನನ್ನಾಲಿಂಗಿಸಿ ಬಹುಪ್ರಕಾರದಿಂದ ಸ್ತೋತ್ರಮಾಡಿ ಅತ್ಯಂತ ಸಂಭ್ರಮದಿಂದ ಅತನಗೆ ಪಟ್ಟವನ್ನು ಕಟ್ಟಿ ತಾನು ಪತ್ನೀಸಮೇತನಾಗಿ ತಪಸ್ಸನ್ನು ಮಾಡಲೆಳಸಿ ಅರಣ್ಯಕ್ಕೆ ತೆರಳಿದನು.

ಬಳಿಕಲಾ ವಿಕ್ರಮಸೇನನ ತಂದೆತಾಯಿಗಳು ಮಗನ ಬರುವಿಕೆಯನ್ನೆದುರನೋಡುತ್ತಾ ಚಕ್ರವರ್ತಿಯಾಜ್ಞಾಲಿಖಿತವನ್ನು ಓದಿನೋಡಿ ತಮ್ಮ ಪುತ್ರನೆಂದು

ಸಂತೋಷಮಂ ತಾಳ್ದು, ತಂದೆತಾಯಿಗಳೂ, ಸಹೋದರರೂ ಚತುರಂಗಬಲ ಸಮೇತರಾಗಿ ಚಕ್ರಿವರ್ತಿಯ ಪಟ್ಟಕ್ಕೆ ಹೋಗಲಾಗಿ ವಿಕ್ರಮಸೇನನು ಜನನೀ ಜನಕರಿಗೂ, ಸಹೋದರರಿಗೂ ಅಭಿವಂದಿಸಿ ತನ್ನ ವೃತ್ತಾಂತವನ್ನೆಲ್ಲ ತಿಳಿಸಿ ಸಂತೋಷವನ್ನುಂಟುಮಾಡಿ ತಂದೆತಾಯಿಗಳನ್ನು ತನ್ನ ಬಳಿಯಲ್ಲಿಯೇ ಇಟ್ಟು ಕೊಂಡು ಅಣ್ಣಂದಿರನ್ನು ಮಹಾರಾಷ್ಟ್ರದೇಶಕ್ಕ ಕಳುಹಿಸಿ ಭೂಮಂಡಲವ ನ್ನೆಲ್ಲಾ ತಾನು ಪರಿಪಾಲಿಸುತ್ತಾ ತನ್ನ ಕೀರ್ತಿಯು ಲೋಕದೊಳೆಲ್ಲಾ ವ್ಯಾಪಿ ಸುವಂತೆ ಮಾಡಿ ಮಹೋನ್ನತ್ಯೈಶ್ವರ್ಯ ಸುಖಗಳನ್ನನುಭವಿಸುತ್ತಾ ಅನೇಕ ದಿವಸ ಗಳು ರಾಜ್ಯವನ್ನು ಪರಿಪಾಲಿಸಿ ಬಳಿಕ ದೇಹವನ್ನು ತೊರೆದು ಶಾಶ್ವತವಾದ ಮೋಕ್ಷವನ್ನೈದಿದನೆಂದು ಶ್ರೀಕೃಷ್ಣನುಸುರಲಾಗಿ ಅರ್ಜುನನ್ನು ಕೇಳಿ ಪರಮಾ ನಂದಭರಿತನಾಗಿ ಸ್ವಾಮಿಯೇ ಇದು ಬಹಳ ಆನಂದವಾಗಿರುವುದು ಇನ್ನು ಶಯ ನಮಾಡೋಣವೆಂದು ಹೇಳಿ ಈರ್ವರೂ ಶಯ್ಯೆಯಲ್ಲಿ ಮಲಗಿ ಸುಖನಿದ್ರೆಯನ್ನು ಮಾಡತೊಡಗಿದರು.

ಎಂಟನೆಯ ಕಥೆ ಸಂಪೂರ್ಣ.



ಶ್ರೀರಸ್ತು.

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ.

## ರಾಜಹಂಸನೆಂಬ ಒಂಭತ್ತನೆಯ ರಾಜಪುತ್ರನ ಕಥೆ.

ಒಂಭತ್ತನೆಯ ದಿನದ ರಾತ್ರಿ ಕೃಷ್ಣಾರ್ಜುನರಿಬ್ಬರೂ ಯಮುನಾನದಿ ಪ್ರಾಂತ್ಯದ ಮರಳುದಿಣ್ಣೆಗಳಲ್ಲಿ ಕೂತುಕೊಂಡು ಭೋಜನಾನಂತರದೊಳು ತಾಂಬೂ ಲವನ್ನು ಕೈಕೊಂಡು ತಂಪಾದ ಮಂದಮಾರುತಕ್ಕಾನಂದಿಸುತ್ತಾ ಅರ್ಜುನನು ಶ್ರೀಕೃಷ್ಣನನ್ನು ಕುರಿತು, ಎಲೈ ಮಹಾನುಭಾವನೇ! ಅದ್ಭುತಭಾವವುಳ್ಳದ್ದಾ ಗಿರುವ ಒಂದಾನೊಂದು ಪುಣ್ಯಚರಿತ್ರೆಯನ್ನೆನಗರುಹಬೇಕೆಂದು ಪ್ರಾರ್ಥಿಸಲಾಗಿ ಕರುಣಾರಸಭರಿತನಾದ ಭಗವಂತನು, ಎಲೈ—ಪಾರ್ಥನೇ! ರಾಜಹಂಸರಾ ಯನ ಚರಿತ್ರೆಯನ್ನು ಕೇಳೆಂದು ಹೇಳಲಾರಂಭಿಸಿದನು.

ಎಲೈ—ಅಮರ ರಾಜತನಯನೇ ? ಕೇಳು. ಹಿಂದೆ ಮಾಳವದೇಶವನ್ನು ಹಂಸಪಾದನೆಂಬ ಧೊರೆಯು ಆಳುತಲಿದ್ದನು. ಆತನಿಗೆ ರಾಜಹಂಸನೆಂತಲೂ, ಹಂಸಗಮನನೆಂಬದಾಗಿಯೂ, ಇಬ್ಬರು ಮಕ್ಕಳಿದ್ದರು. ಅವರಲ್ಲಿ ಹಿರಿಯ ಮಗ ನಾದ ರಾಜಹಂಸನು ಅತ್ಯಂತ ಸೌಂದರ್ಯಶಾಲಿಯಾಗಿಯೂ, ಧೈರ್ಯಸಾಹಸಪರಾ ಕ್ರಮವೂ, ಗಾಂಭೀರ್ಯವು ಉಂಟಾದವನಾಗಿಯೂ, ಸಕಲ ವಿದ್ಯಾವಿಶಾರದನಾ ಗಿಯೂ, ಧನುರ್ವಿದ್ಯೆಯೊಳು ಬಹಳ ಕುಶಲತ್ವವನ್ನು ಹೊಂದಿದವನಾಗಿಯೂ ಇರು

ತ್ತಿದ್ದನು. ಕೆಲವು ದಿನಗಳಮೇಲೆ ಅವನು ದಿವ್ಯಾಸ್ತ್ರಪ್ರಯೋಗಗಳನ್ನಭ್ಯಾಸ ಮಾಡಿ, ವೇದಾಂತಶಾಸ್ತ್ರದೊಳಗೆ ಧರ್ಮ, ಮರ್ಮ, ಕರ್ಮಗಳ ಅರ್ಥಜ್ಞಾನ ಉಂಟಾಗದೆ ಸಂಶಯಾತ್ಮನಾಗಿ ಈ ವಿಷಯಗಳನ್ನು ಗುರುಮುಖದಿಂದ ಅರಿಯ ಬೇಕೆಂದು ಮನಸ್ಸಿನಲ್ಲಿ ಯೋಚಿಸಿ ಅಭ್ಯಾಸಪರರಾಗಿಯೂ, ಯೋಗಿಗಳಾಗಿಯೂ ಇರುವ ಮಹನೀಯರು ಬಂದು ಇಳಿಯುವ ಮಠನಿವಾಸಗಳಿಗೆ ಹೋಗಿ ಅಂಥವ ರನ್ನಾಶ್ರೈಸಿ ಭಕ್ತಿವೈರಾಗ್ಯದಿಂದ ಆ ಹಿರಿಯರಿಗೆ ಶುಶ್ರೂಷೆಗಳನ್ನು ಮಾಡುತ್ತಾ ಅವರಿಂದ ತನ್ನ ಮನಸ್ಸಿನ ಸಂಶಯಗಳನ್ನು ಒಂದೊಂದಾಗಿ ವಿವರದಿಂದ ತಿಳಿದು ಕೊಳ್ಳುತಲಿದ್ದನು. ಆ ರಾಜಹಂಸನು ಈ ಲೋಕದ ವ್ಯಾಪಾರಗಳಿಗೆ ಮನ ಕೊಡದೆ ಈರೀತಿಯಾಗಿ ಪ್ರವರ್ತಿಸುತಲಿರುವದನ್ನು ತಂದೆತಾಯಿಗಳು ಕಂಡು ಮಗನನ್ನು ನೋಡಿ, ಎಲೈ—ಪುತ್ರನೇ ನಿನ್ನಿಂದಲೇ ಸುಖವನ್ನೂ, ಸಂತೋಷ ವನ್ನೂ, ಕೀರ್ತಿಯನ್ನೂ ಮತ್ತು ಪುಣ್ಯಲೋಕವನ್ನೂ ನಾವು ಪಡೆಯಬೇಕೆಂದು ಉತ್ಸಾಹಪರವಶರಾಗಿದ್ದೆವು. ಅಹಹಾ ನಿನ್ನ ಗಾಂಭೀರ್ಯ ಬಲಪರಾಕ್ರಮಗ ಳನ್ನು ತ್ಯಜಿಸಿ, ರಾಜಯೋಗ್ಯವಾದ ಕಾರ್ಯಗಳನ್ನು ಬಿಟ್ಟು ನೀನೀಗ ಭೃತ್ಯನೋ ಪಾದಿಯಲ್ಲಿ ಸನ್ಯಾಸಿಗಳನ್ನೂ, ಯೋಗಿಗಳನ್ನೂ, ಪೂಜಿಸುತ್ತಾ ನಿದ್ರಾಹಾರಗಳಿ ಲ್ಲದೆ ಕೇವಲ ಕೃಶಶರೀರ ಉಳ್ಳವನಾಗಿರುವೆ. ಅಯ್ಯೋ ಪ್ರಜೆಗಳು ನಮ್ಮನ್ನು ನಿಂದಿಸುತ್ತಾ ನಿನ್ನನ್ನು ಅಪಹಾಸ್ಯ ಮಾಡುತ್ತಲಿರುವರು. ಯುವರಾಜ್ಯ ಪಟ್ಟಾ ಭಿಷೇಕವನ್ನು ಹೊಂದಿ ನಮಗೆ ಆನಂದವನ್ನುಂಟುಮಾಡೆಂದು ಹೇಳಲು ಮಾತಂ ಕೇಳ್ದು ರಾಜಹಂಸನು ಫಕ್ಕನೆ ನಗುತ್ತಾ ತಂದೆತಾಯಿಗಳಿಗೆ ನಮಸ್ಕರಿಸಿ ಭಗವ ತ್ಸ್ವರೂಪವುಳ್ಳ ತಂದೆತಾಯಿಗಳೇ ನನ್ನಿಂದ ನಿಮ್ಮ ಇಷ್ಟಪೂರ್ತಿಯಾಗುವುದ ರಲ್ಲಿ ಸಂಶಯವಿಲ್ಲ. ಹರಿಶ್ಚಂದ್ರರೇ ಮೊದಲಾದ ಚಕ್ರವರ್ತಿಗಳೂ, ಮನು ಮಾಂಧಾತರೂ, ಗಯನೂ, ಅಂಬರೀಕ್ಷನೂ, ಮುಂತಾದ ರಾಜಾಧಿರಾಜರೂ ಭೂಲೋಕದ ಸುಖಸಾಮ್ರಾಜ್ಯಗಳನ್ನು ವ್ಯರ್ಥವಾದವುಗಳಂತೆ ಭಾವಿಸಿ ನವರ ತ್ನಗಳನ್ನೂ ಬೆಳ್ಳಿಯನ್ನೂ ಇನ್ನೂ ವಿವಿಧ ವಸ್ತುಗಳನ್ನೂ, ನೆಂಟರಿಷ್ಟರೆಂಬುವ ರನ್ನೂ, ನಿಸ್ಸಾರವಾಗಿ ಎಣಿಸಿ ಶಾಶ್ವತ ಸುಖಾನಂದವನ್ನೈದುವುದಕ್ಕಲ್ಲವೇ ರಾಜ್ಯಗಳನ್ನು ತ್ಯಜಿಸಿ ಅರಣ್ಯಕ್ಕೆ ತೆರಳಿದರು. ಅಂತಪ್ಪ ವೇದಾಂತ ಮಾರ್ಗ ವನ್ನು ನೀವು ಸಾರವಿಲ್ಲದ್ದನ್ನಾಗಿ ಅರಿಯಬಹುದೇ. ಆ ಅಪವರ್ಗ ಮಾರ್ಗ ಗಳು ಕೇವಲ ಬಾಲ್ಯದಲ್ಲಿಯೇ ಅಭ್ಯಾಸಾನುಕೂಲಸಾಧ್ಯವು. ತರುವಾಯ ರಾಜ್ಯಸುಖಗಳನ್ನನುಭವಿಸಬಹುದೆಂದು ಹೇಳಿ ಅವರಿಗೆ ಧ್ರುವ, ಪ್ರಹ್ಲಾದ ಮುಂತಾದ ಭಗವದ್ಭಕ್ತರ ಚರಿತ್ರೆಗಳನ್ನು ತಿಳಿಸಿ ಅವರನ್ನು ಸಂತೋಷಗೊಳಿಸಿ ತನ್ನ ಭಕ್ತಿ ವೈರಾಗ್ಯ ಮಾರ್ಗಗಳನ್ನು ತಪ್ಪದೇ ಆಚರಿಸುತಲಿದ್ದನು.

ಹೀಗಿರುವಾಗ ಒಂದಾನೊಂದು ದಿವಸ ದೀರ್ಘಸಾಧುವೆಂಬೋರ್ವ ತಾಪಸನು ಬಂದು ಆ ರಾಜತನಯನಿಂದ ಪೂಜಿಸಲ್ಪಟ್ಟವನಾಗಿ ಅವನ ಬಾಲ್ಯವಯಸ್ಸಿಗೂ ಭಕ್ತಿವೈರಾಗ್ಯಗಳಿಗೂ ಬಹಳವಾಗಿ ಸಂತೋಷಪಟ್ಟು ತನಗೆ ಅವಸಾನಕಾಲವು ಪ್ರಾಪ್ತವಾಗಿರುವುದನ್ನು ತಿಳಿದು, ತನ್ನ ಬಳಿಯೊಳಿದ್ದ ಶತ್ರುನಾಶನವೆಂಬ ಚಂದ್ರಾಯುಧವನ್ನಾರಾಜಪುತ್ರನಿಗೆ ಮಂತ್ರಪೂರ್ವಕವಾಗಿ ದಾನಕೊಟ್ಟು ಎಲೈ ಮಗುವೇ ! ಕೃತಯುಗದಲ್ಲಿ ಘೋರಜಟನೆಂಬ ಮುನಿಪತಿಯು ಆದಿರಾಕ್ಷಸರಿಂದಲೂ, ದುಷ್ಟಮೃಗಗಳಿಂದಲೂ, ಸಂಭವಿಸುತ್ತಿದ್ದ ಬಾಧೆಗಳನ್ನು ತಡೆಯಲಾರದೆ ಸೃಷ್ಟಿಕರ್ತನನ್ನು ಕುರಿತು ತಪಸ್ಸುಮಾಡಿ ಆ ದೇವನಿಂದ ಈ ಚಂದ್ರಾಯುಧವನ್ನು ಪಡೆದು ದುಷ್ಟರಾದ ನೀಚರನ್ನು ಸಂಹರಿಸುವಂತೆಯೂ ವ್ಯಾಘ್ರಭಲ್ಲೂಕಾದಿ ದುಷ್ಟಮೃಗಗಳನ್ನೂ ಸದೆಬಡಿಯುವಂತೆಯೂ ಈ ಆಯುಧವನ್ನು ಇಟ್ಟುಕೊಂಡು ತಾನು ಭಯವಿಲ್ಲದವನಾಗಿ ಸಮಾಧಿನಿಷ್ಟನಾಗಿ ಯೋಗಸಾಧನೆಯೊಳಿದ್ದನು. ಅಂದು ಮೊದಲು ಈ ಆಯುಧವು ಶತೃಗಳನ್ನು ಸದೆಬಡಿಯುತ್ತಲಿತ್ತು, ಅಂಥಾ ಈ ಆಯುಧವು ಶಿಷ್ಯಪರಂಪರೆಯಾಗಿ ಕ್ರಮವರಿತು ನನಗೆ ಲಭಿಸಿತು. ಅದನ್ನು ನನ್ನಿಂದ ನೀನು ಗ್ರಹಿಸಲ್ಪಟ್ಟವನಾದೆ, ಇದರಿಂದ ಸಕಲ ಶತ್ರುಗಳನ್ನು ನೀನು ಜೈಸಿ, ಸಾಮ್ರಾಜ್ಯ ಪಟ್ಟಾಭಿಷೇಕವನ್ನು ಹೊಂದಿ ಸಮಸ್ತ ಸುಖಗಳನ್ನು ಅನುಭವಿಸುವನಾಗು, ಇದನ್ನು ಧರಿಸಿದವರು ಮೂರು ಸಂವತ್ಸರಗಳವರೆಗೂ ಪಾದಚಾರಿಗಳಾಗಿಯೇ ಭೂಸಂಚಾರವನ್ನು ಮಾಡಿದರೆ ತರುವಾಯ ಸುಖಾನುಭವವನ್ನು ಹೊಂದಬೇಕಾಗಿರುವದು, ನಿನ್ನ ದೇಹಾವಸಾನ ಕಾಲದಲ್ಲಿ ಈ ಆಯುಧವು ಸತ್ಯಲೋಕಕ್ಕೆ ಹೋಗಿ ಸೇರುವುದೆಂದು ನುಡಿದು ತಾಪಸೋತ್ತಮನು ಪ್ರಾಣವಿಯೋಗವುಳ್ಳವನಾದನು. ಆಗ ರಾಜಹಂಸನು ಬಹಳವಾಗಿ ದುಃಖಿಸುತ್ತ ಆ ಮಹಾತ್ಮನಿಗೆ ಸಮಾಧಿವಿಧಿಗಳನ್ನು ನೆರವೇರಿಸಿ ಅನೇಕಜನ ಸತ್ಪಾತ್ರರಿಗೆ ವಿವಿಧವಾದ ದಾನಧರ್ಮಗಳನ್ನು ಕೊಟ್ಟು ತಂದೆತಾಯಿಗಳಿಗೆ ನಮಸ್ಕರಿಸಿ ಚಂದ್ರಾಯುಧದ ಮಹಿಮೆಯನ್ನವರಿಗೆ ತಿಳುಹಿ ಭೂಸಂಚಾರ ವ್ಯಾಜ್ಯವನ್ನು ಹೇಳಿ ಅವರ ಅಪ್ಪಣೆಯನ್ನು ಪಡೆದು ಪಾದಚಾರಿಯಾಗಿ ಒಂಟಿಯಾಗಿಯೇ ಉತ್ತರದಿಕ್ಕನ್ನು ಕುರಿತು ಪ್ರಯಾಣವಾಗಿ ಹೋಗುತ್ತಾ ನದಿಗಳಲ್ಲಿಳಿದು ಸ್ನಾನವಂಗೈಯುತ್ತಾ ತಾಪಸೋತ್ತಮರನ್ನು ಸೇವಿಸುತ್ತಾ ನಿರ್ಭಯವಾಗಿ ಬಿಲಗಳನ್ನು ಪ್ರವೇಶಿಸುತ್ತಾ, ಪರ್ವತಗಳನ್ನೇರುತ್ತಾ, ಒಂದೊಂದು ಆಶ್ರಮಗಳಲ್ಲಿ ಕೆಲವು ದಿವಸಗಳಲ್ಲಿರುತ್ತಾ ತನ್ನ ಅಭಿಪ್ರಾಯವು ಯಾರಿಂದ ಲಭಿಸುವುದೋ ಎಂದು ಮನದೊಳು ಚಿಂತಿಸುತ್ತಾ ಈ ಪ್ರಕಾರವಾಗಿ ಎರಡು ಸಂವತ್ಸರಗಳು ಕಳೆದು ಬಳಿಕ ವಾಲ್ಮೀಕನೆಂಬ ತಾಪಸೋತ್ತಮನ ಆಶ್ರಮವನ್ನು ಸೇರಿ ಆ ಮುನೀಂದ್ರನಿಗೆ ನಮಸ್ಕರಿಸಿದನು. ಆಗಲಾ ವಾಲ್ಮೀಕಿಯು ರಾಜ

ಪುತ್ರನನ್ನು ಸಂತೈಸಿ ತನ್ನ ಸಮೀಪದಲ್ಲಿ ಕುಳ್ಳಿರಿಸಿಕೊಂಡು ತನ್ನ ಕೈಗಳಿಂದಾತನ ಮೈಯ್ಯನ್ನು ಸವರಿ ರಾಜತನಯನೇ ನಿನ್ನ ವೃತ್ತಾಂತವನ್ನೆಲ್ಲಾ ನನಗೆ ಅರುಹುವ ನಾಗೆನಲಾತನು ತನ್ನ ದೇಶವನ್ನೂ, ತಂದೆತಾಯಿಗಳನ್ನೂ, ತಾಪಸವರ್ಯನು ತನಗೆ ಕೊಟ್ಟ ಚಂದ್ರಾಯುಧದ ವರ್ತಮಾನವನ್ನೂ, ತಾನು ಭೂಸಂಚಾರಕ್ಕೆ ಬಂದ ನಿಮಿತ್ತವನ್ನೂ, ಇವುಗಳನ್ನೆಲ್ಲಾ ವಿವರಿಸಿ ಕ್ರಮವಾಗಿ ತಿಳುಹಿದನು. ಆಗಲಾ ಮುನಿವರ್ಯನು ಸಂತೋಷವುಳ್ಳವನಾಗಿ, ಎಲೈ—ಪುಣ್ಯಾತ್ಮನೇ ನೀನು ಕೆಲವು ದಿವನಗಳವರೆಗೂ ನನ್ನ ಆಶ್ರಮದಲ್ಲಿಯೇ ಇದ್ದು ಮಾರ್ಗಾಯಾಸವನ್ನು ವಿಶ್ರಮಿಸಿಕೊಂಡು ಹೋಗುವವನಾಗೆನಲಾಗಿ ರಾಜತನಯನು ಮುನೀಂದ್ರನ ಅಪ್ಪಣೆಯಂತೆ ಆ ಮಹಾತ್ಮನಿಗೆ ಶುಶ್ರೂಷೆಗಳನ್ನು ಮಾಡುತ್ತಾ ಫಲಪುಷ್ಪಾದಿಗಳನ್ನು ತಂದುಕೊಡುತ್ತಾ, ಆತನಿಂದ ವೇದಾಂತ ರಹಸ್ಯಗಳನ್ನೂ ದಿವ್ಯಾಸ್ತ್ರ ಮರ್ಮಗಳನ್ನು ಸಂಗ್ರಹಿಸುತ್ತಾ ಒಂದಾನೊಂದು ದಿವನ ಆ ಮುನಿಪನನ್ನು ಕುರಿತು, ಎಲೈ—ತಾಪಸವರ್ಯನೇ ಮಾನುಷಶರೀರಧಾರಿಗಳಿಗೆ ಬ್ರಹ್ಮತ್ವವು ಯಾವಬಗೆಯಿಂದ ಲಭಿಸುವುದು, ಮನಸ್ಸು ಯಾವಪ್ರಕಾರದಿಂದ ಬ್ರಹ್ಮನಲ್ಲಿ ನೆಲೆವಾಗುವುದು ಇದನ್ನೆನಗುಪದೇಶಿಸಬೇಕಂದು ಪ್ರಾರ್ಥಿಸಲಾಗಿ ತಪೋಧನನು ಫಕ್ಕನೆ ನಕ್ಕು ಎಲೈ ರಾಜತನಯನೇ ನಿನ್ನ ಪ್ರಶ್ನೆಗಳು ಅಮೋಘವಾದವುಗಳು. ದೇವತೆಗಳಿಂದಲೂ ಹೇಳಲಳವಲ್ಲ ಕೇವಲ ಗೋಪ್ಯವಾದ ದೇವತಾ ರಹಸ್ಯಗಳನ್ನು ಕೇಳಿದವನಾದೆ. ಪಾವನಕರವಾದ ಆ ರಹಸ್ಯವನ್ನು ನಿನಗೆ ಬೋಧಿಸುವೆನೆಂದು ಮುನೀಂದ್ರನು ಹೇಳಲಾರಂಭಿಸಿದನು.

### ರಾಜಹಂಸರಾಯನಿಗೆ ವಾಲ್ಮೀಕಿಮಹರ್ಷಿಯಿಂದ ಬೋಧಿಸಲ್ಪಟ್ಟ ಅಮನಸ್ಕಭಾವವು.

ಎಲೈ,—ರಾಜಹಂಸನೇ! ಲಾಲಿಸು. ಆನಂದೋ ಬ್ರಹ್ಮ, ಎನ್ನುವ ಶ್ರುತಿಯ ಪ್ರಕಾರ ಅದನ್ನನುಸರಿಸಿ ಕಶ್ಯಪ, ಭರದ್ವಾಜ, ಗೌತಮ, ವಸಿಷ್ಠ, ವಿಶ್ವಾಮಿತ್ರ, ನಾರದ, ಶುಕರೇ ಮೊದಲಾದ ಮಹಾ ಋಷಿಗಳು ಇನ್ನೂ ಅನೇಕ ದೇವ ಮನುಷ ಶರೀರಧಾರಿಗಳು ನಚ್ಚಿದಾನಂದ ಸ್ವರೂಪನಾದ ಬ್ರಹ್ಮನನ್ನು ಉದ್ದೇಶಿಸಿ, ಸದ್ರೂಪ ಚಿದ್ರೂಪಗಳನ್ನೊಂದಾಗಿ ಭಾವಿಸಿ, ಆನಂದ ಸ್ವರೂಪರಾದುದರಿಂದ ನಾವು ಬ್ರಹ್ಮವೇತೃಗಳಾದೆವು. ದೇವ ಮನುಜರಲ್ಲಿ ಯಾರೇ ಆಗಲಿ ಬ್ರಹ್ಮತ್ವವನ್ನು ಹೊಂದದ ಮೋಕ್ಷವನ್ನು ಹೊಂದಲಾರರು. ವಿಧಿ, ನಿಷೇಧ, ನಿಯಮ, ನಿಷ್ಠಾ, ಉಪವಾಸ, ಸ್ನಾನ, ಜಪ, ಹೋಮವೇ ಮೊದಲಾದ ಕ್ರಿಯೆಗಳು ಮೋಕ್ಷಮಾರ್ಗಗಳಲ್ಲ. ಅವು ಕರ್ಮಕಾಂಡಗಳಲ್ಲ. ಕರ್ಮಕಾಂಡದಲ್ಲಿ ಮನವುಳ್ಳವರ ಮಹಾಗರ್ತೆಯಲ್ಲಿ ಇದ್ದ ಜಕ್ಕಿನಂತೆ ವಿಮುಕ್ತರಾಗದೆ ಅಂದರೆ ಮೋಕ್ಷದಾರಿಯನ್ನೇ ಅರಿಯದವರಾಗಿ ಮಗ್ನರಾಗುವರು. ದೇವ


ರಾಜಹಂಸಭೂಪಾಲ.


ವಾಲ್ಮೀಕಿಮಹರ್ಷಿ.

ಮಾನವರಲ್ಲಿ ಯಾರೇ ಆದರೂ ಸನ್ಯಾಸವನ್ನೈದಿ ತಪೋವೃತ್ತಿಯಲ್ಲಿದ್ದರೂ, ಗೃಹಸ್ಥಾಶ್ರಮದಲ್ಲಿದ್ದರೂ ಭೇದಾಭೇದನಾದ ಬ್ರಹ್ಮತ್ವವನ್ನೈದಿ ಮೋಕ್ಷವನ್ನು ಹೊಂದುವರು, ವೇದಗಳಲ್ಲಿ ಅಥರ್ವಣವೂ, ಉಪನಿಷತ್ತುಗಳೊಳಗೆ ನಿರ್ಗುಣ ಬ್ರಹ್ಮೋಪನಿಷತ್ತೂ, ಶಾಸ್ತ್ರಗಳಲ್ಲಿ ವೇದಾಂತ ಶಾಸ್ತ್ರವೂ, ಗುಣಗಳೊಳಗೆ ಸತ್ವಗುಣವೂ, ಯೋಗಗಳಲ್ಲಿ ರಾಜಯೋಗವೂ, ಮಂತ್ರಗಳಲ್ಲಿ ಪ್ರಣವವೂ, ಮಾರ್ಗಗಳಲ್ಲಿ ಕುಂಡಲಿ ಮಾರ್ಗವೂ ಮನುಜರಲ್ಲಿ ವೇದಾಂತವನ್ನು ಬಲ್ಲವರೂ ಶ್ರೇಷ್ಟರೆಂದು ತಿಳಿಯುವವನಾಗು. ಮನಸ್ಸು ಲಯವಾಗುವುದೇ ಅಮನಸ್ಕವು. ಇದೇ ಯೋಗವೆಂದು ಹೇಳಲ್ಪಡುವುದು. ಆದುದರಿಂದ ನೀನು ಈ ಅಷ್ಟಾಕ್ಷರೀ ಮಂತ್ರವನ್ನು ಗ್ರಹಿಸಿ, ಷಡಾಧಾರಗಳಿಗೆ ಅಧಿದೇವತೆಗಳಾದಂಥಾ ಗಣಪತಿ, ಬ್ರಹ್ಮ, ವಿಷ್ಣು, ಶಿವನು, ಜೀವನೂ, ಆತ್ಮನೂ ಇವರುಗಳಿಗೆ ನಮಸ್ಕರಿಸಿ, ನಾದಬ್ರಹ್ಮನನ್ನೂ ಸೇವಿಸಿ, (ರಾಂ) ಎಂಬುವ ಬೀಜಾಕ್ಷರದಲ್ಲಿ ದೃಷ್ಟಿಯನ್ನು ನಿಲ್ಲಿಸಿ ಆ ದೃಷ್ಟಿಯು ಚಲಿಸದ ಹಾಗೆ ಕೆಳಗಣ ಕುಂಡಲಿಯು ಹೊಂದಿರುವ ಹಂಸವನ್ನು ರೇಚಕ ಪೂರಕಾದಿಗಳಿಂದ ಆ ಜಪಕುಂಡಲಿಗೆ ಸಮುಖವಾಗಿ ಮಾಡಿ ಕುಂಭಿಸುತ್ತಾ ಅಷ್ಟಾಂಗುಳಗಳನ್ನೂ, ಪೂರಿಸಿ ದ್ವಾದಶಾಂಗುಣಗಳನ್ನು ಚಿರ್ರನೆ ರೇಚಿಸುತ್ತಾ ಆ ಜಪಕುಂಡಲಿಯನ್ನು ಭೇದಿಸಿ, ನಾದಬ್ರಹ್ಮವನ್ನೆಬ್ಬಿಸಿ ಸೂರ್ಯನಾಡಿಯಲ್ಲಿ ಚಂದ್ರನನ್ನೂ, ಚಂದ್ರನಾಡಿಯಲ್ಲಿ ಸೂರ್ಯನನ್ನೂ ನಡೆಸಿ, ಚಂದ್ರಸೂರ್ಯರನ್ನು ಚಲಿಸಿ, ಹಂಸವನ್ನು ಸೂಕ್ಷ್ಮವಾದ ವಿದ್ಯುರೇಖೆಯನ್ನು ಸುಷುಮ್ನಾ ನಾಡಿಯೊಳು ಸೇರಿಸಿ ಪದ್ಮಾಸನದಲ್ಲಿಯಾಗಲಿ, ಇಲ್ಲವೇ ವೃಕ್ಷಕುಡ್ಯಗಳಿಗೆ ಆಧಾರಮಾಡಿ ಕುಳಿತುಕೊಂಡು, ಸೊಂಟವನ್ನು

ಸಮವಾಗಿ ನಿಲ್ಲಿಸಿ. ಮುಖವನ್ನು ಸ್ವಲ್ಪವಾಗಿ ಬೊಗ್ಗಿಸಿ ನಾದಸ್ವರಗಳೆರಡನ್ನೂ ಊದುತ್ತಾ ಮಧ್ಯ ವೀಧಿಯನ್ನಲಂಕಾರಮಾಡಿ ಒಂದು ಕೈ ಬೆಟ್ಟಿನಿಂದ ದಂತದ ಮಧ್ಯದೊಳಿರುವ ಜಿಹ್ವೇಂದ್ರಿಯವನ್ನೂ, ರಸನೇಂದ್ರಿಯದಿಂದ ಸೇರಲೀಸದೆ, ಮತ್ತೊಂದು ಬೆಟ್ಟಿನಿಂದ ಹಂಸ ಸಂಚಾರದ ದಾರಿಯನ್ನಡ್ಡಮಾಡಿ ಬೇರೊಂದು ದಾರಿಯಲ್ಲಿ ನಡೆಸುತ್ತಾ ತುಟಿಗಳನ್ನು ಬಂಧಿಸಿ, ಹಂಸವನ್ನೂರ್ಧ್ವಕುಂಡಲಿ ಯಿಂದ ದಾಟಿಸಿ, ಮನೋಮಾರುತಗಳಿಗೆ ಸಂಧಾನವನೆಸಗಿ ಅವೆರಡನ್ನೂ ಲಕ್ಷ್ಯದೊಳಿಟ್ಟು ನೋಡಲಾಗಿ ಅಲ್ಲಿ ವಿಚಿತ್ರಗಳಾದ ಥಾಳಥಾಳ್ಯಗಳನ್ನು, ಸೂರ್ಯಚಂದ್ರರ ಪ್ರಕಾಶಗಳನ್ನೂ, ನಾದಬ್ರಹ್ಮಾನಂದವನ್ನೂ, ದಹರಾಕಾಶ ವನ್ನೂ ಚಿದಾಕಾಶವನ್ನೂ ನೋಡುತ್ತಾ, ಸೂರ್ಯಚಂದ್ರರ ಕಾಂತಿಗಳನೊಂದಾಗಿ ಮಾಡಿ, ಬೆಳಕನ್ನು ಬೆಳದಿಂಗಳೊಳು ಸೇರಿಸಿ ಮನಸ್ಸಿನಲ್ಲಿ ಲಯಿಸಿದರೆ ಯಾವದೂ ತಿಳಿಯದೆ ಆನಂದಮಯವಾಗಿರುವೆ. ಇದೇ ಅಮನಸ್ಕಭಾವವೆಂದು ತಿಳಿಯುವವನಾಗೆಂದು ಸಕಲ ರಹಸ್ಯವನ್ನೂ ಬೋಧಿಸಲಾಗಿ ರಾಜತನಯನು ಗ್ರಹಿಸಿ ಕೇವಲ ವೈರಾಗ್ಯದಿಂದ ಆ ಕುಂಡಲಿ ಮಾರ್ಗವನ್ನು ಸಾಧಿಸುತಲಿದ್ದ ನೆಂದು ಭಗವಂತನು ನುಡಿಯಲು ಅದನ್ನು ಕೇಳಿ ಅರ್ಜುನನು, ಎಲೈ ಸ್ವಾಮಿಯೇ ಅಮನಸ್ಕಭಾವವು ಕೇವಲ ಕಷ್ಟತರವಾದುದರಿಂದ ಅದನ್ನು ಸಾಧಿಸುವವರಿಗೆ ಅತ್ಯಂತ ಸುಖವೂ, ಮೋಕ್ಷವೂ ಲಭಿಸುವುದರಲ್ಲಿ ಸಂಶಯವಿಲ್ಲವೆಂದು ನುಡಿದು ವಾಸುದೇವನನ್ನು ಸ್ತುತಿಸಿ ರಾಜಹಂಸರಾಯನ ಮುಂದಣ ವೃತ್ತಾಂತವನ್ನು ಬೆಸಗೊಳ್ಳಲಾಗಿ ಯಾದವಾಗ್ರಗಣ್ಯನಿಂತೆಂದನು.

ಕೇಳು,—ಕುಂತೀನಂದನನೇ ರಾಜಹಂಸರಾಯನು ಯೋಗ ಸಮಾಧಿನಿಷ್ಠನಾಗಿ ಮುನಿಯ ಶುಶ್ರೂಷೆಯನ್ನು ಮಾಡುತ್ತಲೇ ಕಾಲವನ್ನು ಕಳೆಯುತಲಿದ್ದುದರಿಂದ ಅದನ್ನು ನೋಡುತಲಿದ್ದ ಮುನಿವರ್ಯನು ಒಂದಾನೊಂದು ದಿವಸ ಅವನನ್ನು ಕುರಿತು, ಎಲೈ ಪೃಥ್ವೀಶತನಯನೇ ನಿನಗೀ ಯೋಗಸಿದ್ಧಿಯುಂಟಾಯಿತು. ಅಮನಸ್ಕಭಾವವನ್ನರಿತವನಾದೆ. ನಿನ್ನ ಉದ್ದೇಶವಾದ ಮೂರು ವರುಷಗಳ ಅವಧಿಯು ಕಳೆಯಿತು. ಪುಣ್ಯಪುರುಷನೂ ಆದೆ. ಇನ್ನು ನಿನ್ನ ಪಟ್ಟಣಕ್ಕೆ ಹೋಗಿ ರಾಜಪದವಿಯನ್ನು ಕೈಕೊಂಡು ರಾಜತಪಸ್ವಿಯಾಗಿರೆಂದು ಅನುಗ್ರಹವನ್ನೀಯಲು, ಆತನು ಸ್ವಾಮಿಾ ನಾನಿನ್ನೂ ಕೊಂಚದೂರ ಪ್ರಯಾಣ ಮಾಡಿ ಅಲ್ಲಿ ಯಾವುದಾದರೊಂದು ಪಟ್ಟಣವನ್ನು ಸೇರಿ ಅಲ್ಲಿಂದ ಆಯಾಸವಿಲ್ಲದೆ ಮರಳಿ ನನ್ನ ಪುರವನ್ನೈದುವೆನೆಂದು ಅಪ್ಪಣೆಯನ್ನು ಸ್ವೀಕರಿಸಿ ಪ್ರಯಾಣವಾಗಿ ಹೋಗುತ್ತಾ ಕೆಲವು ದಿವಸಗಳಿಗೆ ಒಂದು ಪಟ್ಟಣವನ್ನು ಸೇರಿ ಆ ಪಟ್ಟಣದ ಲ್ಲೊರ್ವ ಅಡಿಗೆಕೂಲಿಯವಳ ಮನೆಯೊಳಿಳಿದು ಭೋಜನವನ್ನು ಮಾಡಿಕೊಂಡು ವಿಶ್ರಮಿಸಿಕೊಳ್ಳುತ್ತಾ ಆ ಮುದುಕಿಯನ್ನು ಕುರಿತು, ಎಲೈ—ಅಜ್ಜಿ ಈ ದೇಶವು

ಯಾವುದು, ಈ ಪಟ್ಟಣದೊಡೆಯನ ಹೆಸರೇನು ಎಂಬದಾಗಿ ಕೇಳಲು, ಆ ಮುದುಕಿಯು ಎಲೈ ರಾಜೇಂದ್ರತನಯನೇ ಇದು ಗಾಂಧಾರದೇಶವು ಕಾರ್ತಿಕೇಯನೆಂಬ ಮುನಿಪಾಲನು ಆಳುತಲಿರುವನು. ಆತನಿಗೆ ಕಂಜಾಕ್ಷನೆಂಬ ಪುತ್ರನೂ ಕಂಜಾಕ್ಷಿಯೆಂಬ ಪುತ್ರಿಯೂ ಇರುವರು. ಆ ಪುತ್ರಿಯಾದ ಕಂಜಾಕ್ಷಿಯ ಸೌಂದರ್ಯವನ್ನು ವರ್ಣಿಸಿ ಹೇಳುವುದಕ್ಕೆ ಸೃಷ್ಟಿಕರ್ತನಾದ ಬ್ರಹ್ಮನಿಗೂ ಶಕ್ತಿಯು ಕಡಮೆಯಾಗಿದೆ. ನಮ್ಮೊಡೆಯನಾದ ರಾಜನು ದೇಶದಲ್ಲಿರುವ ರಾಜಾಧಿರಾಜರ ರೂಪುಗಳನ್ನೆಲ್ಲಾ ಚಿತ್ರಪಟಗಳ ಮೂಲಕ ತರಿಸಿ ಆ ಲತಾಂಗಿಗೆ ತೋರಿಸಿದರೂ ಆಕೆಯು ಆ ಪಟದಲ್ಲಿರುವ ಯಾರನ್ನೂ ಒಪ್ಪಲಿಲ್ಲ. ಇದೇ ಇಲ್ಲಿನ ವರ್ತಮಾನವೆಂದು ಹೇಳಲಾಗಿ ರಾಜಪುತ್ರನಾ ಕನ್ಯೆಯನ್ನು ತಾನು ವಿವಾಹಮಾಡಿಕೊಂಡು ಸುಖಾಯಾಸವಾಗಿ ತನ್ನ ಪಟ್ಟಣಕ್ಕೆ ಸೇರಬೇಕೆಂದು ಚಿಂತಿಸಿ ಆ ಕ್ಷಣದಲ್ಲಿಯೇ ರಾಜಸಭೆಗೆ ಹೋಗುತಲಿದ್ದನು. ಕಾರ್ತಿಕೇಯರಾಯನು ಅತಿ ತೀವ್ರದಿಂದ ಬರುತ್ತಿರುವ ರಾಜತನಯನನ್ನು ನೋಡಿ, ಇವನ್ಯಾರೋ ಮುನಿಪುತ್ರನೆಂದು ಭಾವಿಸಿ ಥಿಗ್ಗನೆ ಎದ್ದು ಎದುರಾಗಿ ಬಂದು ಅವನನ್ನು ಕರೆದುಕೊಂಡು ಹೋಗಿ ಉಚಿತವಾದ ಆಸನವೊಳು ಕುಳ್ಳಿರಿಸಿ, ಎಲೈ—ಮಹಾತ್ಮನೇ ನಿಮ್ಮ ಆಶ್ರಮಸ್ಥಾನವಾವುದು. ನಿಮ್ಮ ಹೆಸರೇನು ಇಲ್ಲಿಗೆ ಬಂದ ಕಾರಣವೇನು ಎಂದು ಕುಶಲ ಪ್ರಶ್ನೆಯನ್ನು ಮಾಡಲಾಗಿ ಅದಕ್ಕಾತನು, ಎಲೈ—ರಾಜೇಂದ್ರನೇ ನಾನು ರಾಜನಂದನನಲ್ಲದೆ ಋಷಿಪುತ್ರನಲ್ಲವೆಂದು ತನ್ನ ಸಕಲ ವೃತ್ತಾಂತವನ್ನು ತಿಳುಹಿದನು. ಆಗಲಾ ರಾಜನು ಆಶ್ಚರ್ಯಭರಿತನಾಗಿ ತಕ್ಷಣವೇ ಆತನ ಭಾವಚಿತ್ರವನ್ನು ತೆಗೆಯಿಸಿ ಅದನ್ನು ತನ್ನ ಪುತ್ರಿಯ ಅಂತಃಪುರಕ್ಕೆ ಕಳುಹಿದನು. ಆ ರಾಜತನಯಳಾ ಚಿತ್ರಪಟವನ್ನು ಚೆನ್ನಾಗಿ ನೋಡಿ ತನ್ನ ತಂದೆಯನ್ನು ಕರೆಯಿಸಿ ತಂದೆಯೆ ಈತನು ಕಿರೀಟವೂ ಭುಜಕೀರ್ತಿಗಳೂ ಉಂಟಾಗಿದ್ದರೂ ಮುನಿಪುತ್ರನಂತಿರುವನು. ಈತನ ಚಿತ್ರಪಟನನ್ನು ನನ್ನ ಅಂತಃಪುರಕ್ಕೆ ಕಳುಹಲು ಕಾರಣವೇನೆಂದು ಕೇಳಲಾಗಿ ಆತನು ಪುತ್ರಿಯೇ—ಈತನು ಋಷಿನಂದನನಲ್ಲ. ಮಾಳವದೇಶದ ರಾಜತನಯನು ಬ್ರಹ್ಮಚರ್ಯವನ್ನಾಶ್ರಯಿಸಿ ಗುರುವಿನ ಅಪ್ಪಣೆಯಂತೆ ಭೂಸಂಚಾರಕ್ಕೆ ಬಂದಿರುವನು. ಕೇವಲ ಪುಣ್ಯಾತ್ಮನೂ ಮೂರು ಸಂವತ್ಸರಗಳಿಂದ ಕಂದಮೂಲಾದಿ ಫಲಗಳನ್ನು ಭಕ್ಷಿಸಿ ಕೃಶವಾಗಿರುವನೆಂದು ಪೇಳಲಾಗಿ ಆ ಕನ್ಯೆಯು ರಾಜಪುತ್ರನ ಅವಯವಗಳ ಹೊಂದಿಕೆಯನ್ನೂ ಬಾಲ್ಯವನ್ನೂ ಯೋಚಿಸಿ ತಂದೆಯನ್ನು ಕುರಿತು ಜನಕನೆ ಈ ಪುಣ್ಯಪುರುಷನ ಜಟಾಬಂಧನಗಳಂ ತ್ಯಜಿಸಿ ಭೋಜನ ಮಜ್ಜನಾದಿಗಳಿಂದಾ ಚೆನ್ನಾಗಿ ವಿಚಾರಿಸುತ್ತಾ ಇದ್ದು ಕೆಲವು ದಿವಸಗಳ ಬಳಿಕ ಆತನ ಭಾವಚಿತ್ರವನ್ನು ಕಳುಹೆನಲು ನರೇಂದ್ರನು ಒಳ್ಳೆಯದೆಂದು ಆತನೊಳು ಕೇವಲ ಪ್ರೇಮ

ವುಳ್ಳವನಾಗಿ ಜಟಾಬಂಧನಗಳನ್ನು ತೆಗೆಸಿ ಮಜ್ಜನ ಭೋಜನಾದಿಗಳನ್ನು ಮಾಡಿ ಸುತ್ತಲಿದ್ದನು.

ಹೀಗೆ ಕೆಲವುಕಾಲ ಕಳೆದ ತರುವಾಯು ಕಾರ್ತಿಕೇಯುನ ಪುತ್ರನಾದ ಕಂಜಾಕ್ಷನು ಹೊತ್ತು ಮುಳುಗಿದಮೇಲೆ ತನ್ನ ಅಂತಃಪುರದ ಮೇಲೆ ಬಯಲಿನಲ್ಲಿ ಹುಣ್ಣಿಮೆಯ ಬೆಳದಿಂಗಳಲ್ಲಿ ಕೂತುಕೊಂಡು ತನ್ನ ವೀಣೆಯನ್ನು ಬಾರಿಸುತ್ತಾ ಸ್ವರಯುಕ್ತವಾಗಿ ಪಾಡುತಲಿದ್ದನು. ರಂಭೆ, ಊರ್ವಶಿ, ಮೇನಕಿ, ತಿಲೋತ್ತಮೆ ಎಂಬೀ ದೇವ ವೇಶ್ಯೆಯರು ಆಕಾಶಮಾರ್ಗದಿಂದಾಮಾರ್ಗವಾಗಿ ವರುಣದೇವರ ಸಭೆಗೆ ಪೋಗುತ್ತಾ ಆ ರಾಜತನಯುನ ಹಾಡುಗಾರಿಕೆಗೆ ಮೆಚ್ಚಿ, ರಂಭೆಯು ಈತನಾರೋ ಘನಪಾಠಕನೆಂದು ನುಡಿದಳು. ಊರ್ವಶಿಯು ಓಹೋ ನೀನು ಮನುಜಮಾತ್ರದವನಾದ ಜೀವಿಯನ್ನು ಪೊಗಳಿದೆಯಾ ಎಂದು ದೂಷಿಸಿದವಳಾಗಿ ತನ್ನ ವಾಮಭಾಗದ ವಿಷದ ರೆಕ್ಕೆಯಿಂದ ಬೀಸಿಪೋದಳು ಆಗಲಾ ಕಂಜಾಕ್ಷನು ವಿಗತಪ್ರಾಣನಾಗಿ ಕೆಳಗೆ ಬಿದ್ದನು. ಆಗಲಾತನ ಮರಣವನ್ನು ತಿಳಿದ ದೂತರು ರೋದನವನ್ನು ಮಾಡುತ್ತಾ ಧೊರೆಯ ಬಳಿಗೆ ಬಂದು ಸಂಗತಿಯನ್ನು ತಿಳಿಸಿದರು. ರಾಯನು ತನ್ನ ಕುವರನ ಅಂತಃಪುರಕ್ಕೆ ಹೋಗಿ ಸತ್ತುಬಿದ್ದಿರುವ ಪುತ್ರನಮೇಲೆ ಬಿದ್ದು ಘಟ್ಟಿಯಾಗಿ ಅಳುತ್ತಾ ಇದ್ದನು. ಪಟ್ಟಣದೊಳಗಣ ಪ್ರಜೆಗಳು ರಾಜಸಭಿಕರು ಬಹಳವಾಗಿ ರೋದನವನ್ನು ಮಾಡುತ್ತಿರಲಾಗಿ ವಿವಿಕ್ತ ಪ್ರದೇಶದೊಳು ಕುಳಿತುಕೊಂಡು ಬ್ರಹ್ಮಾನಂದವನ್ನು ಹೊಂದುತ್ತಲಿರುವ ರಾಜಹಂಸನು ಆ ರೋಧನ ಧ್ವನಿಯನ್ನು ಕೇಳಿ ಶೀಘ್ರದಿಂದ ಪಟ್ಟಣಕ್ಕೆ ಹೋಗಿ ಸಮಾಚಾರವನ್ನು ವಿಚಾರಿಸಿ ತಿಳಿದು ತಾನು ಆ ಕಂಜಾಕ್ಷನ ಮರಣಕ್ಕೆ ವ್ಯಸನಪಟ್ಟು ಅರಸನನ್ನು ಶಾಂತನನ್ನಾಗಿ ಮಾಡಿ ರಾಜೇಂದ್ರನೇ ದೈವಯತ್ನಕ್ಕೆ ನಾವು ಮಾಡಕ್ಕದ್ದೇನಿರುವುದೆಂದು ನುಡಿದನು. ಆಗಲಾ ನರೇಂದ್ರನು, ಎಲೈ—ಪುಣ್ಯಾತ್ಮನೇ ನಮ್ಮ ಪಟ್ಟಣದೊಳಗಣ ಹೆಣಗಳನ್ನು ಪ್ರೇತರಾಕ್ಷಸರಿಗೆ ಆಹಾರವನ್ನು ಕೊಡುವಂತೆ ಅನೇಕ ತಲೆಗಳಿಂದ ಪದ್ಧತಿಯಾಗಿರುವದು. ಅಯ್ಯಯ್ಯೋ ಇಂಥಾಪುತ್ರರತ್ನವನ್ನು ಹೇಗೆ ರಾಕ್ಷಸರ ಬಾಯಿಗೆ ತುತ್ತುಮಾಡಲೆಂದು ಬಹಳವಾಗಿ ರೋದನ ಮಾಡುತಲಿದ್ದನು. ಆ ರಾಜಹಂಸನು ಎಲೈ—ಮಾನವೇಂದ್ರನೇ ಈ ಹೊತ್ತು ಮೊದಲ್ಗೊಂಡು ನಿಮ್ಮ ಪಟ್ಟಣದಲ್ಲಿ ಆ ವೃದ್ಧಾಚಾರವಾದ ಪದ್ಧತಿಯನ್ನು ತಪ್ಪಿಸುವೆನು. ನಿಮಿಷ ಮಾತ್ರದಲ್ಲಿ ರಾಕ್ಷಸರನ್ನೆಲ್ಲಾ ಯಮಪುರಿಗೆ ಕಳುಹಿಸಿ ಈ ಪುರಜನಗಳಿಗೆ ಸಂತೋಷವನ್ನುಂಟುಮಾಡುವೆನೆಂದು ನುಡಿದನು. ಆಗಲಾ ರಾಜನು ಭಯಪಟ್ಟು ರಾಜತನಯನೇ ರಾಕ್ಷಸರು ಲೇಶಮಾತ್ರದವರೆಂದರಿತು ನೀನು ಹೇಳಬೇಡ, ಘೋರ ರೂಪದಿಂದ ಬಂದು ಬಹುವಾದ ಮಾಯೆಗಳನ್ನೂ ಮಾಡಿ ನಿನ್ನನ್ನು ಭಂಗಪಡಿ

ಸುವರು. ಬಳಿಕ ನಮಗೂ ಪುರಜನಗಳಿಗೂ ಅಪಾಯವು ಸಂಭವಿಸುವುದು. ಪದ್ಧತಿಯ ಪ್ರಕಾರವೇ ನಡೆಸುವುದುಚಿತವಾಗಿಯೂ, ಕ್ಷೇಮವಾಗಿಯೂ ಇರುವುದೆಂದು ನುಡಿಯಲು ರಾಜಹಂಸನು ರಕ್ತಾಂತಲೋಚನನಾಗಿ, ಓಹೋ ರಾಜಶಿಖಾಮಣಿಯೇ ರಾಕ್ಷಸರೆಂದರೆ ನನಗೆ ಉಪ್ಪಿನಕಾಯಿ ಮಾತ್ರದವರು. ಇಂದ್ರಾದಿ ದೇವತೆಗಳೂ ಕೂಡ ಆ ರಕ್ಕಸರಿಗೆ ಸಹಾಯವಾಗಿ ಬಂದರೂ ಅವರುಗಳನ್ನೆಲ್ಲಾ ನಿಮಿಷಮಾತ್ರದಲ್ಲಿ ನಿರ್ಮೂಲಮಾಡುವೆನು. ನನ್ನ ಪ್ರಭಾವವನ್ನು ತಿಳಿಯದೆ ಮಾತನಾಡಿದೆ ಎಂದು ನುಡಿದು, ಆ ಕಂಜಾಕ್ಷನ ಹೆಣವನ್ನು ಆತನ ಹಾಸಿಗೆಯಮೇಲಡಿಸಿ, ರುದ್ರಭೂಮಿಗೆ ತೆಗೆದುಕೊಂಡು ಹೋಗಿ ತಾನು ಮಾತ್ರ ಏಕಾಂಗಿಯಾಗಿ ಆ ಹಣದ ಸುತ್ತಲೂ ಪಾರಾ ತಿರುಗುತಲಿದ್ದನು. ಮಂತ್ರಿಯು ಕಂಜಾಕ್ಷನ ದುಃಖವನ್ನು ಮರೆತು ರಾಜಹಂಸನು ರಾಕ್ಷಸರ ವಶನಾದನೆಂದು ದುಃಖಿಸುತಲಿದ್ದನು. ಈ ವರ್ತಮಾನವನ್ನು ಭೇತಾಳನು ತಿಳಿದು ತನ್ನ ಸೇನಾನಾಯಕರಾದ ರಾಕ್ಷಸರನ್ನು ನೋಡಿ, ಎಲೈ-ರಾಕ್ಷಸರುಗಳಿರಾ ಈ ದೇಶದ ರಾಜನು, ಬಹುಕಾಲದಿಂದಲೂ ನಡೆದುಬರುತ್ತಲಿರುವ ಪದ್ಧತಿಯನ್ನು ತಪ್ಪಿನಡೆಸಿ ಸತ್ತುಬಿದ್ದಿರುವ ತನ್ನ ಪುತ್ರನ ಶ್ರವದ ಬಳಿಯಲ್ಲಿ ಓರ್ವ ರಾಜತನಯನನ್ನು ಕಾವಲಿಟ್ಟಿರುವನು. ಆದುದರಿಂದ ನೀವಾ ಕಾವಲುಗಾರನನ್ನು ಕೊಂದು ಶ್ರವವನ್ನು ತೆಗೆದುಕೊಂಡು ನನ್ನ ಬಳಿಗೆ ಬರುವವರಾಗಿ ಎಂದಾಜ್ಞಾಪಿಸಿದನು. ಆ ರಕ್ಕಸರು ಒಳ್ಳೆಯದೆಂದು ಕೋಲಾಹಲ ಧ್ವನಿಯನ್ನು ಮಾಡುತ್ತಾ, ಕೋರೆಹಲ್ಲುಗಳನ್ನು ಮಸೆಯುತ್ತಾ, ಎಲೈ—ಮಿತ್ರರೇ ಮನುಜನು ನಮಗೆಷ್ಟು ಮಾತ್ರದವನೆಂದು ಓರ್ವರಿಗೋರ್ವರು ಪಂಥಗಳನ್ನೂ ಪ್ರತಾಪಗಳನ್ನೂ ಹೇಳಿಕೊಳ್ಳುತ್ತಾ ಕಣ್ಣುಗಳಲ್ಲಿ ಬೆಂಕಿಯ ಕಿಡಿಗಳನ್ನುಗುಳುತ್ತಾ ಶ್ರವದಬಳಿಗೆ ಹೋಗಲಾಗಿ ರಾಜಹಂಸನು ಶೀಘ್ರವಾಗಿ ಧನುಷ್ಟಾಂಕಾರವನ್ನು ಮಾಡಿ ಬಾಣಗಳನ್ನು ಪ್ರಯೋಗಿಸಲು, ಆ ಅಸ್ತ್ರಗಳಿಗೆ ರಾಕ್ಷಸರು ನೊಂದು ಕೋಪದಿಂದ ಅಂತರಿಕ್ಷಕ್ಕೆ ನೆಗೆದು ತಮ್ಮ ಮಾಯಾಸಾಹಸದಿಂದ ಕತ್ತಲೆಯನ್ನು ಕಲ್ಪಿಸಿ ಆತನಮೇಲೆ ಮುಸಲ, ಮುದ್ಗರ, ಶೂಲ, ಭಿಂಡಿವಾಲ ಮೊದಲಾದ ಆಯುಧಗಳನ್ನು ಪ್ರಯೋಗಿಸಿದರು. ರಾಜತನಯನು ಕೋಪಿಸಿ, ವಾಲ್ಮೀಕಿಮಹರ್ಷಿಯು ಕೊಟ್ಟ ಭಾಸ್ಕರಾಸ್ತ್ರದಿಂದ ಆ ಅಂಧಕಾರವನ್ನು ಹೋಗಲಾಡಿಸಿ, ದೊಡ್ಡದೊಡ್ಡ ರಾಕ್ಷಸರ ತಲೆಗಳನ್ನು ಭೂಮಿಯಮೇಲೆ ಕೆಡಹಿದ್ದನ್ನು ಕಂಡು ಹತಶೇಷರಾದ ರಕ್ಕಸರು ಭಯದಿಂದ ತಪ್ಪಿಸಿಕೊಂಡು ಓಡಿಹೋಗಿ ಭೇತಾಳನಿಗೆ ತಿಳುಹಿದರು. ಆ ರಾಕ್ಷಸನಾಥಿಪನಾದ ಭೇತಾಳನು ರೌದ್ರಾವೇಶಪರವಶನಾಗಿ ಘೋರರೂಪಿನೊಳಿರುವ ರಕ್ಕಸರನ್ನು ನೋಡಿ; ಎಲೈ—ನಕ್ತಂಚರರೇ ನೀವಾದರೂ ಹೋಗಿ ಆ ಮನುಜನನ್ನು ಕೊಂದುಬನ್ನಿರೆಂದಾಜ್ಞಾಪಿಸಲು, ಆ ರಾಕ್ಷಸರು ಸಿಂಹನಾದವನ್ನು

ಮಾಡುತ್ತಾ ಘರ್ಜನೆಯಿಂದ ಬರುತ್ತಿರುವುದನ್ನು ಕಂಡು ಮಾನವೇಂದ್ರತನಯನು ಕೇವಲ ರೋಷಾವೇಶನಾಗಿ ರಕ್ಕಸರು ಮಾಡುವ ಮಾಯಾ ಸಾಮರ್ಥ್ಯಗಳನ್ನೆಲ್ಲಾ ಮಾಯುಮಾಡುತ್ತಾ ಅವರ ತಲೆಗಳನ್ನು ತರಿದು ರಕ್ತಗಳನ್ನುಕಾರಿಸಿ ಕೈಕಾಲುಗಳನ್ನು ಕಡಿದು ಬಗೆಬಗೆಯಾಗಿ ಅವರ ರೂಪುಗಳನ್ನು ಕೆಡಿಸಲಾಗಿ ಹತಶೇಷರಾದ ರಕ್ಕಸರು ಪ್ರಾಣಗಳನ್ನು ತಪ್ಪಿಸಿಕೊಂಡು ಹೋಗಿ, ತಮ್ಮೊಡೆಯನಿಗೆ ಮೊರೆಯಿಟ್ಟು ಹೇಳಿಕೊಂಡರು. ಭೇತಾಳನು ರೌದ್ರಾವೇಶದಿಂದ ದಿಕ್ಕುಗಳು ಪ್ರತಿಧ್ವನಿ ಕೊಡುವಂತೆ ಆರ್ಭಟಿಸುತ್ತಾ ನೇತ್ರಗಳಲ್ಲಿ ಭುಗಿಭುಗಿಲೆಂದು ಅಗ್ನಿಕಣಗಳನ್ನುಗುಳುತ್ತಾ ಎಲಾ—ನರಾಧಿಪನೇ ನೀನೆಲ್ಲಿಗೆ ಹೋಗಿ ಹೊಕ್ಕಿಕೊಂಡರೂ ನಿನ್ನ ಪ್ರಾಣಗಳನ್ನು ತೆಗೆಯದೆ ಬಿಡೆನು. ನನ್ನನ್ನು ಭೇತಾಳನೆಂದು ನೀನರಿತಿರುವಂತೆ ಕಾಣಲಿಲ್ಲವೆಂದು ಘರ್ಜಿಸಲು, ಆಗಲಾ ಧೀರನಾದ ರಾಜತನಯನು ಭಯಪಡದವನಾಗಿ ಶೀಘ್ರದಿಂದ ಇಪ್ಪತ್ತು ಬಾಣಗಳನ್ನು ಭೇತಾಳನ ವಕ್ಷಸ್ಥಳಕ್ಕೆ ಹೊಡೆಯಲಾಗಿ ಭೇತಾಳನವುಗಳನ್ನು ಸಡ್ಡೆಮಾಡದೆ ಮೇಘಾಕಾರವನ್ನೈದಿ ಪಾಷಾಣವರ್ಷಗಳನ್ನು ಕರೆಯಲು, ರಾಜಹಂಸನು ಚಲಿಸದೇ ವಾಯವ್ಯಾಸ್ತ್ರದಿಂದ ಆ ಮೇಘಗಳನ್ನು ದೂರಮಾಡಿ ಹಿಂದೆಯೇ ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಅದನ್ನು ಲಕ್ಷ್ಯಮಾಡದೆ ಭೇತಾಳನು ಆ ರಾಜಪುತ್ರನಮೇಲೆ ನಾನಾವಿಧಗಳಲ್ಲಿ ಸಾಧನಗಳನ್ನು ಮಾಡಿ ಹೊಡದರೂ ಆ ಪುಣ್ಯಪುರುಷನು ಕೋಪಾವೇಶನಾಗಿ ಅದನ್ನು ಲಕ್ಷ್ಯಮಾಡದೆ ತನ್ನ ಚಂದ್ರಾಯುಧವನ್ನು ಪ್ರಯೋಗಿಸಿದನು. ಆ ಆಯುಧವು ಅಘೋರವಾದ ರೂಪವನ್ನು ಹೊಂದಿ ಭೇತಾಳನು ಎಷ್ಟು ವಿಧಗಳಾದ ರೂಪುಗಳನ್ನು ಪೊಂದಿ ಯಾವ ಯಾವ ಸ್ಥಳಗಳಲ್ಲಿ ಹೊಕ್ಕರೂ ಬಿಡದೆ ಹಿಂಬಾಲಿಸಿ ಅಟ್ಟುತ್ತಾ ಬರಲಾಗಿ ಅದರಿಂದ ಭೇತಾಳನು ಭಯಾಶ್ಚರ್ಯಗಳೊಡನೆ ರಾಜಹಂಸನಿಗೆ ವಿಧೇಯನಾಗಿ ನಮಸ್ಕರಿಸಿ ಅಂಜಲಿಬದ್ಧನಾಗಿ, ಎಲೈ—ಮಹಾತ್ಮನೇ ನಿನ್ನ ಪ್ರಭಾವಗಳನ್ನು ಸ್ತುತಿಸುವುದಕ್ಕೆ ನನಗೆ ಅಳವಲ್ಲ. ಅಕಟಕಟಾ ನಿನ್ನ ಚಂದ್ರಾಯುಧವು ನನ್ನನ್ನು ಹೊಡೆಯದೆ ಬಿಡದು. ಪುಣ್ಯಪುರುಷನೇ ನನ್ನ ಪ್ರಾಣಗಳನ್ನು ಕಾಪಾಡಬೇಕೆಂದು ಹಲವುಬಗೆಯಾಗಿ ಸ್ತುತಿಸಲಾಗಿ ರಾಜಪುತ್ರನು ನಿಮ್ಮತಿಪಡದೆ ನೀನು ದುಷ್ಟನಾದುದರಿಂದ ನಿನ್ನನ್ನು ಬಿಡುವುದಿಲ್ಲವೆನಲು ಭೇತಾಳನಿಂತೆಂದನು.

ಕೇಳಯ್ಯಾ—ರಾಜೋತ್ತಮನೇ ನಾನು ಮಹಾಮೇರುಪರ್ವತ ಮೊದಲಾಗಿ ಅಣುಪರ್ಯಂತವಾಗಿಉಳ್ಳ ಆಕಾರಗಳನ್ನು ಧರಿಸಿ ಮೂರು ಲೋಕಗಳಲ್ಲಿಯೂ ಸಂಚರಿಸಬಲ್ಲೆನು. ನೀನು ಮನದಲ್ಲಿ ನೆನದ ಕಾಲಕ್ಕೆ ಬಂದು ನಿನಗೆ ಕೈಲಾದ ಸಹಾಯವನ್ನು ಮಾಡಿ ನಿನ್ನ ಕೋರಿಕೆಗಳನ್ನು ನೆರವೇರಿಸಬಲ್ಲೆನು. ನಿನಗೆ ದಾಸಾನುದಾಸನಾಗಿ ಈ ಪುರಕ್ಕೆ ಹತ್ತುಯೋಜನದ ದೂರದಲ್ಲಿದ್ದುಕೊಂಡು ಪುರ

ಜನಗಳಿಗೆ ಕ್ಷೇಮವನ್ನುಂಟುಮಾಡುವೆನೆಂದು ಕಠಿನವಾದ ಪ್ರತಿಜ್ಞೆಯನ್ನು ಮಾಡ ಲಾಗಿ ರಾಜನಂದನನು ತಾನು ಕೋರಿದವೇಳೆ ಬಂದು ನನ್ನೆಡೆಯೊಳಿರೆಂದು ನುಡಿದು ಸಮಂತ್ರಪೂರ್ವಕವಾಗಿ ತನ್ನ ಚಂದ್ರಾಯುಧವನ್ನು ಹಿಂದಕ್ಕೆ ತೆಗೆದುಕೊಂ ಡನು. ಭೇತಾಳನು ರಾಜಹಂಸನಿಗೆ ತಾನು ಶಿಷ್ಯನೆಂದು ನುಡಿದು ನಮಸ್ಕರಿಸಿ ಪ್ರೇತಭೂತಗಳನ್ನು ಕರೆದುಕೊಂಡು ದೂರವಾಗಿ ಹೋದನು. ಆಗಲಾ ರಾಜಹಂ ಸನು ರಕ್ಕಸರ ಬಾಧೆಯು ನಿವೃತ್ತಿಯಾಯಿತೆಂದರಿತು ಆ ಹೆಣದ ಬಳಿಯೊಳು ಕುಳಿತುಕೊಂಡು ಕಂಜಾಕ್ಷನ ವಿಷಯವಾಗಿ ಹಲವು ವಿಧಗಳಿಂದ ಯೋಚಿಸುತಲಿ ರಲಾಗಿ ದೇವಸಭೆಗೆ ಹೋಗಿ ಹಿಂತಿರುಗಿ ಬರುತಲಿದ್ದ ದೇವ ವೇಶ್ಯೆಯರಾದ ಊರ್ವಶಿ ಮೊದಲಾದವರು ಆಕಾಶದೊಳು ನಿಂತುಕೊಂಡು ರಂಭೆಯು ಊರ್ವ ಶಿಯನ್ನೋಡಿ, ಎಲೈ – ತಂಗಿಯೇ ನೀನು ಮಾಡಿದ ಪಾಪಕೃತ್ಯವೆ ಭೂಲೋಕ ವನ್ನೂ, ದೇವಲೋಕವನ್ನೂ ವ್ಯಾಪಿಸುವದು. ಈ ವರ್ತಮಾನವನ್ನು ದೇವೇಂ ದ್ರನು ಕೇಳಿದರೆ ನಿನ್ನನ್ನು ಶಪಿಸುವನು, ನಿರಪರಾಧಿಯಾದ ಈ ರಾಜಪುತ್ರನನ್ನು ಬದುಕಿಸೆನಲಾಗಿ ಅವಳು ಉಚಿತವೆಂದು ತನ್ನ ಸಂಜೀವನ ರೆಕ್ಕೆಯಿಂದ ಬೀಸಿ ದಳು. ರಾಜಹಂಸನು ಆಕಾಶದೊಳಾದ ಶಬ್ದವನ್ನು ಕೇಳಿ ದ್ರೋಹಿಯಾದ ಊರ್ವಶಿಯ ರೆಕ್ಕೆಯನ್ನು ಸವರಿಕೊಂಡು ಬಾರೆಂದು ಚಂದಾಯುಧವನ್ನು ಕಳುಹಲಾಗಿ ಅದೇರೀತಿ ಎಲ್ಲಾ ಆಯುಧವು ಅವಳ ರೆಕ್ಕೆಗಳನ್ನು ಕೆಡವಿಕೊಂಡು ಬಂದಿತು ಇಷ್ಟರೊಳಾ ಕಂಜಾಕ್ಷನು ನಿದ್ರೆಹೋಗುತಲಿರುವವನೆದ್ದಹಾಗೆ ಸಜೀ ವನಾಗಿ ಮೇಲಕ್ಕೆ ಎದ್ದುದನ್ನು ಕಂಡು ರಾಜಹಂಸನಾತನನ್ನಾಲಿಂಗನ ಮಾಡಿ ಕೊಂಡು ನಡೆದ ವರ್ತಮಾನವನ್ನೆಲ್ಲಾ ಹೇಳುತಲಿರಲಾಗಿ ಊರ್ವಶಿಯು ಬಂದು ದುಃಖಾಕ್ರಾಂತಳಾಗಿ ತನ್ನ ರೆಕ್ಕೆಗಳನ್ನು ಕೊಡೆಂದು ರಾಜತನಯನನ್ನು ಬಹಳ ವಾಗಿ ಸ್ತುತಿಸಿ ತನ್ನ ರೆಕ್ಕೆಗಳನ್ನು ತೆಗೆದುಕೊಂಡು ದೇವಲೋಕಕ್ಕೆ ತೆರಳಿದಳು. ಕಂಜಾಕ್ಷನು ವರ್ತಮಾನವನ್ನೆಲ್ಲಾ ಕೇಳಿ ಆಶ್ಚರ್ಯಾನಂದಭರಿತನಾಗಿ ಆಹಾ ಇಂಥಾ ಅದ್ಭುತವಾದ ಕಾರ್ಯವು ಎಲ್ಲಿಯಾದರೂ ಇರುವುದೇ ಎಂದು ಆ ಮಹಾ ತ್ಮನನ್ನು ಅನೇಕಪ್ರಕಾರದಿಂ ಸ್ತುತಿಸಿ ಬೆಳಗಾಗುತ ಬಂದಿತೆಂದು ಈರ್ವರೂ ಸಂತೋಷ ಸುದ್ದಿಗಳ ಮಾತನಾಡುತಲಿದ್ದರು.

ಬೆಳಗಾದ ಮೇಲೆ ಕಾರ್ತಿಕೇಯರಾಯನು ಮಂತ್ರಿ ಪ್ರಧಾನಿ ಸಾಮಂತ ರೊಂದಿಗೆ ಸೇರಿದವನಾಗಿ, ತನ್ನ ಪುತ್ರನಿಗೆ ಅಗ್ನಿಸಂಸ್ಕಾರ ಮಾಡುವುದಕ್ಕಾಗಿ ಬೇಕಾದ ಪದಾರ್ಥಗಳನ್ನು ತೆಗೆದುಕೊಂಡು ಪ್ರೇತಭೂಮಿಗೆ ಹೋಗುತ್ತಾ ಮಾರ್ಗದಲ್ಲಿ ಬಿದ್ದಿರುವ ರಕ್ಕಸರ ಶಿರಗಳನ್ನೂ, ಮುಂಡಗಳನ್ನೂ, ಮುರಿದುಬಿದ್ದಿ ರುವ ಕೈಕಾಲುಗಳನ್ನೂ, ಮಾಂಸದ ಖಂಡಗಳನ್ನೂ, ರಕ್ತದ ಕೋಡಿಗಳನ್ನೂ ನೋಡಿ ಅವುಗಳೆಲ್ಲಾ ರಾಜಹಂಸನ ಪ್ರಭಾವದಿಂದ ನಡೆದವುಗಳೆಂದು ಸಂತೋ

ಷಿಸುತ್ತಾ ಒರ್ವರಲ್ಲೋರ್ವರು ಆತನ ಮಹಿಮೆಗಳನ್ನು ಮಾತನಾಡಿಕೊಳ್ಳುತ್ತಾ ಸ್ಮಶಾನ ಭೂಮಿಯಲ್ಲಿ ಈರ್ವರೂ ಮಾತನಾಡುತಲಿರುವುದನ್ನು ಕಂಡು ಆಶ್ಚರ್ಯಪಡುತ್ತಾ ಹೋಗಿ ಅವರನ್ನಾಲಿಂಗಿಸಿಕೊಂಡು ಆನಂದಭಾಷ್ಪಗಳನ್ನು ಸುರಿಸುತ್ತಾ, ಎಲೈ—ಮಹಾತ್ಮನೇ ನಡೆದ ವರ್ತಮಾನವೇನು, ಪುತ್ರನು ಯಾವರೀತಿಯಿಂದ ಬದುಕಿದನು ಎಂದು ಕೇಳಲಾಗಿ ರಾಜಹಂಸನು ಸಕಲವೃತ್ತಾಂತವನ್ನು ತಿಳುಹಿದನು. ಬಳಿಕಲಾ ನರೇಂದ್ರನು ಅತ್ಯಂತ ಸಂತೋಷಪಟ್ಟು ಆತನನ್ನು ಬಹುಪ್ರಕಾರವಾಗಿ ಸ್ತುತಿಸಿ ತನ್ನ ಮಗನನ್ನು ಪುರಕ್ಕೆ ಕರೆತಂದನು. ತರುವಾಯ ಪುರಜನಂಗಳು ರಾಜಹಂಸನನ್ನು ನೋಡಿ ಈತನು ಮನುಜಮಾತ್ರದವನಲ್ಲ. ನಮ್ಮನ್ನು ರಕ್ಷಿಸಲೋಸುಗ ದೇವಾಂಶದಿಂದವತರಿಸಿದ ಭಗವಂತನೆಂದು ನಾನಾಬಗೆಯಾಗಿ ಕೊಂಡಾಡುತಲಿದ್ದರು. ಆಗಲಾ ಕಂಜಾಕ್ಷಿಯು ಅಂತಃಪುರದ ಮೇಲಿನಿಂದ ರಾಜಹಂಸನ ದಿವ್ಯಸೌಂದರ್ಯವನ್ನು ನೋಡಿ ಆಹಾ ಇವನೇ ನನಗೆ ತಕ್ಕವರನೆಂದು ಮನದೊಳು ನೆನೆನು ತಂದೆಯ ಮನೆಗೆ ಹೋಗಿ ತಂದೆಯೇ ಆ ಮಹಾನುಭಾವನಿಗೆ ನನ್ನನ್ನು ಕೊಟ್ಟು ಮದುವೆಯ ಮಾಡುವದುಹೊರ್ತು ಮತ್ತಾವ ಉಪಕಾರವನ್ನು ಮಾಡುವದಕ್ಕೂ ನೀನು ಸಮರ್ಥನಲ್ಲ ಎಂದು ನುಡಿಯಲು, ಪುತ್ರಿಯ ಮಾತುಗಳಿಗೆ ತಂದೆಯು ಸಂತೈಸಿ ತಾಯೇ ನಾನು ಆರೀತಿಯಾಗಿ ವಿವಾಹವನ್ನು ಮಾಡಬೇಕೆಂದೇ ಇಚ್ಛೈಸಿರುವೆನಲ್ಲದೆ ಮತ್ತೆ ಬೇರೆ ಇಲ್ಲವೆಂದು ನುಡಿದು ರಾಜಹಂಸನನ್ನು ನೋಡಿ, ಎಲೈ—ದಿವ್ಯಪುರುಷನೇ ನೀನು ಮಾಡಿದ ಉಪಕಾರಗಳಿಗೆ ಪ್ರತಿಯಾಗಿ ಉಪಕಾರವನ್ನು ಮಾಡಲು ನನಗೆ ಯಾವ ವಿಧವಾದ ಶಕ್ತಿಯೂ ನಾಲದು. ನನ್ನ ಪುತ್ರಿಕಾರತ್ನವನ್ನು ನಿನಗೆ ಸಮರ್ಪಿಸುವೆನೆಂದು ಹೇಳಿ ಮುಹೂರ್ತವನ್ನು ನಿಶ್ಚೈಸಿ ಪಟ್ಟಣ ಶೃಂಗಾರವನ್ನು ಮಾಡಿಸುತಲಿದ್ದನು.

ಕಾರ್ತಿಕೇಯ ರಾಜನ ಮಗನಾದ ಕಂಜಾಕ್ಷನು ತಂದೆಯನ್ನು ಕುರಿತು ಎಲೈ—ಪಿತನೇ ಸಂಜೀವನದ ರೆಕ್ಕೆಯಿಂದ ಬದುಕಿಸಿದ ಉರ್ವಶಿಯನಲ್ಲದೆ ಅನ್ಯರನ್ನು ನಾನು ವರಿಸುವದಿಲ್ಲವೆಂಡು ಹೇಳಲಾಗಿ, ನರಾಧಿಪನು ನಡುಗುತ್ತಾ ಓಹೋ ಕಂದನೇ, ನೀನು ಅಳವಲ್ಲದ ಕೋರಿಕೆಯನ್ನು ಬಯಸಬಹುದೆ ಎಂಬದಾಗಿ ನಾನಾಪ್ರಕಾರದಿಂ ಹೇಳಿದಾಗ್ಯೂ ಆತನು ಸಮಾಧಾನವಾಗದೆ ಇದ್ದನು. ಈ ವರ್ತಮಾನವನ್ನು ರಾಜಹಂಸನು ಕೇಳಿ ಕಾರ್ತಿಕೇಯನನ್ನು ಕುರಿತು, ಎಲೈ ರಾಜೋತ್ತಮನೇ ನೀವು ನಿಮ್ಮ ಪುತ್ರನ ವಿಚಾರದಲ್ಲಿ ಕೋಪಿಸತಕ್ಕದ್ದಲ್ಲ, ನಾನು ದೇವಲೋಕಕ್ಕೆ ಹೋಗಿ ಊರ್ವಶಿಯನ್ನು ತರುವೆನೆನಲಾಗಿ ಆ ನರೇಂದ್ರನಾತನನ್ನಾಲಿಂಗಿಸಿಕೊಂಡು, ಎಲೈ ಪುಣ್ಯಾತ್ಮನೆ ಮಾನವರು ದೇವಲೋಕಕ್ಕೆ ಹೋಗಿ ಮರಳಿ ಬರುವುದು ಅಸಾಧ್ಯ ನನ್ನ ಮಗನಾದ ಕಂಜಾಕ್ಷನಿಗೆ ಮದುವೆ

ಯಾಗದಿದ್ದರೂ ಚಿಂತೆಯಿಲ್ಲ ನೀನು ದೇವಲೋಕಕ್ಕೆ ಹೋಗತಕ್ಕ ನಿಮಿತ್ತವಿಲ್ಲ ವೆಂದು ಎಷ್ಟುವಿಧವಾಗಿ ಸಮಾಧಾನಪಡಿಸಿದರೂ, ಆ ಶೂರನು ಕೇಳದೆ ಹದಿನೈದು ದಿವಸಗಳೊಳಗಾಗಿ ಹಿಂತಿರುಗಿ ಬರುವೆನೆಂದು ಹೇಳಿ ಪಾದಚಾರಿಯಾಗಿಯೇ ಹೋಗುತ್ತಿದ್ದನು. ಈ ವರ್ತಮಾನವನ್ನು ಕೇಳಿ ಕಂಜಾಕ್ಷಿಯು ಮೂರ್ಛಾಕ್ರಾಂತಳಾಗಿ ದೂತಿಯರು ಮಾಡಿದ ಶೈತ್ಯೋಪಚಾರಗಳಿಂದ ಎಚ್ಚೆತ್ತು ತನ್ನ ತಂದೆತಾಯಿಗಳನ್ನು ಕರೆಸಿ, ಎಲೈ—ಜನನೀಜನಕರೇ ದೇವಲೋಕಕ್ಕೆ ಹೋದ ಮನುಜರು ಪುನಃ ಈ ಲೋಕಕ್ಕೆ ಬರುವುದನ್ನು ನೀವು ಕಾಣಿರಾ ನನಗೆ ಪ್ರಾಣನಾಥನಾದ ರಾಜಹಂಸನನ್ನು ನೀವು ಯಾವರೀತಿಯಿಂದ ಒಪ್ಪಿ ಕಳುಹಿಸಿದಿರಿ ನಿಮಿಷಮಾತ್ರವೂ ನಾನು ಜೀವಿಸಲಾರೆನು ಎಂದು ಬಹಳವಾಗಿ ಪ್ರಲಾಪಿಸುತ್ತಾ ಆತನ ತೇಜೋರೂಪವನ್ನಾದರೂ ಕಣ್ಣುಗಳಿಂದ ನೋಡಿ ಪ್ರಾಣವನ್ನು ತೊರೆಯುವೆನೆಂದು ತೃಣೀಕರಿಸಿ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಆ ಮಹಾತ್ಮನಿಗೆ ಅಡ್ಡವಾಗಿ ಹೋಗಿ ಆತನ ಪಾದಕಮಲಗಳಿಗೆರಗಿ, ಎಲೈ ಪ್ರಾಣನಾಥನೇ ನಿನ್ನನ್ನೇ ನಂಬಿರುವ ನನ್ನನ್ನು ಅಗ್ನಿಯುಪಾಲಂ ಮಾಡಿ ದೇವಲೋಕಕ್ಕೆ ಹೋಗುವುದುಚಿತವೇ ನೀನು ಖಂಡಿತವಾಗಿ ಹೋಗಕೂಡದೆಂದು ಅನೇಕಪ್ರಕಾರವಾಗಿ ಪ್ರಾರ್ಥಿಸಲಾಗಿ ಆ ರಾಜಹಂಸನು, ಎಲೈ ಪ್ರಾಣನಾಯಕಿಯೇ ನೀನು ಭಯವನ್ನು ಅಂತರಾತ್ಮ ಯೋಚನೆಯನ್ನು ತ್ಯಜಿಸಿ ಪಟ್ಟಣಕ್ಕೆ ತೆರಳುವವಳಾಗು, ನಾನು ಖಂಡಿತವಾಗಿ ಹದಿನೈದು ದಿವಸಗಳೊಳಗಾಗಿ ಬರುವೆನೆಂದು ಅನೇಕ ಮಾರ್ಗಗಳಿಂದ ನಂಬುಗೆಯನ್ನು ಹೇಳಿದನು, ಆಗಲಾ ಇಂದುಮುಖಿಯು, ಎಲೈ ನಾಥನೇ ಹದಿನೈದು ದಿವಸಗಳೊಳಗಾಗಿ ನೀನು ಬಾರದೆ ಇದ್ದರೆ, ಹದಿನಾರನೆಯ ದಿವಸ ಸೂರ್ಯೋದಯಾನಂತರ ಅಗ್ನಿಕುಂಡದಲ್ಲಿ ಈ ನನ್ನ ಪ್ರಾಣಗಳನ್ನು ಬಿಡುವುದು ನಿಜವೆಂದು ನುಡಿದು ಪುನಃ ತನ್ನ ಪಾಲಕಿಯಲ್ಲಿಯೇ ಕುಳಿತುಕೊಂಡು ಹಿಂತಿರುಗಿ ಬಂದು ಅಂತಃಪುರವನ್ನು ಪ್ರವೇಶಿಸಿ ನಿದ್ರಾಹಾರಗಳನ್ನು ತೊರೆದು ಧರ್ಮದೇವತೆಯನ್ನು ಧ್ಯಾನಿಸುತ್ತಾ ಕೇವಲ ವೈರಾಗ್ಯಮಾರ್ಗಾವಲಂಬಿಯಾಗಿ ಒಂದು ದಿನವನ್ನು ಒಂದು ಯುಗದಹಾಗೆ ಕಳೆಯುತಲಿದ್ದಳು.

ಬಳಿಕಲಾ ರಾಜಹಂಸ ಮಹಾರಾಯನು ಸ್ವಲ್ಪದೂರ ಹೋಗಿ ಭೇತಾಳನನ್ನು ಮನಸ್ಸಿನಲ್ಲಿ ನೆನೆಯಲಾಗಿ ಆ ನಿಮಿಷದಲ್ಲಿಯೇ ಭೇತಾಳನು ಬಂದು ಇವನೆದುರಿಗೆ ನಿಂತು ನಮಸ್ಕಾರವನ್ನು ಮಾಡಿ ಎಲೈ—ರಾಜಶಿಖಾಮಣಿಯೇ ದಾಸಾನುದಾಸನಾದ ನನ್ನನ್ನು ನೆನೆದ ಕಾರಣವೇನೆಂದು ಪ್ರಾರ್ಥಿಸಲಾಗಿ ರಾಜಹಂಸನು ಭೇತಾಳನನ್ನು ಸಂತೈಸಿ, ಎಲೈ—ಭೇತಾಳನೇ ನನ್ನನ್ನು ದೇವಲೋಕಕ್ಕೆ ಕರೆದುಕೊಂಡು ಹೋಗೆನಲಾಗಿ, ರಾಜೇಂದ್ರನೇ ನಾನು ಅಮರಪುರಿಗೆ ಬರುವದಿಲ್ಲ. ಪಟ್ಟಣದ ಹೊರವಳಯದಲ್ಲಿ ಬಿಡುವೆನೆಂದು ಆತನನ್ನು ತನ್ನ ಮೇಲೆ

ಕುಳ್ಳಿರಿಸಿಕೊಂಡು ನಿಮಿಷಮಾತ್ರದಲ್ಲಿ ಅಮರಾಧಿಪನ ಪಟ್ಟಣದ ಹೊರಭಾಗ ದಲ್ಲಿಳಿಸಿ ಆ ರಾಜನಂದನನಿಂದ ಅಪ್ಪಣೆಯನ್ನು ಪಡೆದು ತನ್ನ ನಿವಾಸಕ್ಕೆ ತೆರಳಿತು. ತರುವಾಯ ರಾಜಹಂಸನು ದೇವೇಂದ್ರನ ಪಾರಿಜಾತ ವನಕ್ಕೆಹೋಗಲು ಅಲ್ಲಿರುವ ವನಪಾಲಕರು ಆತನನ್ನು ಕುರಿತು, ಎಲೈ—ಮನುಜಾ ! ನೀನು ಭಯವಿಲ್ಲದವನಾಗಿ ಈ ವನಕ್ಕೆ ಬರಬಹುದೇ ? ಹೋಗುಹೋಗೆಂದು ಅವನನ್ನು ಬೆತ್ತದಿಂದ ಹೊಡೆದರು. ಅದಕ್ಕಾತನು ಕೋಪಿಸಿಕೊಂಡು ತನ್ನ ಬಾಣಗಳಿಂದವರನ್ನು ನೋಯಿಸಿ ಆ ವನವನ್ನೆಲ್ಲಾ ತಿರುಗುತ್ತಾ ಅಲ್ಲಿರುವ ವಿನೋದಗಳನ್ನೆಲ್ಲಾ ನೋಡಿ ಆನಂದವನ್ನೈದುತ್ತಿರಲು, ಬಾಣಗಳ ದೆಬ್ಬೆಯಿಂದ ಹಿಂಸೆಪಟ್ಟ ವನಪಾಲಕರು ದೇವೇಂದ್ರನ ಬಳಿಗೆ ಅಳುತ್ತಾಹೋಗಿ ನಡೆದ ವೃತ್ತಾಂತವನ್ನರುಹಲು, ಅಮರಾಧಿಪನು ಬೆದರಿಬಿದ್ದು ಹಲ್ಲುಗಳನ್ನು ಕಟಕಟನೇ ಕಡಿಯುತ್ತಾ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ದೇವ ಗಂಧರ್ವ ಯಕ್ಷರಿಂದೊಡಗೂಡಿದವನಾಗಿ ಆ ಉದ್ಯಾನವನಕ್ಕೆ ಬಂದು ರಾಜೇಂದ್ರತನಯನನ್ನೋಡಿ ಎಲಾ—ನರಾಧಮನೇ ನೀನು ಈ ಅಮರಪುರಿಗೆ ಬರಬಹುದೇ ಬಂದವನು ಸುಮ್ಮನೆ ಹೋಗದೆ ನಮ್ಮ ವನಪಾಲಕರನ್ನು ಬಹಳವಾಗಿ ಹಿಂಸಿಸಿದೆ. ಆಹಾ ! ನಿನಗಿಷ್ಟು ಗರ್ವವೇ ? ನಿನ್ನನ್ನು ಸದೆಬಡಿಯದೆ ಬಿಡೆವು. ಈಚೆಗೆ ಬಾ ಎನಲು ಆಗ ರಾಜಹಂಸನು ಕೋಪಿಸಿ, ಎಲಾ ಇಂದ್ರನೇ ಗರ್ವದಿಂದ ಬಾಯಿಗೆ ಬಂದಂತೆ ನುಡಿಯಬೇಡ, ನನ್ನನ್ನು ಹೊಡೆಯುವುದಕ್ಕೆ ನಿನ್ನಿಂದಲಾಗದು. ನಿನ್ನ ಪ್ರಾಣಗಳನ್ನು ಈಗಲೇ ತೆಗೆದೇನು. ನನ್ನನ್ನು ಸ್ವಲ್ಪ ಮನುಷ್ಯನೆಂದು ಭಾವಿಸದೆ ತ್ವರೆಯಿಂದ ಊರ್ವಶಿಯನ್ನು ಕಳುಹುವವನಾಗೆನಲಾಗಿ ಅಮರಪತಿಯು ರೌದ್ರಾವೇಶಪರವಶನಾಗಿ ದಿಕ್ಕುಗಳು ಕರಗಿಸುವ ಸಿಂಹನಾದವನ್ನು ಮಾಡಿ ಯುದ್ಧಭೂಮಿ ಗೆ ಬಾರೆಂದು ಕರೆದು ಮೂರುಬಾಣಗಳನ್ನು ಆತನ ವಕ್ಷಸ್ಥಳಕ್ಕೆ ಹೊಡೆದನು. ರಾಜಹಂಸನು ಬಾಸ್ಕರಾಸ್ತ್ರ ಪ್ರಯೋಗದಿಂದದನ್ನು ತಡೆದು ನಾಗಾಸ್ತ್ರವನ್ನು ಪ್ರಯೋಗಿಸಿದನು. ರಾಜತನಯನು ವಾರುಣಾಸ್ತ್ರದಿಂದದನ್ನು ನಿವಾರಿಸಿ ಮೇಘಾಸ್ತ್ರವನ್ನು ಪ್ರಯೋಗಿಸಿದನು. ಅಮರಪತಿಯು ವಾಯವ್ಯಾಸ್ತ್ರದಿಂದ ಅದನ್ನು ತಡಮಾಡಿದ ಬಳಿಕ ತಿಮಿರಾಸ್ತ್ರವನ್ನು ಪ್ರಯೋಗಿಸಿದನು. ಆಗಲಾ ರಾಜಹಂಸನು ಇಂದ್ರನನ್ನು ಐದು ಬಾಣಗಳಿಂದ ಹೊಡೆಯಲಾಗಿ, ತ್ರಿದಶಾಧಿಪನು ಆಶ್ಚರ್ಯವನ್ನು ತಾಳ್ದು ಆಗ್ನೇಯಾಸ್ತ್ರವನ್ನು ಪ್ರಯೋಗಿಸಿದನು. ಬಳಿಕ ತ್ರಿದಶೇಶ್ವರನು ಅತ್ಯಂತ ಕೋಪವುಳ್ಳವನಾಗಿ ತನ್ನ ವಜ್ರಾಯುಧವನ್ನು ಪ್ರಯೋಗಿಸಿದನು. ಆ ವಜ್ರಾಯುಧವು ತ್ರೇತಾಗ್ನಿಗಳನ್ನಾವರಿಸಿಕೊಂಡು ಧಗಧಗೆಂದು ಕಾಲಾಗ್ನಿರುದ್ರನಂತೆ ಬರುತ್ತಾ ಇರಲಾಗಿ ರಾಜಹಂಸನು ಅದನ್ನು ನೋಡಿ ಭಯವನ್ನು ಹೊಂದದೆ ಆ ವಜ್ರಾಯುಧದ ಮೇಲೆ ತನ್ನ ಚಂದ್ರಾ

ಯುಧವನ್ನು ಸಮಂತ್ರಪೂರ್ವಕವಾಗಿ ಪ್ರಯೋಗಿಸಿದನು. ಆಗ ವಜ್ರಾಯುಧವೂ, ಚಂದ್ರಾಯುಧವೂ ಎರಡೂ ಸೇರಿ ಘೋರವಾದ ಯುದ್ಧಗಳನ್ನು ಮಾಡುತ್ತಲಿರಲಾಗಿ ಅಲ್ಲಿ ನೆರೆದಿರ್ದ ದೇವ ಗಂಧರ್ವ ಯಕ್ಷರೆ ಮೊದಲಾದವರು ಆ ಅದ್ಭುತವನ್ನು ನೋಡಿ ಅತ್ಯಾಶ್ಚರ್ಯವನ್ನು ಹೊಂದಿದರು. ಅವುಗಳಿಂದ ಹೊರಟ ಅಗ್ನಿಜ್ವಾಲೆಗಳು ಸತ್ಯಲೋಕದವರೆಗೂ ಬ್ರಹ್ಮಾಂಡ ಕಟಾಹಗಳಂ ದಹಿಸುತ್ತಾ ಬರಲಾಗಿ, ಚತುರ್ಮುಖ ಬ್ರಹ್ಮನು ಇದೇನಾಶ್ಚರ್ಯವಾಗಿರುವುದು. ಅಕಾಲದಲ್ಲಿ ತ್ರಿಲೋಕಗಳೂ ಭಸ್ಮವಾಗುವುದೆಂದಾಲೋಚಿಸಿ ಭಯದಿಂದ ತನ್ನ ವಾಹನವಾದ ಹಂಸವನ್ನೇರಿ ಅಮರಲೋಕಕ್ಕೆ ಬಂದು ಇಂದ್ರನನ್ನು ಕಂಡು, ಎಲೈ—ದೇವೇಂದ್ರನೇ ನೀನು ಮೌಢ್ಯದಿಂದ ಮಾಡುವ ಕಾರ್ಯವೇನು? ನಿನ್ನ ವಜ್ರಾಯುಧವನ್ನು ಹಿಂದಕ್ಕೆ ತೆಗೆದುಕೊಳ್ಳುವನವಾಗು. ಹಿಂದು ಮುಂದು ನೋಡದೆ ಆ ಮಹಾನುಭಾವನಾದ ಮನುಷ್ಯನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಬಹುದೇ ಆತನು ತಪೋಮಹಿಮಾತಿಶಯದಿಂದಿರುವ ಪುಣ್ಯಪುರುಷನು. ಉತ್ತಮ ಗುರುಪ್ರಸಾದವನ್ನು ಹೊಂದಿರುವನು. ಅಜೇಯವಾದ ಆತನ ಚಂದ್ರಾಯುಧವನ್ನು ಎಂದಿಗೂ ನಿನ್ನ ಆಯುಧವು ಗೆಲ್ಲಲಾರದು. ಆತನ ಮಹಿಮೆಯನ್ನೆಲ್ಲ ನಾನರಿತಿರುವೆನೆಂದು ಆ ಮಹಾಪುರುಷನ ವೃತ್ತಾಂತವನ್ನೆಲ್ಲಾ ತ್ರಿದಶಾಧಿಪನಿಗೆ ತಿಳಿಸಿ ಅವರಿಬ್ಬರಿಗೂ ಪರಸ್ಪರ ಮೈತ್ರೀಭಾವವನ್ನುಂಟುಮಾಡಿ ತಾನು ಸತ್ಯಲೋಕಕ್ಕೆ ತೆರಳಿದನು. ತರುವಾಯ ಚತುರ್ಮುಖನ ಅಪ್ಪಣೆಯಂತೆ ರಾಜಹಂಸನೂ ದೇವೇಂದ್ರನೂ ತಮ್ಮ ತಮ್ಮ ಆಯುಧಗಳನ್ನು ಉಪಸಂಹಾರ ಮಂತ್ರದಿಂದ ಹಿಂದಕ್ಕೆ ತೆಗೆದುಕೊಂಡವರಾಗಲು, ಬಳಿಕ ದೇವೇಂದ್ರನು ರಾಜಹಂಸನನ್ನು ತನ್ನ ಅಂತಃಪುರಕ್ಕೆ ಕರೆದುಕೊಂಡು ಹೋಗಿ ನಾನಾವಿಧವಾದ ಮರ್ಯಾದೆಗಳನ್ನು ಮಾಡಿ ತನ್ನ ಮಗಳಾದ ಸೂರ್ಯಕಾಂತಾಮಣಿಯೆಂಬ ದೇವಕನ್ನೆಯನ್ನಾತಂಗಿತ್ತು ಮದುವೆಯನ್ನು ಮಾಡಿದನು.

ಬಳಿಕ ರಾಜಹಂಸನು ಕಾಂತಾಮಣಿಯೊಂದಿಗೆ ವಿಹರಿಸುತ್ತಾ ಅಮರರಿಂದ ಸ್ತುತಿಸಲ್ಪಡುತ್ತಾ ಒಂದಾನೊಂದು ದಿವಸ ಊರ್ವಶಿಯನ್ನು ನೋಡಿ ಆಕೆಗೆ ಕಂಜಾಕ್ಷನ ವೃತ್ತಾಂತವನ್ನೆಲ್ಲಾ ತಿಳುಹಿದನು. ಅದಕ್ಕವಳು ನಾನು ಭೂಲೋಕಕ್ಕೆ ಯಾವರೀತಿಯಿಂದ ಬರಲಿ. ಆದರೆ ನನ್ನಲ್ಲಿ ಒಂದು ವೀಣೆ ಇರುವುದು ಅದನ್ನು ನಿನ್ನ ಕೈಗೆ ಕೊಡುವೆನು. ನೀನಾತಂಗೆ ಅದನ್ನು ಕೊಟ್ಟರೆ ಯಾವ ಕಾಲದಲ್ಲಿ ಅದನ್ನು ಮಿಾಟುವನೋ ಆಗ ನಾನು ಬಂದು ಆತನ ಅಭೀಷ್ಟವನ್ನು ಸಲಿಸುವೆನೆಂದು ಹೇಳಿ ವೀಣೆಯನ್ನು ಕೊಟ್ಟಳು. ಬಳಿಕ ರಾಜಹಂಸನು ಕಂಜಾಕ್ಷಿಯನ್ನು ಮನದೊಳು ನೆನೆದು ಅವಳನ್ನು ಬಿಟ್ಟಿರಲಾರದೆ ತನ್ನಲ್ಲಿ ಅವಳಿಗಿರುವ ಮೋಹವನ್ನು ಕುರಿತು ಹಂಬಲಿಸಿ ಅವಳ ಕಟ್ಟಳೆಯಂತೆ ಹದಿನಾರನೇ

ದಿವಸವನ್ನು ನಿರೀಕ್ಷಿಸುತಲಿದ್ದನು. ಅತ್ತಲಾ ಗಾಂಧಾರದೇಶದ ಅವನಿಪಾಲನು ರಾಜಹಂಸನು ಬಾರದೇ ಇರುವುದನ್ನರಿತು ಬಹಳವಾಗಿ ಶೋಕಿಸುತ್ತಾ ತನ್ನ ಮಗಳ ಅಂತಃಪುರವನ್ನೈದಿ ಪುತ್ರಿಯಂ ಕುರಿತು, ಎಲೈ ಪುತ್ರಿಕಾರತ್ನವೇ ನೀನು ದುಃಖಿಸಬೇಡ. ದೇವಲೋಕಕ್ಕೆ ಹೋದ ಮನುಷ್ಯರು ಪುನಃ ಬರುವುದು ಸಂಶಯವಾಗಿರುವುದು. ಆದುದರಿಂದ ನೀನು ವ್ಯಸನವಂ ತ್ಯಜಿಸಿ, ಈ ಚಿತ್ರ ಪಠಗಳಲ್ಲಿರುವ ಯಾರನ್ನಾದರೂ ಓರ್ವ ರಾಜತನಯನನ್ನು ವರಿಸು. ಅವ ನನ್ನು ತಂದು ನಿನಗೆ ವಿವಾಹ ಮಾಡುವೆನೆನಲಾಗಿ, ಆ ಬಿಸರುಹದಳಾಕ್ಷಿಯು ತಂದೆಯೇ, ಈ ಲೋಕದಲ್ಲಿ ಮಾನವುಳ್ಳ ಅಂಗನಾಮಣಿಗಳು ಪ್ರತ್ಯೇಕವರಾಯು ಣರಾಗಿ ಓರ್ವ ಪತಿಯನುಳ್ಳವರಾಗಿರುವರಲ್ಲದೆ ಒಂದು ಕಾಲಕ್ಕೂ ಪರಪುರುಷ ರನ್ನು ಅಪೇಕ್ಷಿಸರು. ನಾನು ಮೊದಲಿನಿಂದಲೂ ಆ ರಾಜಹಂಸನನ್ನೇ ಪತಿ ಯಾಗಿ ಭಾವಿಸಿರುವದರಿಂದ ಅನ್ಯರನ್ನು ಬಯಸಲಾರೆನು. ಆತನು ಬಾರದೇ ಇರಲು, ಅಗ್ನಿಪ್ರವೇಶವನ್ನು ಮಾಡುವುದು ನನಗೆ ಧರ್ಮವೆಂದು ನಿಶ್ಚೈಸಿರು ವೆನು. ಆ ರಾಜಪುತ್ರನಲ್ಲದೆ ತ್ರಿಮೂರ್ತಿಗಳನ್ನಾಗಲಿ, ದೇವೇಂದ್ರನನ್ನಾ ಗಲಿ, ಇತರ ರಾಜಪುತ್ರರನ್ನಾಗಲಿ ಯಾರನ್ನೂ ಅಪೇಕ್ಷಿಸುವುದಿಲ್ಲವು. ಎಂದೀ ಪ್ರಕಾರ ನುಡಿದ ತನಯಳ ವಾಕ್ಯವಾಲೈಸಿದ ಪೊಡವಿಪಾಲಕನು, ಎಲೈ ಅಂಗ ನಾರತ್ನವೇ, ನೀನಾರಾಜಪುತ್ರನನ್ನು ಅಗ್ನಿಸಾಕ್ಷಿಯಾಗಿ ವರಿಸುವುದಕ್ಕಿಂತ ಮುಂಚೆಯೇ ಅವನನ್ನು ಪತಿಯನ್ನಾಗಿ ತಿಳಿದಿರುವುದು ಶಾಸ್ತ್ರಸಮ್ಮತವೇ ಹೇಳೆಂದು ಕೇಳಲು ಆ ಕಂಜಾಕ್ಷಿಯು ಸಾವಿತ್ರಿದೇವಿ, ಚಂದ್ರನಿಭಾನನ ಇವರು ಗಳ ಕಥಾವಿಸ್ತಾರವನ್ನರುಹಲಾಗಿ ಅದಕ್ಕೆ ಪ್ರತ್ಯುತ್ತರವನ್ನು ಕೊಡಲು ರಾಜನು ಏನೂ ಅರಿಯದವನಾಗಿ ಅಲ್ಲಿ ನಿಲ್ಲದೆ ತನ್ನ ಸಭೆಗೆ ಬಂದು ಆಪ್ತಮಂತ್ರಿಯನ್ನು ಕರೆಸಿ, ತನ್ನ ಪುತ್ರಿಯ ಅಭಿಪ್ರಾಯವನ್ನು ತಿಳುಹಿ, ಪಟ್ಟಣವನ್ನು ಅಲಂಕರಿಸಿ, ಬೀದಿಬೀದಿಗಳಲ್ಲಿಯೂ ಪಚ್ಚೆತೋರಣಗಳನ್ನು ಕಟ್ಟಿಸಿ, ದೇಶದೇಶದೊಳೆಲ್ಲಾ ಪ್ರಕಟಪಡಿಸಿ ಊರಹೊರವಳಯದಲ್ಲಿ ಅಗ್ನಿಕುಂಡವನ್ನು ನಿರ್ಮಾಣ ಮಾಡಿಸಿ ದನು. ಹದಿನಾರನೆಯ ದಿವಸ ರಾಜಪುತ್ರಿಯು ಅರಶಿನ ನೀರಿನಲ್ಲಿ ಸ್ನಾನವನ್ನು ಮಾಡಿ, ಹಳದಿಯ ವಸ್ತ್ರಗಳನ್ನು ಧರಿಸಿಕೊಂಡು ದೇಹಕ್ಕೆಲ್ಲಾ ಕುಂಕುಮವ ನ್ನಲಂಕರಿಸಿಕೊಂಡು, ಸಕಲಾಭರಣ ಭೂಷಿತಳಾಗಿ ಕೆಂಪುವರ್ಣದ ಪುಷ್ಪಗಳನ್ನು ಧರಿಸಿ, ಮಂಗಳವಾದ್ಯಗಳಿಂದ ಪಾದಚಾರಿಯಾಗಿ ಪಟ್ಟಣವನ್ನೆಲ್ಲಾ ಸುತ್ತುತ್ತಾ ಮುತ್ತೈದೆಯರಿಗೆ ನಾನಾವಿಧಗಳಾದ ದಾನಗಳನ್ನು ಕೊಡುತ್ತಾ ಅಗ್ನಿಕುಂಡದ ಸಮೀಪವನ್ನೈದಿದಳು. ಈ ಆಶ್ಚರ್ಯವನ್ನು ನೋಡುವುದಕ್ಕೆ ಅನೇಕರು ಬಂದು ಬರುತ್ತಲೂ ಇದ್ದರು. ಅತ್ತಲಾ ರಾಜಹಂಸನು ದೇವೇಂದ್ರನಿಂದ ಕಳುಹಿಸಲ್ಪಟ್ಟವನಾಗಿ ತನ್ನ ಹೆಂಡತಿಯಾದ ಸೂರ್ಯಕಾಂತಾಮಣಿಯನ್ನು

ಪುಷ್ಪಕವಿಮಾನದಮೇಲೆ ಕುಳ್ಳಿರಿಸಿಕೊಂಡು, ಅತಿತೀವ್ರದಿಂದ ಅಗ್ನಿಕುಂಡದ ಸಮೀಪವನ್ನೈದಿ ಅಗ್ನಿಪ್ರವೇಶಮಾಡಲೆತ್ನಿಸಿರುವ ಕಂಜಾಕ್ಷಿಯನ್ನು ನೋಡಿ, ಎಲೈ ಪ್ರಾಣನಾಯಕಿಯೇ, ನಿನ್ನ ಮನಸ್ಸಿಗೂ ಭಕ್ತಿಗೂ ಮೆಚ್ಚಿ ಬಂದಿರುವೆನು, ಬೇಡಬೇಡವೆಂದು ನುಡಿದು ವಿಮಾನವನ್ನಿಳಿದು ಕಂಜಾಕ್ಷಿಯನ್ನು ಹಿಡಿದುಕೊಂಡನು. ತರುವಾಯ ಕಂಜಾಕ್ಷಿಯು ರಾಜಹಂಸನನ್ನು ನೋಡಿ ಮೂರ್ಛಾಕ್ರಾಂತಳಾಗಿ ಭೂಮಿಯಮೇಲೆ ಬೀಳಲು, ಅದನ್ನು ಕಂಡು ಗಾಂಧಾರಪತಿಯು ಶೀಘ್ರವಾಗಿ ಮಗಳನ್ನೆತ್ತಿ ಪಲ್ಲಕ್ಕಿಯೊಳು ಕುಳ್ಳಿರಿಸಿ ಅವಳ ಅಂತಃಪುರಕ್ಕೆ ಕಳುಹಿಸಿ ರಾಜಹಂಸನನ್ನಾಲಿಂಗಿಕೊಂಡು ಆನಂದಬಾಷ್ಪಗಳನ್ನು ಸುರಿಸುತ್ತಾ ಎಲೈ ಮಹಾತ್ಮನೆ ನೀನು ಮನುಜಮಾತ್ರದವನಲ್ಲ, ನಮ್ಮ ಭಾಗದ ದೇವರೆಂದು ಅವನನ್ನು ಬಹುವಿಧವಾಗಿ ಸ್ತುತಿಸಿ ಆತನು ಹೋಗಿ ಬಂದ ಸಕಲ ವೃತ್ತಾಂತವನ್ನು ಕೇಳಿ ತಿಳಿದುಕೊಂಡು ಆಶ್ಚರ್ಯಪಟ್ಟವನಾಗಿ ಸೂರ್ಯಕಾಂತಾಮಣಿಯನ್ನು ಸ್ತುತಿಸಿ, ಆಕೆಯನ್ನು ತನ್ನ ಪುತ್ರಿಯ ಅಂತಃಪುರಕ್ಕೆ ಕಳುಹಿಸಿ, ರಾಜಹಂಸನನ್ನು ಪಟ್ಟದಾನೆಯ ಮೇಲೆ ಕುಳ್ಳಿರಿಸಿಕೊಂಡು ಮಂಗಳವಾದ್ಯಗಳೊಡನೆ ಪುರದೊಳಕ್ಕೆ ಕರೆದುಕೊಂಡು ಹೋಗುತ್ತಲಿರಲಾಗಿ ಅದನ್ನು ನೋಡಿದ ಪುರಜನರೆಲ್ಲರೂ ಈತನು ಮನುಜಮಾತ್ರದವನಲ್ಲ, ತ್ರಿಮೂರ್ತಿಗಳಲ್ಲೋರ್ವನೆಂದು ನಿಶ್ಚೈಸಿ ನಮಗೆ ಈತನೇ ದೈವವೆಂದು ನಂಬಿ ದೇವರಿಗೆ ನಡೆಸುವ ಮರ್ಯಾದೆಗಳನ್ನು ಮಾಡಿದರು. ಗಾಂಧಾರಿಪನು ಅಳಿಯನನ್ನು ತನ್ನ ಅಂತಃಪುರದಲ್ಲಿಟ್ಟುಕೊಂಡನು. ರಾಜಹಂಸನು ಕಂಜಾಕ್ಷನಿಗೆ ಊರ್ವಶಿಯು ಕೊಟ್ಟ ವೀಣೆಯನ್ನು ಕೊಟ್ಟು ಅದರ ವೃತ್ತಾಂತವನ್ನೆಲ್ಲಾ ಉಸುರಲಾಗಿ ಕಂಜಾಕ್ಷನು ಆಶ್ಚರ್ಯವನ್ನೈದಿ ಆತನನ್ನು ಬಹಳವಾಗಿ ಸ್ತುತಿಸಿ ಆತನಿಗೆ ನಮಸ್ಕರಿಸಿದನು. ತರುವಾಯ ಗಾಂಧಾರಿಪನು ಕಂಜಾಕ್ಷನಿಗೂ ತಕ್ಕ ಕನ್ಯೆಯಂ ಬರಮಾಡಿಕೊಂಡು ಶುಭಮುಹೂರ್ತದಲ್ಲಿ ಪುತ್ರೀಪುತ್ರರಿಗೆ ವಿವಾಹ ಮಹೋತ್ಸವವನ್ನು ಅತಿ ಸಂಭ್ರಮದಿಂದ ನಡೆಸಿದನು.

ತರುವಾಯ ರಾಜಹಂಸನು ಈರ್ವರು ಭಾರ್ಯೆಯರೊಂದಿಗೆ ಸುಖಾನುಭವವನ್ನು ಹೊಂದುತ್ತಾ ಕೆಲವು ದಿವಸಗಳು ಆ ದೇಶದಲ್ಲಿಯೇ ಇದ್ದು ಬಳಿಕ ಪ್ರಯಾಣವಾಗಿ ಮಾವನವರು ಕೊಟ್ಟ ಚತುರಂಗ ಬಲವನ್ನೂ, ವಸ್ತ್ರಾಭರಣಗಳನ್ನೂ ತೆಗೆದುಕೊಂಡು ಹೆಂಡತಿಯರೊಡನೆ ತನ್ನ ದೇಶಕ್ಕೆ ಬರುತ್ತಲಿದ್ದನು. ಇಷ್ಟರೊಳಗಾಗಿ ರಾಜಹಂಸನ ತಂದೆತಾಯಿಗಳು ನಿದ್ರಾಹಾರಶೂನ್ಯರಾಗಿ ಕೃಶವಾಗುತ್ತಾ ಇರಲು ಪುತ್ರನುಬರುವ ವರ್ತಮಾನವನ್ನು ಕೇಳಿ ಆನಂದಪರವಶರಾಗಿ ಅವನನ್ನು ಇದಿರ್ಗೊಂಡು, ಮಂಗಳವಾದ್ಯಗಳೊಡನೆ ಪುರಪ್ರವೇಶವನ್ನುಮಾಡಿಸಿ ಅವನು ಭೂಸಂಚಾರ ಮಾಡಿಬಂದ ಸಕಲ ವರ್ತಮಾನವನ್ನು ಕೇಳಿ ಆಶ್ಚರ್ಯಾ

ನಂದಭರಿತನಾಗಿ ಮಗನನ್ನು ಮುದ್ದಿಟ್ಟು ಸೊಸೆಯರನ್ನು ಸಂತೈಸಿದನು. ರಾಜಹಂಸನು ತನ್ನ ಕೀರ್ತಿಯು ದಿಗಂತ ವಿಶ್ರಾಂತವಾಗುವಂತೆ ದೇಶದೇಶಗಳಿಗೂ ದಂಡೆತ್ತಿ ಹೋಗಿ ಭೂಪಾಲಕರನ್ನೆಲ್ಲಾ ವಶಮಾಡಿಸಿಕೊಂಡು ಭೂಮಂಡಲವನ್ನೆಲ್ಲಾ ಏಕಚಕ್ರಾಧಿಪತ್ಯದಿಂದ ಪಾಲಿಸುತ್ತಾ, ಅನೇಕ ಧರ್ಮಗಳನ್ನುಮಾಡುತ್ತಾ, ಯೋಗಿಗಳನ್ನೂ, ಜ್ಞಾನಿಗಳನ್ನೂ ಸೇವಿಸುತ್ತಾ ರಾಜತಪಸ್ವಿಯಾಗಿ ನಿರ್ವಿಕಲ್ಪ ಸಮಾಧಿಯೊಳು ನಿಂತು ಅನೇಕ ದಿವಸಗಳವರೆಗೂ ರಾಜ್ಯವನ್ನು ಪಾಲಿಸಿ, ಬಳಿಕ ಪತಿವ್ರತಾ ಶಿರೋಮಣಿಯಾದ ಕಂಜಾಕ್ಷಿ ಸಹಿತವಾಗಿ ದೇಹವನ್ನು ತ್ಯಜಿಸಿ ಶಾಶ್ವತ ಸುಖಾನಂದ ಪದವಿಯನ್ನು ಹೊಂದಿದರೆಂದು ಶ್ರೀ ಕೃಷ್ಣನು ಹೇಳಲಾಗಿ ಇಂದ್ರನಂದನನು ಆಶ್ಚರ್ಯಭರಿತನಾಗಿ, ರಾಜಹಂಸನನ್ನು ಸ್ತುತಿಸಿ, ವಾಸುದೇವನಿಗಭಿವಂದಿಸಿ, ಎಲೈ—ಮಹಾನುಭಾವನೇ ಇದು ಬಹಳ ಪಾವನವಾದ ಚರಿತವು, ಕಣ್ಣುಗಳೊಳು ನಿದ್ರೆಯು ತಾಂಡವಾಡುತ್ತಲಿರುವುದು, ನಿದ್ರಿಸೋಣ ಬಾರೆನಲು, ಭಗವಂತನು ಸಮ್ಮತಿಸಿದವನಾಗಿ ಈರ್ವರೂ ಶಯನಿಸಿ ಸುಖನಿದ್ರೆಯನ್ನು ಮಾಡಿದರು.

ಒಂಭತ್ತನೆಯ ಕಥೆಯು ಸಂಪೂರ್ಣ.



ಶ್ರೀರಸ್ತು.

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ

## ವೀರಸೇನರಾಯನೆಂಬ ಹತ್ತನೆ ರಾಜಪುತ್ರನ ಕಥೆ

ಹತ್ತನೆಯ ದಿವಸದ ರಾತ್ರಿ ಕೃಷ್ಣನೂ, ಅರ್ಜುನನೂ ಈರ್ವರೂ ಯಮುನಾನದಿ ಪ್ರಾಂತ್ಯದ ಸೈಕತಪ್ರದೇಶದೊಳು ಕುಳಿತುಕೊಂಡು ಸರಸಸಲ್ಲಾಪಗಳನ್ನಾಡುತ್ತಾ. ಕರ್ಪೂರ ವೀಳೆಯವನ್ನು ಕೈಕೊಂಡು, ತಂಪಾಗಿ ಬೀಸುವ ಮಂದಮಾರುತಕ್ಕಾನಂದವನ್ನೈದುತ್ತಾ ಕೋಕಿಲ, ಕೀರ, ಕಲರವಾದಿ ಪಕ್ಷಿವರ್ಗಗಳ ಧ್ವನಿಗಳನ್ನಾಲೈಸುತ್ತಾ ಇರುವಲ್ಲಿ ಅರ್ಜುನನು ಪುರುಷೋತ್ತಮನನ್ನು ಕುರಿತು ಎಲೈ ದೇವದೇವ ಭಕ್ತಜನರಕ್ಷಕನೇ! ಈ ಲೋಕದಲ್ಲಿ ಜ್ಞಾನಮಾರ್ಗಾನುಕೂಲವಾದಂಥಾ ದರ್ಪಣಭಾವವೆಂಬುದನ್ನು ಕುರಿತು ಒಂದಾನೊಂದು ಇತಿಹಾಸವನ್ನೆನಗರುಹಿ ಕೃತಾರ್ಥನನ್ನಾಗಿ ಮಾಡಬೇಕೆಂದತಿವಿನಯದಿಂದ ಕೇಳಲಾಗಿ ವಾಸುದೇವನು ಮುಗುಳುನಗೆಯಿಂದಾ ಪಾರ್ಥನನ್ನು ನೋಡಿ ಎಲೈ—ಅಮರಾಧಿಪನಂದನನೇ, ಆರ್ಯದರ್ಪಣ ಭಾವವನ್ನೂ, ಜ್ಞಾನಮಾರ್ಗವನ್ನೂ ಅವಲಂಬಿಸಿದ ಅನೇಕ ಪುರಾತನ ಪುಣ್ಯಪುರುಷರು ಶಾಶ್ವತವಾದ ಮೋಕ್ಷವನ್ನೈದಿದರು.

ಅಂತಪ್ಪ ಮಾರ್ಗವನ್ನು ಗ್ರಹಿಸಿ ಆತ್ಮನನ್ನು ದರ್ಶಿಸಿ ಕೈವಲ್ಯ ಪದವಿಯನ್ನು ನೀನು ಪಡೆಯುವವನಾಗು ಇದರಿಂದ ಸಮಸ್ತ ಸಂಶಯಗಳು ನಿನಗೆ ನಿವೃತ್ತಿಯಾಗುವುವೆಂದು ವೀರಸೇನನೆಂಬ ರಾಜೋತ್ತಮನ ಚರಿತ್ರನನ್ನು ಹೇಳಲಾರಂಭಿಸಿದನು.

ಎಲೈ—ಇಂದ್ರನಂದನನೇ, ಲಾಲಿಸು, ಪಾಂಚಾಲ ದೇಶವೆಂಬ ಪಟ್ಟಣವುಂಟು. ಆ ಪುರವನ್ನು ಜಯತ್ಸೇನನೆಂಬ ಇಳೆಯಾಣ್ಮನು ಧರ್ಮದಿಂದ ಪರಿಪಾಲಿಸುತ್ತಿದ್ದನು. ಆ ಅವನಿಪಾಲಕನಿಗೆ ವೀರಸೇನನೆಂಬೋರ್ವ ಪುತ್ರನುದಯಿಸಿದನು ಆ ಬಾಲಕನು ಸೂರ್ಯನಂತೆ ದಿನದಿನವು ಅಭಿವೃದ್ಧಿಯನ್ನೈದುತ್ತಾ, ಕ್ರಮಕ್ರಮವಾಗಿ ಸಕಲ ವಿದ್ಯೆಗಳನ್ನು ಕಲಿತು, ಕುದುರೆಯ ಸವಾರಿಯೊಳು ಕೇವಲ ಸಾಮರ್ಥ್ಯವುಂಟಾಗಿ, ಶಾಂತಿ ಶಮದಮಾದಿಗುಣಗಳಿಂದೊಪ್ಪುತ್ತಾ ಕೆಲವು ದಿವಸಗಳಿಗ ಪ್ರಾಪ್ತವಯಸ್ಕನಾಗಿ ಯೌವನವನಪರ್ದು ಒಂದಾನೊಂದು ದಿವಸ ತನ್ನ ತಂದೆಯ ಸಭಾಸ್ಥಾನಕ್ಕೆ ಹೋಗಿ ಒಡ್ಡೋಲಗದಲ್ಲಿ ಕುಳಿತಿರುವ ರಾಜೇಂದ್ರನಾದ ಪಿತನಿಗೆ ನಮಸ್ಕರಿಸಿ, ಆತನಿಂದ ಸಂತೈಸಲ್ಪಟ್ಟವನಾಗಿ ರಾಜಧರ್ಮಗಳ ವಿಚಾರವನ್ನರಿಯುತಲಿರಲಾಗಿ ಆ ಸಭೆಗೆ ಸಿಂಹಳದ್ವೀಪದಿಂದ ಕೆಲವು ದೂತರು ಬಂದು ರಾಜೇಂದ್ರನಿಗಭಿವಂದಿಸಿ, ಎಲೈ—ಪೊಡವಿಪಾಲಕನೇ ಸಿಂಹಳದ್ವೀಪದ ಇಳೆಯಾಣ್ಮನಾದ ನಮ್ಮೊಡೆಯನು, ಹಂಸವೇಣಿಯಿಂದೊಡಗೂಡಿ ತನ್ನ ಪುತ್ರಿಯಾದ ಶಾರಿಕಾವೇಣಿಯೆಂಬ ಕನ್ಯಾಮಣಿಗೆ ಸ್ವಯಂವರ ಮಹೋತ್ಸವವನ್ನು ಸಾರಿಸಿರುವನು. ರಾಜಾಧಿರಾಜರಾದ ತಾವು ಬಂಧು, ಮಿತ್ರ, ಪುತ್ರ ಚತುರಂಗ ಬಲಗಳೊಡನೆ ಅಲ್ಲಿಗೆ ದಯಮಾಡಿಸಬೇಕೆಂದು ಬಿನ್ನೈಸಿ, ಅಪ್ಪಣೆಯನ್ನು ಪಡೆದು ತಮ್ಮ ಸ್ವದೇಶಕ್ಕೆ ತೆರಳಿದರು. ಈ ವರ್ತಮಾನವನ್ನು ಪ್ರತ್ಯಕ್ಷವಾಗಿ ಸಭೆಯೊಳು ಕೇಳಿದ ರಾಜನಂದನನಾದ ಈ ವೀರಸೇನನು ಅವರ ವಿಚಾರವು ಮನಸ್ಸಿಗೆ ಚೆನ್ನಾಗಿ ಬೋಧೆಯಾಗದ ಕಾರಣ, ಆ ದಿನ ರಾತ್ರಿ ರಾಜಮಂತ್ರಿಯ ಅಂತಃಪುರಕ್ಕೆ ಹೋಗಿ ಆತನಿಂದ ಸಕಲ ಮರ್ಯಾದೆಗಳನ್ನು ಹೊಂದಿದ ಬಳಿಕ ಆತನನ್ನು ಕುರಿತು, ಎಲೈ—ಅಮಾತ್ಯವರ್ಯನೇ ಈ ದಿನ ಹಗಲು ನಮ್ಮ ರಾಜಾಸ್ಥಾನಕ್ಕೆ ಸಿಂಹಳದ್ವೀಪದಿಂದ ದೂತರು ಬಂದು ಹಂಸವೇಣಿ ಸಹಿತವಾಗಿ ಶಾರಿಕಾವೇಣಿಗೆ ಸ್ವಯಂವರವು ನಡೆಯುವಂತೆ ಹೇಳಿ ಹೋದ ವರ್ತಮಾನವು ನಿನಗೂ ತಿಳಿಯಲ್ಪಟ್ಟದ್ದಾಗಿಯೇ ಇರುವದಷ್ಟೆ, ಆ ಸಂಗತಿಯು ವಿಸರವಾಗಿ ನನಗೆ ತಿಳಿಯದೆ ಮನವು ಚಾಂಚಲ್ಯವನ್ನೈದಿರುವ ಕಾರಣ ಸ್ಪಷ್ಟವಾಗಿ ನನಗಾವೃತ್ತಾಂತವನ್ನು ತಿಳಿಯುವಂತೆ ಹೇಳಬೇಕೆನಲಾಗಿ ಆ ಮಂತ್ರಿವರ್ಯನು ತನ್ನ ಮನದೊಳಗೆ ಓಹೋ ಈತನು ಕೇಳುವ ವಿಷಯವನ್ನು ಹೇಳದಿದ್ದರೆ ಏನು ಪ್ರಮಾದವು ಸಂಭವಿಸುವುದೋ ಒಂದುವೇಳೆ ಹೇಳುವುದಾ

ದರೆ ಅದರಿಂದಲೇನು ಕೇಡುಂಟಾಗುವುದೋ ಎಂಬದಾಗಿ ಬಹುದೂರವಾದ ಯೋಚನೆಯನ್ನು ಸಾವಕಾಶದಿಂದ ಮಾಡುತ್ತಾ, ಎಲೈ—ರಾಜಪುತ್ರನೇ, ಈಗ ನೀನು ಕೇಳಿದ ಪ್ರಶ್ನೆಯು ಕೇವಲ ಪ್ರಮಾದ ವಿಷಯವಾಗಿರುವುದರಿಂದ ಅದನ್ನು ನೀನು ಕೇಳತಕ್ಕದ್ದಲ್ಲ. ಅದರಿಂದ ನಿನಗೆ ಮನದೊಳು ವ್ಯಥೆಯುಂಟಾಗಿ, ಆ ವ್ಯಸನ ಮೂಲಕ ಪಾಪವು ಸಂಭವಿಸಿ, ಆ ಪಾಪದ್ವೆಶೆಯಿಂದ ಬಳಿಕ ಶರೀರಕ್ಕೆ ನಾನಾವಿಧಗಳಾದ ಭಂಗಗಳುಂಟಾಗುವುದಲ್ಲದೆ ಎಷ್ಟುಮಾತ್ರವೂ ಸುಖಕರವಾಗದೆಂದು ಬಹಳತರದಿಂದ ಸಮಾಧಾನ ಪಡಿಸುತಲಿದ್ದರೂ ಆತನು ಕೇಳದೆ ಅವಶ್ಯವಾಗಿ ವಿಸ್ತರಿಸಿ ಪೇಳಬೇಕೆಂದು ಮುಷ್ಕರಮಾಡುತ್ತಾ ಬರಲಾಗಿ ಮಂತ್ರಿಯು ಭಯಗ್ರಸ್ಥನಾಗಿ ಪೇಳತೊಡಗಿದನು. ಕೇಳೈ:—ರಾಜಪುತ್ರನೇ, ಇಲ್ಲಿಗೆ ಸುಮಾರು ಮುನ್ನೂರು ವರ್ಷಗಳ ಹಿಂದೆ ಸಿಂಹಳದೇಶದ ಅರಸನು ತನ್ನ ಮಗಳಾದ ಹಂಸವೇಣಿಯೆಂಬುವ ರಾಜಕನ್ಯಾರತ್ನಕ್ಕೆ ಮದುವೆಯನ್ನು ಮಾಡಬೇಕೆಂದೆಣಿಸಿ ದೇಶದೇಶದಲ್ಲಿರುವ ರಾಜಾಧಿರಾಜರ ಪುತ್ರರುಗಳ ಚಿತ್ರಪಠಗಳನ್ನು ತರಿಸಿ ಅವುಗಳನ್ನು ಕುವರಿಗೆ ತೋರಿಸಿ ಅವಳನ್ನು ಕುರಿತು ತನಯಳೇ, ಈ ಪಠಗಳಲ್ಲಿ ನಿನಗೆ ಇಷ್ಟವಾದವನನ್ನು ಕೋರುವಳಾಗೆಂದೇಳಲು, ಆ ಕನ್ಯಾಮಣಿಯು ಆ ಪಠಗಳೊಳಗಣ ರಾಜಪುತ್ರರ್‍ಯಾರನ್ನೂ ತನಗಿಷ್ಟವಿಲ್ಲವೆಂಬದಾಗಿ ನುಡಿದಂತೆಯೂ, ಬಳಿಕ ರಾಜಪುತ್ರನು ತನ್ನ ಸೋದರರಿಗೆ ವಿವಾಹ ಮಾಡಲೆಣಿಸಿ ಐವತ್ತಾರು ದೇಶದ ರಾಜರುಗಳನ್ನೆಲ್ಲಾ ಕರೆಸಿದಂತೆಯೂ, ಆ ಲತಾಂಗಿಯು ಅವರಲ್ಲಿ ಯಾರನ್ನೂ ವರಿಸದೆ ನಿರಾಕರಿಸಿದಂತೆಯೂ ತರುವಾಯ ಆತನ ಮಗನು ತನ್ನ ಸೋದರತ್ತೆಯಾದ ಹಂಸವೇಣಿಯ ಅಂತಃಪುರಕ್ಕೆ ಹೋಗಿ ಆಕೆಯನ್ನು ಕುರಿತು, ಎಲೈ ಅತ್ತೆಯೇ ನಿನ್ನಿಂದ ನಮ್ಮ ರಾಜವಂಶಜನ್ಯರಾದ ಅಬಲೆಯರಿಗೆ ವಿವಾಹವು ನಡೆಯದೆ ನಿಂತಿರುವುದರಿಂದ ಲೋಕದಲ್ಲಿ ದೋಷಾಪವಾದಗಳಿಗೆ ಅವಕಾಶವಾಗಿರೋಣದರಿಂದ ನೀನು ವಿವಾಹಕ್ಕೆ ಸಮ್ಮತಿಸುವಳಾಗೆಂದು ಪ್ರಾರ್ಥಿಸಿದ್ದಕ್ಕೆ ಆ ಕಮಲವದನೆಯು ಆತನನ್ನು ಕುರಿತು, ಎಲೈ—ಮಗುವೇ, ನನ್ನ ಪ್ರಶ್ನೆಗಳಿಗೆ ಯಾರು ಉತ್ತರವನ್ನು ಸಮರ್ಪಕವಾಗಿ ಕೊಡುವರೋ ಅಂಥವರನ್ನೇ ನಾನು ವರಿಸುವೆನು, ಇಲ್ಲದೆಹೋದರೆ ಅವರ ತಲೆಯನ್ನು ತೆಗೆಸುವೆನೆಂದು ಹೇಳಿದಂತೆಯೂ, ಅದೇ ಪ್ರಕಾರ ಸ್ವಯಂವರವನ್ನು ಸಾರಿಸಿದ ಹಾಗೂ, ಅನೇಕ ರಾಜಾಧಿರಾಜರೂ, ರಾಜತನಯರೂ ಆ ಕನ್ಯೆಯ ಮೇಲಣ ವ್ಯಾಮೋಹದಿಂದ ಗರ್ವವನ್ನು ಹೊಂದಿ ಸಿಂಹಳದೇಶಕ್ಕೆ ಹೋಗಿ, ಆ ಅಂಗನಾಮಣಿಯ ಪ್ರಶ್ನೆಗಳಿಗೆ ಉತ್ತರವನ್ನೀಯಲಾರದೆ ಮರಣವನ್ನೈದಿದರೆಂತಲೂ ಈ ಪ್ರಕಾರ ತಿಳಿದುಬಂದಿರುವುದು. ಈವರಿವಿಗೆ ಒಂಭತ್ತು ತರದ ರಾಜರುಗಳು ಅದೇ ರೀತಿಯಾದ ಸ್ವಯಂವರವನ್ನು ಪ್ರಸಿದ್ಧಪಡಿಸಿದ್ದರಿಂದ ನಿಮ್ಮ ವಂಶ

ದಲ್ಲಿಯೂ ಹಿಂದೆ ಮೂರು ಜನರು ಹೋಗಿ ಅಲ್ಲಿಯೇ ಮೃತಿಯನ್ನೈದಿದರು. ಆ ಹಂಸವೇಣಿಯೆಂಬ ಅಂಗನಾಮಣಿಗೆ ಕೌಮಾರ ವಾರ್ಧಿಕ್ಯಗಳಿಲ್ಲದೆ ಬಾಲ ಕನ್ಯೆಯಾಗಿಯೇ ಇರುವಳು. ಇದರ ನಿಮಿತ್ತವೇನೋ ನಾನರಿಯೆನು. ಇಂದಿಗೆ ಹತ್ತನೆಯ ತರವು. ಈಗ ರಾಜನು ತನ್ನ ಪುತ್ರಿ ಶಾರಿಕಾವೇಣಿಯೊಡನೆ ಸ್ವಯಂವರವನ್ನು ಪ್ರಸಿದ್ಧಪಡಿಸಿರುವನೆಂದು ಆ ದೂತರು ಹೇಳಿ ಹೋದರು. ಆಹಾ! ಅದು ಕೇವಲ ಅಸಾಧ್ಯ ಪ್ರಕರಣವಾಗಿರುವುದರಿಂದ ನೀನು ಜಾಗ್ರತೆ ಯಾಗಿರು ಕಾರಣಾಂತರದಿಂದ ಮೋಸವೇನಾದರೂ ಬಂದೀತೆಂದು ಆ ರಾಜ ತನಯುನಿಗೆ ಅನೇಕ ನೀತಿ ಮಾರ್ಗಗಳನ್ನೂ, ಸಕಲವಾದ ಧರ್ಮಶಾಸ್ತ್ರಗಳನ್ನೂ ಬೋಧಿಸಿ ಆತನ ಅಂತಃಪುರಕ್ಕೆ ಕಳುಹಿಸಿದವನಾದನು.

ತರುವಾಯ ವೀರಸೇನನು ತನ್ನ ಬುದ್ಧಿಕುಶಲತೆಗಳಿಂದ ಆ ಹಂಸವೇಣಿ ಯಮೇಲೆ ಒಡಿದಂಥಾ ಚಿತ್ತಚಾಂಚಲ್ಯವನ್ನು ಕೆಲವು ದಿವಸಗಳವರಿವಿಗೂ ಮರೆ ತನನಾಗಿ, ಬಳಿಕ ದೈವತಂತ್ರದಿಂದ ಅವಳಮೇಲೆ ವ್ಯಾಮೋಹ ಹುಟ್ಟಿ ಅದನ್ನು ಮರೆಯಲಾರದೆ ಮೋಹಾತಿಶಯವುಳ್ಳವನಾಗಿ ಏನೂ ತಿಳಿಯದೆ ಹಗಲು ರಾತ್ರಿ ಗಳಲ್ಲೆಲ್ಲಾ ಆ ಹಂಸವೇಣಿಯನ್ನೇ ಮನದೊಳು ನೆನೆಯುತ್ತಾ, ಮದನಾಗ್ನಿಗೆ ತತ್ತರಿಸಿ, ಕಡೆಗೆ ತನ್ನ ಪ್ರಾಣಗಳಮೇಲೆ ಇಚ್ಛೆಯಿಲ್ಲದವನಾಗಿ, ಒಂದಾನೊಂದು ದಿವಸ ತನ್ನ ವಸ್ತ್ರಾಭರಣಗಳನ್ನೂ, ಆಯುಧಗಳನ್ನೂ, ಬೇಕಾದಷ್ಟು ಧನವನ್ನೂ, ತೆಗೆದುಕೊಂಡು ನಡುರಾತ್ರಿಯ ಸಮಯದಲ್ಲಿ ಪಂಚಕಲ್ಯಾಣಿಯೆಂಬ ತನ್ನ ಕುದುರೆಯನ್ನೇರಿದವನಾಗಿ ದಕ್ಷಿಣದಿಕ್ಕನ್ನು ಕುರಿತು ಪ್ರಯಾಣವಾಗಿ ಹೋಗುತ ಲಿದ್ದನು. ಬೆಳಗಾದಮೇಲೆ ಜಯತ್ಸೇನರಾಯನು ತನ್ನ ಮಗನನ್ನೂ, ಆತನ ಕುದುರೆಯನ್ನೂ ಕಾಣದೆ ಭಯಪಟ್ಟು, ಏನೂ ತಿಳಿಯದೆ ನಿಶ್ಚೇಷ್ಟಿತನಾಗಿ ಆತ ನನ್ನು ಹುಡುಕಿಕೊಂಡು ಕರೆತರುವುದಕ್ಕೋಸ್ಕರ ನಾಲ್ಕು ದಿಕ್ಕುಗಳಿಗೂ ದೂತ ರನ್ನು ಕಳುಹಿದನು. ರಾಜನ ಮಂತ್ರಿಯು ತನ್ನ ಮನಸ್ಸಿನಲ್ಲಿ ರಾಜಪುತ್ರನಿಗೆ ಹಂಸವೇಣಿಯ ವೃತ್ತಾಂತವನ್ನು ತಿಳುಹಿದ ವರ್ತಮಾನವನ್ನು ಕೇಳಿದರೆ ಏನು ಅಪಾಯ ಸಂಭವಿಸುವುದೋ ಎಂದು ಭಯಪಟ್ಟು ಯೋಚಿಸುತ್ತಾ ಹೇಳದೆಯೇ ಸುಮ್ಮನೆ ಕಾಲಕಳೆಯುತಲಿದ್ದನು. ಅತ್ತ ವೀರಸೇನನು ಬೆಳಗಾಗುವದರೊಳ ಗಾಗಿ ತನ್ನ ಕುದುರೆಯನ್ನು ಇಪ್ಪತ್ತು ಗಾವುದಗಳದೂರ ನಡೆಸಿ, ದಟ್ಟವಾದ ಅರಣ್ಯಗಳಲ್ಲಿ ಭಯರಹಿತನಾಗಿ ಹೋಗುತ್ತಾ, ಅಡ್ಡಲಾಗಿ ಬರುತ್ತಲಿರುವ ದುಷ್ಟ ಮೃಗಗಳಾದ ವ್ಯಾಘ್ರಾದಿಗಳನ್ನು ಕೊಲ್ಲುತ್ತಾ, ಭಲ್ಲೂಕಗಳನ್ನೂ, ಮದಿಸಿದ ಆನೆಗಳನ್ನೂ ಸದೆಬಡಿಯುತ್ತಾ, ಮಧುರವಾದ ವನಫಲಗಳನ್ನು ಭಕ್ಷಿಸುತ್ತಾ, ಕೊಳಗಳಲ್ಲಿಳಿದು ನೀರನ್ನು ಕುಡಿಯುತ್ತಾ, ನದೀಪ್ರವಾಹಗಳಲ್ಲಿ ಇಚ್ಛಾನುಸಾರ ವಾಗಿ ಈಜಾಡುತ್ತಾ, ಶುಕ ಪಿಕ ಶಾರಿಕವೇ ಮುಂತಾದ ಪಕ್ಷಿಗಳ ಗಾನಗಳಿಗೆ

ಆನೆಂದವನ್ನೈದುತ್ತಾ, ಹಂಸವೇಣಿಯನ್ನು ಮನದೊಳು ನೆನದು ಮದನವಿಕಾರ ವನ್ನೈದುತ್ತಾ, ಈ ರೀತಿಯಾಗಿ ಬಹಳ ದಿವಸಗಳವರಿಗೂ ಪ್ರಯಾಣಮಾಡಿ ಕೊನೆಗೆ ಅಗಸ್ತ್ಯನೆಂಬ ಮಹರ್ಷಿಯ ಆಶ್ರಮವನ್ನು ಸೇರಿ, ಆ ಮುನಿಶಿಷ್ಯರಿಂದ ಆ ತಪೋಧನನ ವರ್ತಮಾನವನ್ನೆಲ್ಲಾ ಗ್ರಹಿಸಿ, ಮುನೀಂದ್ರನ ಬಳಿಗೆ ಹೋಗಿ ಆತನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಲು, ಮುನೀಂದ್ರನಾರಾಜತನಯ ನನ್ನು ಸಂತೈಸಿ, ಎಲೈ—ರಾಜತನಯನೇ ನಿನ್ನ ದೇಶವು ಯಾವುದು? ನಿನ್ನ ತಂದೆತಾಯಿಗಳ್ಯಾರು? ಮಾನುಷಸಂಚಾರವಿಲ್ಲದಂಥಾ ಈ ಅರಣ್ಯಕ್ಕೆ ಏಕಾಂಗಿ ಯಾಗಿ ನೀನು ಬರಲು ನಿಮಿತ್ತವೇನು? ಇವುಗಳನ್ನೆಲ್ಲಾ ಕ್ರಮವಾಗಿ ನನಗೆ ತಿಳುಹುವವನಾಗೆನಲು, ರಾಜನಂದನನು ಅಂಜಲೀಬದ್ಧನಾಗಿ ಭಯಭಕ್ತಿಗಳಿಂದ ತನ್ನ ಸಕಲ ವೃತ್ತಾಂತವನ್ನು ತಿಳಿಸಿದನು. ಆಗಲಾ ತಾಪಸವರ್ಯನು ನಸು ನಗುತ್ತಾ, ಎಲೈ—ರಾಜೇಂದ್ರತನಯನೇ! ನೀನು ಬಾಲಭಾವದಿಂದ ಅಳವಲ್ಲದ ಅಪೇಕ್ಷೆಯನ್ನು ಕೋರಿದವನಾಗಿ ಬಂದೆ. ಮಾರ್ಗಾಯಾಸದಿಂದ ಕೇವಲ ತಲ್ಲಣಿಸಿರುವೆ ಅಯ್ಯೋ, ರಾಜಾಧಿರಾಜರಾದ ಅನೇಕ ಪುರಾತನ ಇತಿಯಾ ಣ್ಮರು ಆ ಹಂಸವೇಣಿಯ ನಿಮಿತ್ತದಿಂದ ಪ್ರಾಣಗಳನ್ನು ತೊರೆದುಕೊಂಡರು. ಆಕಟಕಟಾ! ನೀನಿಂಥಾ ಅಸಾಧ್ಯವಾದ ಕೋರಿಕೆಯುಳ್ಳವನಾಗಬಹುದೇ! ನೀನು ಬಂದ ದಾರಿಯನ್ನೇ ಹಿಡಿದುಕೊಂಡು ಹೋಗೆನಲು, ಆಗ ರಾಜತನಯನು ಧೈರ್ಯದಿಂದ ಮುನಿಪನನ್ನು ಕುರಿತು, ಎಲೈ—ತಾಪಸವರ್ಯರೇ! ನಿನ್ನ ಅಪ್ಪಣೆಯಂತೆ ನಡೆಯುವುದಕ್ಕೆ ಸಿದ್ಧನಾಗಿರುವೆನು. ಆದರೆ ಆ ಹಂಸವೇಣಿಯು ಮುನ್ನೂರು ಸಂವತ್ಸರಗಳಿಂದಲೂ ಬಾಲಭಾವವನ್ನೇ ಹೊಂದಿರುವುದಕ್ಕೆ ನಿಮಿ ತ್ತವೇನು? ಅವಳ ಸೌಂದರ್ಯ ಮಹಿಮಾತಿಶಯಗಳು ಯಾವ ರೀತಿಯಾಗಿರು ವುವು? ಅದನ್ನೆನಗರುಹಬೇಕೆನಲಾಗಿ ಆಗಲಾ ಕುಂಭಸಂಭವನು, ಎಲೈ—ರಾಜ ತನಯನೇ! ಆ ಲತಾಂಗಿಯನ್ನು ವರ್ಣಿಸುವುದಕ್ಕೆ ತ್ರಿಮೂರ್ತಿಗಳಿಗೂ ಅಸಾ ಧ್ಯವಾಗಿರುವುದು. ಆ ಪೂರ್ಣೇಂದುವದನೆಯು ನನ್ನನ್ನು ಕುರಿತು ಮಾಡಿದ ಶಿಶ್ರೂಷೆಗಳಿಗೆ ನಾನು ಮೆಚ್ಚಿದವನಾಗಿ ಆಕೆಯು ವೃದ್ಧಭಾವವನ್ನೈದದಂತೆ ನಾನೇ ವರವನ್ನಿತ್ತಿರುವೆನು. ಮತ್ತು ಆ ರಾಜಪುತ್ರಿಯ ಪ್ರಶ್ನೆಗಳಿಗೆ ಉತ್ತರ ಗಳು ಕೊಡುವುದಕ್ಕೆ ಯಾರು ಸಮರ್ಥರಲ್ಲ ಆವಕಾರಣ ಅಂಥವಳನ್ನು ನೀನು ಎಷ್ಟು ಮಾತ್ರವೂ ಜಯಿಸಲಾರೆ. ನೀನು ಸ್ವದೇಶಕ್ಕೆ ಹೋಗುವುದುಚಿತವಾಗಿ ರುವದರಿಂದ ತೆರಳೆಂದು ಹೇಳಿ, ಅವನ ವೃತ್ತಾಂತವನ್ನೆಲ್ಲಾ ತನ್ನ ಪತ್ನಿಯಾದ ಲೋಪಾಮುದ್ರಾದೇವಿಗೆ ತಿಳಿಸಿದನು. ಆಗಲಾ ದೇವಿಯು ಪತಿಗೆ ನಮಸ್ಕರಿಸಿ. ಎಲೈ—ತಾಪಸವರ್ಯನೆ! ಲೋಕದಲ್ಲಿ ಅಬಲೆಯರು ಎಂದಿಗೂ ಸ್ವತಂತ್ರರಲ್ಲ. ಅವರು ಸುಖಪಡುವ ಕಾಲದಲ್ಲಿ ಯಾರೂ ತೊಂದರೆಯನ್ನು ಮಾಡಬಾರದು

ಸ್ತ್ರೀಯರಿಗೆ ದಾಂಪತ್ಯ ಸುಖವಲ್ಲದೆ ಇತರ ಯಾವ ಸುಖವೂ ಅಷ್ಟು ಅಭಿಲಾಷೆ ಯಾಗಿರದು. ನಮ್ಮ ಹಂಸವೇಣಿಯು ಭರ್ತನೊಡನೆ ಸೇರಿ ಸುಖಾನುಭವ ಪಡದೆ ಎಷ್ಟು ದಿವಸಗಳ ವರಿವಿಗೂ ಜೀವಿಸಿರುವಳು. ಆದರಿಂದ ಪ್ರಯೋ ಜನವು ಕಾಣಲಿಲ್ಲ. ಈಗ ಬಂದಿರುವ ರಾಜತನಯನು ನನ್ನ ಮಾತುಲ ವಂಶ ದೊಳು ಪುಟ್ಟಿದವನಾದುದರಿಂದ ನಿನ್ನ ಕರುಣವನ್ನೀತನ ಮೇಲೆ ಅವಶ್ಯಕವಾಗಿ ತೋರಿಸಿ ಸರ್ವ ಸುಖವನ್ನುಂಟುಮಾಡೆಂದು ಭಯಭಕ್ತಿಯಿಂದ ಪ್ರಾರ್ಥಿಸಿ ದಳು. ಇಷ್ಟರೊಳಗೆ ರಾಜಪುತ್ರನು ಮುನೀಂದ್ರನ ಪಾದಕಮಲಗಳಿಗೆರಗಿ, ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ, ತಾಪಸವರ್ಯನೇ! ನನಗೆ ಆ ಹಂಸವೇಣಿ ಯನ್ನು ಅನುಕೂಲ ಮಾಡದಿದ್ದರೆ ಅನ್ಯಥಾ ಗತಿಯಿಲ್ಲ. ನಿನ್ನನ್ನು ಬಿಟ್ಟರೆ ನನಗೆ ಗತಿಯಾರು? ಎಲೈ ಪಾವನಚರಿತನೇ! ನೀನು ಅಪಾರವಾದ ಸಮುದ್ರೋದಕ ವನ್ನೆಲ್ಲಾ ಅಂಗೈಯಲ್ಲಿ ತೆಗೆದುಕೊಂಡು ಪಾನವನ್ನುಮಾಡಿ ಅಮರರಿಗೆಲ್ಲಾ ಸುಖವನ್ನು ಉಂಟುಮಾಡಲಿಲ್ಲವೇ? ಮತ್ತು ಸೂರ್ಯಚಂದ್ರರ ಸಂಚಾರಕ್ಕೆ ವಿರೋಧ ಮಾಡಿದ್ದ ವಿಂಧ್ಯಪರ್ವತದ ಗರ್ವವಂ ಸಡೆದು ದಕ್ಷಿಣದಿಕ್ಕಿನಲ್ಲಿ ಮುಳುಗಿಸಿ ಲೋಕೋಪಕಾರ ಮಾಡಿದ ಕರುಣವು ಎಲ್ಲಿ ಹೋಯಿತು? ಅಕಟ ಕಟಾ! ನನ್ನಂಥಾ ಅನಾಥನನ್ನು ರಕ್ಷಿಸುವುದು ನಿನಗೆ ಎಷ್ಟು ಮಾತ್ರವೆಂದು ನುಡಿದು ಆತನನ್ನು ಬಹಳವಾಗಿ ಸ್ತುತಿಸುತ್ತಾ ಆ ಮಹಾತ್ಮನ ಶುಶ್ರೂಷೆಯನ್ನು ಮಾಡಿಕೊಂಡು ಅಲ್ಲಿಯೇ ಇದ್ದನು.

ಈ ರೀತಿಯಾಗಿ ಕೆಲವು ಕಾಲ ಕಳೆದ ಬಳಿಕಲಾ ತಾಪಸವರ್ಯನು ಲೋಪಾಮುದ್ರೆಯ ಇಷ್ಟಪ್ರಕಾರ ರಾಜತನಯನ ಮೇಲೆ ಕರುಣಾಕಟಾಕ್ಷ ವುಂಟಾಗಿ ಒಂದಾನೊಂದು ದಿವಸ ಅವನನ್ನು ಕುರಿತು, ಎಲೈ—ಇಳೆಯಾಣ್ಮನ ತನಯನೇ! ನೀನು ಕೇವಲ ಭಕ್ತಿಯುಕ್ತನಾಗಿಯೂ, ಶ್ರದ್ಧಾವಂತನಾಗಿಯೂ ಇರುವವರಿಂದ ನಿನ್ನಲ್ಲಿ ನನಗೆ ದಯೆಯುಂಟಾಗಿರುವುದು. ಮತ್ತು ಆ ಹಂಸ ವೇಣಿಯು ನಿನಗೆ ಭಾರ್ಯೆಯಾಗುವಂತೆ ಸಂಕಲ್ಪವು ಇರುವುದರಿಂದ ಅವಳನ್ನು ನೀನು ಸುಲಭಮಾರ್ಗದಿಂದ ಸಾಧಿಸಲಳವಲ್ಲವಾದಕಾರಣ ಆದರ ಸಹಾಯ ಸಂಪತ್ತಿಗಾಗಿ ಕೆಲವು ವೇದಾಂತ ರಹಸ್ಯಗಳನ್ನರಿಯಬೇಕಾಗಿರುವುದು. ಆರ್ಯ ದರ್ಪಣವೆಂಬ ಜ್ಞಾನಮಾರ್ಗಭಾವವನ್ನು ನಿನಗೆ ಬೋಧಿಸುವೆನು. ಬಳಿಕ ನಿನ್ನ ಇಷ್ಟಸಿದ್ಧಿಯಾಗುವುದೆಂದು ಆ ರಹಸ್ಯವನ್ನು ಬೋಧಿಸಲಾರಂಭಿಸಿದನು.

## ಅಗಸ್ತ್ಯಋಷಿ ವೀರಸೇನರಾಯನಿಗೆ ಹೇಳಿದ ಆರ್ಯದರ್ಪಣ ಭಾವ

ಎಲೈ ರಾಜನಂದನನೇ! ಶ್ರದ್ಧಾಸಕ್ತನಾಗಿಯೂ, ಚಿತ್ತಚಾಂಚಲ್ಯ ರಹಿತ ನಾಗಿಯೂ ಲಾಲಿಸುವವನಾಗು. ನಮಶ್ಶಿವಾಯ ಎನ್ನುವ ಪಂಚಾಕ್ಷರೀಮಂತ್ರ



ವೀರಸೇನರಾಯ.



ಅಗಸ್ತ್ಯಮಹರ್ಷಿ.

ನನ್ನೂ, ಓಂಕಾರವಾದ ಪ್ರಣವವನ್ನೂ ಮನನಮಾಡಿ, ನೀನು ಆರ್ಜಿಸಿರುವ
ಪಾಪಗಳನ್ನು ಭಸ್ಮಮಾಡು. ಬ್ರಹ್ಮವು ಅವಾಙ್ಮಾನಸ ಗೋಚರವೆಂದು ಶೃತಿ
ಗಳು ಹೇಳುತ್ತಲಿರುವ ಪ್ರಮಾಣಗಳನ್ನು ವಿಚಾರಮಾಡಿ ನೋಡಿದರೆ ಕೂಟಸ್ಥ
ವಾದ ಬ್ರಹ್ಮವು, ವಾಕ್ಕು ಮನಸ್ಸು ಇವುಗಳಿಗೆ ಗೋಚರವಾದದ್ದಲ್ಲವೆಂದು ನಿಜ
ವಾಗಿರುವುದು. ನಿತ್ಯವಾದ ನಿರಾಕಾರಬ್ರಹ್ಮವು, ಅನಿತ್ಯಗಳಾದ ಇಂದ್ರಿಯ
ಗಳಿಗೆ ಗೋಚರವಾಗಲರಿಯ ದು. ಆಕಾಶವಲ್ಲಿ ಆಕಾಶವೂ, ವಾಯುವಿನಲ್ಲಿ
ವಾಯುವೂ, ಅಗ್ನಿಯೊಳಗೆ ಅಗ್ನಿಯೂ, ಜಲದಲ್ಲಿ ಜಲವೂ, ಪೃಥ್ವಿಯಲ್ಲಿ
ಪೃಥ್ವಿಯೂ, ಲೋಹವಲ್ಲಿ ಲೋಹವೂ ಸೇರುವ ಹಾಗೆ ಆಪೋಜ್ಯೋತೀ ರಸೋ
ಮೃತಂ ಬ್ರಹ್ಮಾ ಎಂಬುವ ಶೃತಿಯ ಪ್ರಕಾರ ಆ ಆಪೋಜ್ಯೋತಿಯಿಂದ ಆ
ಬ್ರಹ್ಮನನ್ನು ನೋಡತಕ್ಕದ್ದಲ್ಲದೆ, ಜ್ಞಾನೇಂದ್ರಿಯಗಳೆಂಬ ಶ್ರೋತ್ರ, ತ್ವಕ್ಕು,
ಚಕ್ಷು, ಜಿಹ್ವಾ, ಘ್ರಾಣ ಎಂಬಿವುಗಳಿಂದಲೂ, ಕರ್ಮೇಂದ್ರಿಯಗಳಾದ ವಾಕ್ಕು,
ಪಾಣಿ, ಪಾದ, ಗುಹ್ಯ, ಪಾಯುಗಳೆಂಬಿವುಗಳಿಂದಲೂ, ಮತ್ತು ಮನೊ ಇಂದ್ರಿ
ಯದಿಂದಲೂ, ಗೋಚರಿಸಲ್ಪಡತಕ್ಕದ್ದಲ್ಲ. (ಆಪಃ ನೀರಿನಲ್ಲಿ ಜ್ಯೋತಿಃ ಜ್ವಲಿ
ಸುವುದು.) ಅಂದರೆ ಉದಕದೊಳು ಪ್ರತಿಬಿಂಬಗಳಾದುದರಿಂದ ಆಪೋಜ್ಯೋತಿ
ಯೆಂದು ಹೆಸರು. ಕನ್ನಡಿಯೊಳಗೆ ಈ ರೀತಿಯಾಗಿ ಕಾಣಬರುವ ಪ್ರತಿಬಿಂಬಾ
ಕೃತಿಗಳನ್ನು ನೀನು ನೋಡೆಂದು ಕನ್ನಡಿಯನ್ನಾರಾಜಪುತ್ರನ ಕೈಗೆ ಕೊಟ್ಟು
ಎಲೈ ರಾಜಾತ್ಮಜನೇ! ಗವಾಕ್ಷವಂ ತೆರದು ಸ್ಥೂಲವಾದಂಥಾ ಕಣ್ಣಿನ ಗುಡ್ಡೆ
ಯನ್ನೂ, ಅದರಲ್ಲಿ ಸೂಕ್ಷ್ಮವಾಗಿ ಕಾಣುತ್ತಲಿರುವ ಬೊಂಬೆಯನ್ನೂ, ಆ

ಬೊಂಬೆಯ ಮಧ್ಯದಲ್ಲಿ ಅತ್ಯಂತ ಸೂಕ್ಷ್ಮವಾಗಿರುವ ಕಾರಣಭೂತಗಳಾದ ಬಿಂಬಗಳನ್ನು ಅವಲೋಕಿಸು. ಅವುಗಳನ್ನೇ ತೇಜಸ್ಸೆಂತಲೂ, ಕಳಾಯೆಂತಲೂ, ವಿವೇಕವೆಂತಲೂ, ಆಪೋಜ್ಯೋತಿಯೆಂಬದಾಗಿಯೂ, ಮಹಾಲಿಂಗವೆಂತಲೂ, ಹೇಳುವರು, ಆ ಬಿಂಬಗಳಲ್ಲದೆ ಬೇರೇ ಬ್ರಹ್ಮನನ್ನು ನೋಡಲಾಗುವುದಿಲ್ಲ ಮತ್ತು ಅಲ್ಲಿ ವಟಪತ್ರಶಾಯಿಯಾಗಿರುವ ಕಾರಣಸ್ವರೂಪನಾದ ನಾರಾಯಣ ಮೂರ್ತಿಯೂ, ಗಂಗೆಯೂ, ಯಮುನೆಯೂ, ಸರಸ್ವತಿಯೂ, ಮುಕ್ತಿಕಾಂತಾ ಮಣಿಯೂ ಅದರ ಹತ್ತಿರದಲ್ಲೇ ಇರುವರು. ಸಾಕ್ಷಾತ್ ಗುರುಮುಖದಿಂದ ಇವುಗಳನ್ನೆಲ್ಲವನ್ನು ಗ್ರಹಿಸಿದ ಪುಣ್ಯಪುರುಷರಿಗೆ ಮೋಕ್ಷವೆಂಬುವದು ಅಂಗೈ ಯೊಳಗೆ ಇದ್ದಂತೆಯೆ ಸಿದ್ಧವಾಗಿರುವುದು. ಇಂತಪ್ಪ ಮಹನೀಯರು ಲೋಕ ದಲ್ಲಿ ಸೂರ್ಯಚಂದ್ರರಿರುವವರೆಗೂ ಜನನಕಾರಣವನ್ನೈದಲಾರರೆಂದು ಮುನಿ ಪೋತ್ತಮನು ಸಕಲ ರಹಸ್ಯಗಳನ್ನು ಬೋಧಿಸಲಾ ರಾಜಪುತ್ರನು ಅತ್ಯಾಶ್ಚರ್ಯ ಪರವಶನಾಗಿ ಆ ಮುನೀಂದ್ರನ ಪಾದಕಮಲಗಳನ್ನು ತನ್ನ ನೇತ್ರಕಮಲಗಳಿಂದ ಒತ್ತಿಕೊಂಡು ಎಲೈ ಮಹಾನುಭಾವನೇ ! ನನ್ನ ಭಾಗ್ಯವನ್ನೆಷ್ಟೆಂದು ವರ್ಣಿಸಲಿ ! ಮೊದಲು ಎಂದಿಗೂ ನನಗೆ ಕಾಣಿಸದೇ ಇದ್ದಂಥಾ ಈ ಬಿಂಬಗಳು ಈ ದಿನ ಎಲ್ಲಿಂದ ಬಂದು ಕಾಣಿಸಿದವೆಂದು ಬಹು ವಿಧಗಳಿಂದ ಆತನನ್ನು ಸ್ತುತಿಸಿದನು. ಆ ಮುನೀಂದ್ರನು ಈ ರೀತಿಯಾಗಿ ಸಕಲ ವೇದಾಂತ ರಹಸ್ಯಗಳನ್ನು ರಾಜತನ ಯನಿಗೆ ಬೋಧಿಸಿದನೆಂದು ಶ್ರೀಕೃಷ್ಣನುಸುರಲಾಗಿ, ಇಂದ್ರನಂದನನು ಆನಂದ ವನ್ನೈದುತ್ತಾ, ಗೋವಿಂದನನ್ನು ಬಹಳವಾಗಿ ಸ್ತುತಿಸಿ, ಆ ಸಕಲರಹಸ್ಯಗಳನ್ನು ಸಂಗ್ರಹಿಸಿದವನಾಗಿ, ಎಲೈ ದೇವದೇವನೇ ! ನಿನ್ನನ್ನು ಕೀರ್ತಿಸುವುದಕ್ಕೆ ನಾನೆಷ್ಟು ಮಾತ್ರದವನು ನನ್ನ ಭಾಗ್ಯವೇ ಭಾಗ್ಯ. ಎಲೈ—ದೇವ ! ವೀರಸೇನ ರಾಯನ ಮುಂದಣ ಕಥಾವೃತ್ತಾಂತವನ್ನೆನಗೆ ವಿಶದವಾಗಿ ತಿಳುಹಬೇಕೆಂದು ಪ್ರಾರ್ಥಿಸಿದ ಪಾಂಡುನಂದನನಿಗೆ ಶ್ರೀಕೃಷ್ಣನಿಂತೆಂದನು

ಕೇಳೈ ಪಾರ್ಥನೇ ! ಈ ರೀತಿಯಾಗಿ ಅಗಸ್ತ್ಯ ಮಹಾಋಷಿಯು ವೀರ ಸೇನನಿಗೆ ನಿರೂಪಿಸಿದ ತರುವಾಯ ಅವನನ್ನು ಕುರಿತು, ಎಲೈ-ರಾಜನಂದನನೇ ! ವೇದಾಂತರಹಸ್ಯಗಳಲ್ಲಿ ಎಲ್ಲಿಯೂ ನಿನಗೆ ಸಂಶಯವಿಲ್ಲವಷ್ಟೆ. ನೀನಾ ಹಂಸ ವೇಣಿಯ ಪ್ರಶ್ನೆಗಳಿಗೆ ಅನುಸಾರವಾದ ಸಮಾಧಾನಗಳನ್ನು ನುಡಿದು ಅವಳನ್ನು ವಿವಾಹಮಾಡಿಕೊಂಡು ಬರುವವನಾಗೆಂದು ಅಪ್ಪಣೆಯನ್ನೀಯಲು, ವೀರಸೇನನು ಋಷಿಗೆ ನಮಸ್ಕರಿಸಿ ಅಲ್ಲಿಂದ ಹೊರಟು ಕೆಲವು ದಿವಸಗಳಿಗೆ ಪಾಂಡ್ಯದೇಶ ವನ್ನು ಸೇರಿ, ಆ ಪಟ್ಟಣದೊಳಗೋರ್ವ ಅಡಿಗೆ ಕೂಲಿಯವಳ ಮನೆಯನ್ನು ಹೊಕ್ಕು ಅವಳ ಮನೆಯಲ್ಲಿ ಭೋಜನವನ್ನು ಮಾಡಿಕೊಂಡು ವಿಶ್ರಾಂತಿಯನ್ನೈ ದುತ್ತ ಆ ಮನೆಯವಳನ್ನು ಕುರಿತು, ಎಲೈ ತಾಯಿಯೇ ! ಈ ಪಟ್ಟಣದ ಹೆಸ

ರನ್ನೂ, ಇದನ್ನಾಳುವ ಪ್ರಭುವಿನ ನಾಮಧೇಯವನ್ನೂ, ಇಲ್ಲಿನ ವಿಶೇಷ ವರ್ತಮಾನಗಳನ್ನೂ ನನಗೆ ಪೇಳಬೇಕೆನಲಾಗಿ ಅವಳಿಂತೆಂದಳು.

ಎಲೈ ರಾಜೋತ್ತಮನೇ! ಇದು ಮಧುರಾಪುರಿ. ಇದನ್ನಾಳುವ ಇಳೆಯಾಣ್ಮನೆ ಚಿತ್ರಾಂಗದರಾಯನು. ಈತನಿಗೆ ದೇವನಾಗಕನ್ಯೆಯರನ್ನು ತಿರಸ್ಕರಿಸುವಂಥಾ ಅತ್ಯಂತ ಸೌಂದರ್ಯವುಳ್ಳ ಶುಕವೇಣಿಯೆಂಬ ಪುತ್ರಿಕಾರತ್ನವೊಂದಿರ್ಪುದು. ನಮ್ಮೊಡೆಯನಾದ ರಾಜನು ಮೂವತ್ತು ಅಡಿಗಳ ಎತ್ತರವಾಗಿರುವ ಒಂದು ಸ್ತಂಭವನ್ನು ಮಾಡಿಸಿ, ಅವರ ಕೊನೆಯೊಳಗೆ ಒಂದು ಘಂಟೆಯನ್ನು ಕಟ್ಟಿಸಿ, ಯಾವ ಪುರುಷನು ಕುದುರೆಯನ್ನೇರಿ ಹೋಗುತ್ತಾ ಆ ಘಂಟೆಯನ್ನು ಹೊಡೆಯುವನೋ ಅವನಿಗೆ ತನ್ನ ಪುತ್ರಿಯನ್ನು ಕೊಟ್ಟು ವಿವಾಹ ಮಾಡುವೆನೆಂದು ಸ್ವಯಂವರ ಮಹೋತ್ಸವವನ್ನು ಪ್ರಸಿದ್ಧಪಡಿಸಿರುವನು. ಇದಕ್ಕಾಗಿ ಅನೇಕ ದೇಶದ ಅವನೀಂದ್ರರು ಒಂದು ಅದನ್ನು ನೋಡಿ ಆಶ್ಚರ್ಯಪಟ್ಟು ಮೂಗುಗಳ ಮೇಲೆ ಬೆರಳುಗಳನ್ನಿಟ್ಟುಕೊಂಡು, ಕಾರ್ಯವನ್ನು ನೆರವೇರಿಸಲಾರದೆ ವಿಮುಖರಾಗಿ ತಮ್ಮತಮ್ಮ ದೇಶಗಳಿಗೆ ತೆರಳಿದರು ಎಂಬದಾಗಿ ಹೇಳಲು, ವೀರಸೇನನು ತಾನಾ ಲತಾಂಗಿಯನ್ನು ಮದುವೆ ಮಾಡಿಕೊಂಡು ಸುಖವಾಗಿ ಸಿಂಹಳ ದ್ವೀಪಕ್ಕೆ ಹೋಗಬಹುದೆಂದು ಮನದಲ್ಲಿ ನಿಶ್ಚೈಸಿ, ಶೃಂಗಾರಭೂಷಣನಾಗಿ ಆ ಸ್ತಂಭದ ಬಳಿಗೆ ಹೋಗಿ ಅಲ್ಲಿ ನೆರೆದಿರುವ ರಾಜರನ್ನು ಕುರಿತು, ಎಲೈ ರಾಜೇಂದ್ರರೇ! ನಿಮ್ಮಗಳಿಂದ ಈ ಕಾರ್ಯವು ಸಾಧ್ಯವಾಗದೇ ಹೋಯಿತೇ? ನನ್ನ ಕುದುರೆಗೆ ಇದೆಷ್ಟುಮಾತ್ರವೆಂದು ನುಡಿದು ತೃಣೀಕರಿಸಿ, ತನ್ನ ಕುದುರೆಯನ್ನು ನಾಲ್ಕುದಿಕ್ಕುಗಳಿಗೂ ನಡೆಸಿ, ಸರಿಯಾಗಿ ನಿಲ್ಲಿಸಿಕೊಂಡು, ಆ ಸ್ತಂಭದ ಸಮೀಪಕ್ಕೆ ಹೋಗಿ, ಕುದುರೆಯನ್ನು ಮೂವತ್ತು ಅಡಿಗಳ ಹಿಂದಕ್ಕೆ ನಿಲ್ಲಿಸಿ, ಎಲೈ—ಪಂಚಕಲ್ಯಾಣಿಯೇ! ನನ್ನ ಪ್ರತಿಜ್ಞೆಯನ್ನು ನೆರವೇರಿಸೆಂದು ನುಡಿದು ಅತಿ ಶೀಘ್ರವಾಗಿ ಬರುತ್ತಾ ಕುದುರೆಯನ್ನು ಹಾರಿಸಿ ಆ ಘಂಟೆಯನ್ನು ತನ್ನ ಕೈಯಿಂದ ಅಲ್ಲಾಡಿಸಿ ಹೊಡೆದನು. ಅದನ್ನು ನೋಡಿದ ಮಂಡಲಾಧಿಪರೆಲ್ಲರೂ ಆಶ್ಚರ್ಯವುಳ್ಳವರಾಗಿ ರಾಜತನಯನನ್ನು ಬಹಳವಾಗಿ ಸ್ತುತಿಸಿದರು. ಬಳಿಕ ಚಿತ್ರಾಂಗದ ಮಹಾರಾಯನು ಆನಂದಪರವಶನಾಗಿ ಅಳಿಯನನ್ನಾಲಿಂಗನ ಮಾಡಿಕೊಂಡು ಅನೇಕ ವಿಧಗಳಿಂದಾತನನ್ನು ಸ್ತುತಿಸಿ ಆತನ ವೃತ್ತಾಂತವನ್ನೆಲ್ಲಾ ಕೇಳಿ ತಿಳಿದುಕೊಂಡು ತನ್ನ ಪುತ್ರಿಯನ್ನಾತಂಗಿತ್ತು ವಿವಾಹವನ್ನೆಸಗಿದನು.

ತರುವಾಯ ವೀರಸೇನನು ಅತ್ಯಂತ ಸೌಂದರ್ಯದಿಂದ ಪ್ರಕಾಶಿಸುತಲಿರುವ ಶುಕವೇಣಿಯೊಡನೆ ನಾನಾ ವಿಧಗಳಾದ ಸುಖಗಳನ್ನನುಭವಿಸುತ್ತಾ ನಿಜವನ್ನು ಹೇಳೋಣದರಲ್ಲಿ ಕಾರ್ಯಭಂಗವಾಗುವುದೆಂತಲೂ, ಅನೃತ ದೋಷಕ್ಕಿಂತಲೂ

ಬೇರೇ ದೋಷವಿಲ್ಲವೆಂತಲೂ, ಮನದೊಳು ಯೋಚಿಸಿ, ತನ್ನ ಪ್ರಯತ್ನಕ್ಕೆ ತಕ್ಕ ಯುಕ್ತಿಯನ್ನಾಲೋಚಿಸಿ, ತನ್ನ ಮಾವನ ಅಂತಃಪುರಕ್ಕೆ ಹೋಗಿ, ಅವನನ್ನು ಕುರಿತು, ಎಲೈ—ಮಾವನವರೇ! ನಾನು ಗುರು ಕಾರ್ಯಾರ್ಥವಾಗಿ ಸಿಂಹಳ ದ್ವೀಪಕ್ಕೆ ಹೋಗಿ ಅಲ್ಲಿ ಒಂದು ಮೂಲಿಕೆಯನ್ನು ತರಬೇಕಾಗಿರುವುದು. ಇದ ಕ್ಕಾಗಿ ನನ್ನ ಪ್ರಯಾಣಾನುಕೂಲವಾದ ನಾವೆಯನ್ನು ಸಿದ್ಧಮಾಡಿಕೊಡಬೇ ಕೆಂದು ಪ್ರಾರ್ಥಿಸಲು, ಆತನಿಗೆ ಎದೆಯೊಡೆದು ಭಯವನ್ನೈದಿ, ಎಲೈ ಪುಣ್ಯಾ ತ್ಮನೇ! ನಮ್ಮ ದೇಶವಲ್ಲಿ ಇಲ್ಲದೇ ಇರುವ ಮೂಲಿಕೆಯು ಎಲ್ಲಿಯೂ ಇಲ್ಲ ನೀನು ಕೋರಿದ ಮೂಲಿಕೆಯನ್ನು ನಾನು ತರಿಸಿಕೊಡುವೆನು. ನೀನಾಸಿಂಹಳ ದ್ವೀಪಕ್ಕೆ ಹೋಗಕೂಡದೆಂದು ಸಮ್ಮತಿಪಡಿಸುತ್ತಿರಲಾಗಿ, ರಾಜತನಯನಾ ಮಾತುಗಳಿಗೆ ಸಮ್ಮತಿಸದೆ, ಎಲೈ ಮಾವನವರೆ! ಆ ಮೂಲಿಕೆಯು ಗುರುವಿನ ಅಪ್ಪಣೆಯ ಪ್ರಕಾರ ಆ ಸ್ಥಳದಲ್ಲಿರುವುದಲ್ಲದೆ ಇತರ ಪ್ರದೇಶಗಳಲ್ಲಿಲ್ಲ. ಆದ ಕಾರಣದಿಂದ ನನ್ನನ್ನು ಅಟಂಕಪಡಿಸುವುದು ನ್ಯಾಯವಲ್ಲ. ನಾನು ಸುಳ್ಳನ್ನು ಹೇಳುವುದಿಲ್ಲವೆನಲಾಗಿ, ರಾಜನು ತನ್ನ ಮನಸ್ಸಿನಲ್ಲಿ ಹಂಸವೇಣಿಯ ವೃತ್ತಾಂತ ವನ್ನು ಈತನು ಕೇಳಿರುವನೋ ಇಲ್ಲವೋ ಒಂದುವೇಳೆ ನಾನು ಹೇಳಿದರೆ ಏನು ಅಪಾಯವು ಸಂಭವಿಸುವುದೋ ಎಂಬದಾಗಿ ಚಿಂತಿಸಿ, ಪ್ರತ್ಯುತ್ತರವೇನೂ ಕೊಡದೆ ತನ್ನ ಪುತ್ರಿಗೆ ಸಕಲ ವೃತ್ತಾಂತವನ್ನು ತಿಳುಹಿ ನಾನೇನು ಮಾಡತಕ್ಕ ದ್ದೆಂದು ಕೇಳಲಾಗಿ, ಶುಕವೇಣಿಯು ತಂದೆಯನ್ನು ಕುರಿತು, ಎಲೈ ಜನಕನೇ ಆ ರಾಜಪುತ್ರನ ಅಭೀಷ್ಟವನ್ನು ನಾವು ನಡೆಸದೇ ಹೋದರೆ ಏನು ಕೇಡುಂಟಾ ಗುವುದೋ ನನ್ನ ಅದೃಷ್ಟವು ಯಾವರೀತಿಯಾಗಿರುವುದೋ ಅವರಂತೆ ಪರಿಣಮಿ ಸುವುದಲ್ಲದೆ ಅನ್ಯಥಾ ಇಲ್ಲ. (ಪ್ರಾರಬ್ಧಮನುಭೋಕ್ತವ್ಯಂ ಕೃತಂ ಕರ್ಮಶುಭಾ ಶುಭಂ) ಎನ್ನುವ ರೀತಿಯಾಗಿ ನನ್ನ ಜನ್ಮಾಂತರ ಕರ್ಮಪರಿಪಾಕದಂತೆ ನಡೆ ಯುವ ಫಲ ಪರಿಣಾಮಕ್ಕೆ ಯಾರೂ ಹೊಣೆಯಲ್ಲ. ಆದುದರಿಂದ ಆತನ ಇಷ್ಟ ದಂತೆ ನಡೆಯಬೇಕೆನಲಾಗಿ ಆ ಪಾಂಡ್ಯಭೂಪಾಲಕನು ಸಮ್ಮತಿಪಟ್ಟು ಪುತ್ರಿ ಯನ್ನೂ, ಅಳಿಯನನ್ನೂ ರಾಮೇಶ್ವರದ ಪರ್ಯಂತರವೂ ಹಿಂದಿಟ್ಟುಕೊಂಡು ಹೋಗಿ ಅಲ್ಲಿ ನಾವೆಯನ್ನು ಸಿದ್ಧಮಾಡಿ, ನಾವಿಕರಿಗೆ ಶೀಘ್ರವಾಗಿರಬೇಕೆಂ ದಾಜ್ಞೆಯನ್ನಿತ್ತು ಭೋಜನ ಪದಾರ್ಥಗಳನ್ನೆಲ್ಲಾ ನಾವೆಯೊಳಿಡಿಸಿದನು. ವೀರ ಸೇನನು ಹೆಂಡತಿಗೆ ಬಹಳವಾಗಿ ನಂಬಿಕೆಯನ್ನಿತ್ತು ಸಮಾಧಾನಮಾಡಿ, ಮಾವ ನಿಗೆ ನಮಸ್ಕರಿಸಿ, ಆತನ ಅಪ್ಪಣೆಯನ್ನು ತಲೆಯೊಳಾಂತು ಹಡಗನ್ನೇರಿದನು. ಆಗ ನಾವಿಕರು ಕೇವಲ ಭಯವೂ, ಜಾಗ್ರತೆಯೂ ಉಳ್ಳವರಾಗಿ ಮೆಲ್ಲಮೆಲ್ಲಗೆ ಹಡಗನ್ನು ನಡೆಸಿಕೊಂಡು ಹೋಗುತ್ತಲಿದ್ದರು. ಈ ರೀತಿಯಾಗಿ ಹೋಗುತ್ತ ಲಿರಲು ಒಂದಾನೊಂದು ದಿವಸ ಮಾರ್ಗಮಧ್ಯದೊಳು ದೈವವಶದಿಂದ ಬಲ ವಾದ ಸುಂಟರಗಾಳಿಯು ಬರಲಾಗಿ ಹಡಗು ನಾವಿಕರ ಉಪಾಯಗಳಿಗೆ

ಆಸ್ಪದವಾಗದೆ ನೀರಿನ ಮಧ್ಯದೊಳು ಮಾರ್ಗತಪ್ಪಿ ಹೋಗುತಲಿರಲು, ಅದಕ್ಕೆ ನಾವಿಕರು ಭಯಪಟ್ಟು ತಮ್ಮ ಸಾಹಸಗಳೊಂದೂ ನಡೆಯದೆ ಹೋದದ್ದಕ್ಕೆ ಆರ್ಭಟವಾದ ರೋಧನವನ್ನು ಮಾಡಲಾರಂಭಿಸಿದರು. ಆ ರೋಧನ ಶಬ್ದವನ್ನೂ ಹಡಗು ಇಚ್ಛಾನುಸಾರ ದಾರಿತಪ್ಪಿ ಹೋಗುತ್ತಲಿರುವುದನ್ನೂ ರಾಜಪುತ್ರನು ಕೇಳಿ, ನೋಡಿ ಅಪಾಯವು ಸಂಭವಿಸಿತೆಂದು ಯೋಚಿಸಿ ಭಯವನ್ನು ಹೊಂದಿ, ಅಗಸ್ತ್ಯಮಹಾಋಷಿಯ ಕರುಣಾಕಟಾಕ್ಷದಿಂದ ತನಗೇನೂ ಅಪಾಯಸಂಭವಿಸಲಾರದೆಂದು ನಿಶ್ಚೈಸಿ ಬಳಿಕ ಧೈರ್ಯವನ್ನವಲಂಬಿಸಿ ಸದ್ಗುರುಸ್ವಾಮಿಯನ್ನು ಮನದೊಳು ಧ್ಯಾನಿಸುತಲಿದ್ದನು. ಅಷ್ಟರಲ್ಲಿ ನಾವೆಯು ಸುಂಟರಗಾಳಿಯಿಂದ ಬಹುದೂರವಾಗಿ ಹೋಗಿ ಕಡೆಗೆ ಸ್ತಂಭವು ಮುರಿದು ಚಿಕ್ಕೆಗಳೆಲ್ಲಾ ಒಡದು ನೀರು ತುಂಬಿಕೊಂಡು ಬುಡುಕ್ಕೆಂದು ಹಡಗು ನೀರಿನಲ್ಲಿ ಮುಳಗಿತು. ಅದರೊಳಿದ್ದ ಕೆಲವರು ನಾವಿಕರು ಬದುಕಿದರು. ಕೆಲವರು ಅಪಾಯದಿಂದ ಮರಣವನ್ನೈದಿದರು. ವೀರಸೇನನಿಗೆ ಅಗಸ್ತ್ಯಮಹರ್ಷಿಯ ಕಟಾಕ್ಷದಿಂದ ಒಂದು ಮರದತುಂಡು ಸಿಕ್ಕಲಾಗಿ ಅದನ್ನು ಹಿಡಿದುಕೊಂಡು ಎರಡನೆ ದಿವಸ ಪ್ರಾಣಸಹಿತನಾಗಿ ಒಂದಾನೊಂದು ತೀರವನ್ನು ಸೇರಿ ಕೈಕಾಲುಗಳನ್ನು ಸವರಿಕೊಂಡು ಮೆಲ್ಲಮೆಲ್ಲಗೆ ನಡೆಯುತ್ತಾ ಹೋಗಿ ಅಲ್ಲಿ ಒಂದು ಮರದ ಮೇಲೆ ಹತ್ತಿ ನಾಲ್ಕು ದಿಕ್ಕುಗಳಲ್ಲಿಯೂ ನೋಡುತ್ತಿರಲಾಗಿ ಅಲ್ಲಿಗೆ ಬಹುದೂರದೊಳೊಂದು ಪಟ್ಟಣವು ಕಾಣಬಂತು, ವೀರಸೇನನು ಆ ಪಟ್ಟಣಕ್ಕೆ ಹೋಗಿ ಪ್ರಾಣಗಳನ್ನು ರಕ್ಷಿಸಿಕೊಳ್ಳಬಹುದೆಂದು ಯೋಚಿಸಿ ಮೆಲ್ಲಗೆ ನಡೆದು ಹೋಗುತ್ತಾ ಅಲ್ಲಿರುವ ನೀಲದ ಕಲ್ಲುಗಳನ್ನೂ ಮಣ್ಣನ್ನೂ ನೋಡಿ ಓಹೋ ಇದು ನೀಲದ ತೀರ (ನೀಲದ್ವೀಪ) ವಾಗಿರುವುದು. ಈ ಪುರಿಯೊಳು ಮನುಷ್ಯರಿರುವರೋ ಇಲ್ಲವೇ ರಾಕ್ಷಸರಿರುವರೋ ಎಂದು ಯೋಚಿಸಿ ಹೋಗುತ್ತಾ ಇರಲು ಇನ್ನೂ ಸ್ವಲ್ಪ ದೂರದಲ್ಲಿ ಅರಿಸಿನದ ನೀರು ಹರಿಯುತ್ತಲಿರುವ ಕಾಲುವೆಯನ್ನು ನೋಡಿ ಅಕಟಾ! ದೈವವು ಈ ಅರಿಸಿನದ ನೀರಿನಲ್ಲಿ ನನ್ನನ್ನು ಇಳಿದು ಹೋಗುವಂತೆ ಮಾಡಿರುವುದು, ಅತಿ ಶೂರನಾಗಿಯೂ, ಧೀರನಾಗಿಯೂ, ರಾಜತನಯನಾಗಿಯೂ ಇರುವ ನಾನು ಹೆಂಗಸರು ಸ್ನಾನಮಾಡಿ ತನ್ಮೂಲಕ ಹರಿಯುತಲಿರುವ ಕಾಲುವೆಯಲ್ಲಿ ಇಳಿದು ಹೋಗುವದು ಅನುಚಿತವಲ್ಲವೇ ಎಂದು ಸ್ವಲ್ಪ ಹೊತ್ತು ಯೋಚಿಸಿ, ಬಳಿಕ ಧೈರ್ಯ ಸಾಹಸದಿಂದ ಕೋಪಾವೇಶಪರನಾಗಿ ಛೀ! ಇದು ಎಷ್ಟರಕಾರ್ಯವು ನದೀ ಕಾಲುವೆಯು ಲಕ್ಷ್ಯವೇ ಎಂದು ಹತ್ತು ಹೆಜ್ಜೆಗಳ ದೂರ ಹಿಂದಕ್ಕೆ ಹೋಗಿ ಓಡಿಬಂದು ಆ ಕಾಲುವೆಯನ್ನು ದಾಟಿದನು ತಕ್ಷಣದಲ್ಲಿಯೇ ಆ ಕಾಲುವೆಯ ಸಮೀಪದೊಳು ಕಾವಲಿದ್ದ ರಾಜದೂತರು ಕೆಲವರು ಬಂದು ಆ ರಾಜಪುತ್ರನಿಗೆ ನಮಸ್ಕರಿಸಿ, ಎಲೈ ಮಹಾನುಭಾವನೇ! ನೀವು ಯಾವ

ಲೋಕದಿಂದ ಬಂದಿರಿ ? ಇದು ನೀಲದ್ವೀಪ. ಅದಕ್ಕೆ ನೀಲಾಂಬರನೆಂಬ ದೊರೆಯು ಅಧಿಪತಿಯಾಗಿರುವನು. ನಮ್ಮ ರಾಜಪುತ್ರಿಯಾದ ನೀಲವೇಣಿಯು ನಿತ್ಯಸ್ನಾನವನ್ನು ಮಾಡಿ ಆ ಮೂಲಕದಿಂದ ಹರಿಯುತಲಿರುವ ಅರಿಶಿನದ ನೀರಿನ ಕಾಲುವೆಯು. ಈ ಕಾಲುವೆಯನ್ನು ಯಾವನು ದಾಟುವನೋ ಅವನಿಗೆ ತನ್ನ ಪುತ್ರಿಯನ್ನಿತ್ತು ವಿವಾಹ ಮಾಡುವದಾಗಿ ನಮ್ಮ ರಾಜೇಂದ್ರನು ಕಟ್ಟಳೆ ಮಾಡಿರುವನು. ಇದಕ್ಕಾಗಿ ಅನೇಕ ದೇಶದ ರಾಜಪುತ್ರರು ಬಂದು ಈ ಕಾಲುವೆಯನ್ನು ದಾಟಲಾರದೆ ವಿಮುಖರಾಗಿ ಹೋಗಿರುವರು. ನೀವೀ ಕಾಲುವೆಯನ್ನು ತೃಣೀಕಾರಭಾವದಿಂದ ದಾಟಿದಿರಿ. ಎಲೈ ಪುಣ್ಯಾತ್ಮನೇ ! ಪಟ್ಟಣದೊಳಕ್ಕೆ ದಯಮಾಡಬೇಕೆಂದಾ ವೀರಸೇನನನ್ನು ಪುರಿಯೊಳಕ್ಕೆ ಕರೆದುಕೊಂಡು ಹೋಗುತಲಿದ್ದರು.

ಈ ಅಂತರಾಳದಲ್ಲಿ ಕೆಲವು ಜನ ಭಟರು ಮುಂಚಿತವಾಗಿ ಹೋಗಿ ರಾಜೇಂದ್ರನಿಗೆ ಸಂಗತಿಯನ್ನು ಪೇಳಲಾಗಿ ಆತನು ಬಹಳವಾಗಿ ಸಂತೋಷಪಟ್ಟು ಮಂತ್ರಿಪ್ರಧಾನಿಗಳೇ ಮೊದಲಾದ ಸಾಮಾಜಿಕರು ಸಹಿತವಾಗಿ ರಾಜನಂದನನ ಎದುರಿಗೆ ಬಂದು ಆತನನ್ನಿದಿರ್ಗೊಂಡು ಆಲಿಂಗನ ಮಾಡಿ ಬಹಳವಾಗಿ ಆತನನ್ನು ಸ್ತುತಿಸಿ ಪಟ್ಟಣಕ್ಕೆ ಕರೆದುಕೊಂಡು ಬಂದು ಉಚಿತಾಸನದಲ್ಲಿ ಕುಳ್ಳಿರಿಸಿ ಅವನ ವರ್ತಮಾನವನ್ನೆಲ್ಲಾ ಕೇಳಿ ತಿಳಿದುಕೊಂಡು ಮಜ್ಜನ ಭೋಜನಾದಿಗಳನ್ನು ಮಾಡಿಸಿದರು. ಬಳಿಕಲಾ ರಾಜತನಯನು ತನ್ನ ಮನಸ್ಸಿನಲ್ಲಿ ಓಹೋ ಈ ಭೂಮಿಯೂ, ಇಲ್ಲಿನ ಮನುಷ್ಯರೂ ಮತ್ತು ರಾಜನೂ ನೀಲವರ್ಣವಾಗಿಯೇ ಇರುವದರಿಂದ ರಾಜಪುತ್ರಿಯೂ ಕೂಡ ನೀಲವರ್ಣವಾಗಿಯೇ ಇರುವಳೋ ಏನೋ ತಿಳಿಯದು. ಈ ಪೆಂಗಸಿನ ನಿಮಿತ್ತವಾಗಿಯೇ ದೈವತಂತ್ರದಿಂದ ಸುಂಟರುಗಾಳಿಯುಂಟಾಗಿ ಹಡಗಿನಿಂದ ಪ್ರಾಣವನ್ನು ತಪ್ಪಿಸಿಕೊಂಡು ತೀರಕ್ಕೆ ಜೀವಸಹಿತನಾಗಿ ನಾನು ಬಂದು ಇಲ್ಲಿ ಸೇರಿರುವುದಾಗಿ ಕಾಣಬರುವುದು. ಆಹಾ ನಾನೀಗ ಈ ರಾಜನ ಪುತ್ರಿಯನ್ನು ವಿವಾಹ ಮಾಡಿಕೊಳ್ಳುವದಿಲ್ಲವೆಂದರೆ ಈ ರಾಜನಿಂದ ಸಂಕಟವು ಪ್ರಯತ್ನಪೂರ್ವಕದಿಂದ ನಾನು ಬಂದಿರುವ ಕಾರ್ಯಕ್ಕೆ ಭಂಗವು ಉಂಟಾಗುವದರಲ್ಲಿ ಸಂಶಯವಿಲ್ಲ. ಇದಕ್ಕೇನು ತಂತ್ರವನ್ನು ಮಾಡಲೆಂದು ಮನದೊಳು ಚಿಂತಿಸುತ್ತಾ ಇರಲಾಗಿ ಆ ಪಟ್ಟಣದರಸನಾದ ನೀಲಾಂಬರ ರಾಯನು, ಈ ವೀರಸೇನನು ಸಿಂಹಳದ್ವೀಪಕ್ಕೆ ಹೋಗಲಿಳಸಿ ಬಂದಿರುವದನ್ನು ನೋಡಿದರೆ ಬಹುಶಃ ಪುಷ್ಪವೇಣಿಯ ನಿಮಿತ್ತವಾಗಿಯೇ ಇರಬಹುದೆಂದು ಸಂಶಯವುಳ್ಳವನಾಗಿ ಆತನನ್ನು ಕುರಿತು, ಎಲೈ ಮಹಾತ್ಮನೇ ! ನೀನು ಸಿಂಹಳದ್ವೀಪಕ್ಕೆ ಹೋಗಬೇಕಾದ ಅಗತ್ಯವಿಲ್ಲ ನಿನಗಪೇಕ್ಷೆಯಿರುವ ಮೂಲಿಕೆಯನ್ನು ನಾನಿಲ್ಲಿಯೇ ತರಿಸಿಕೊಡುವೆನು. ನೀನು ನನ್ನ ಪುತ್ರಿಯನ್ನು

ಸ್ವೀಕರಿಸಿ ವಿವಾಹ ಮಾಡಿಕೊಂಡು ಪುನಃ ಪಾಂಡ್ಯದೇಶಕ್ಕೆ ತೆರಳಬೇಕೆಂದು ನುಡಿಯಲಾಗಿ ವೀರಸೇನನು ನೀಲಾಂಬರನನ್ನು ಕುರಿತು ಎಲೈ ರಾಜಶ್ರೇಷ್ಠನೇ! ನಾನು ಗುರುವಿನ ಅಪ್ಪಣೆಯಂತೆ ಬಂದಿರುವೆನಲ್ಲದೆ ಆ ಮೂಲಿಕೆಯನ್ನು ಮತ್ತಾರಿಗೂ ಹೇಳತಕ್ಕದ್ದಲ್ಲ. ಮತ್ತಾರಿಂದಲಾದರೂ ಸಾಧಿಸತಕ್ಕದ್ದಾದರೆ ಅಂಥಾದ್ದನ್ನರಿತು ನಾನು ಬರುವುದಕ್ಕೆ ನಿಮಿತ್ತವೇನು? ನನ್ನ ಜನನೀಜನಕರಿಗೆ ನಾನೋರ್ವನೇ ಪುತ್ರನು, ಸಿಂಹಳದ್ವೀಪಕ್ಕೆ ಹೋಗಿ ನಾನಾ ಮೂಲಿಕೆಯನ್ನು ತಂದ ಬಳಿಕ ನನಗೆ ನಿಮ್ಮ ಪುತ್ರಿಯನ್ನಿತ್ತು ವಿವಾಹವನ್ನೆಸಗಬಹುದೆಂದು ನುಡಿದನು. ಅದಕ್ಕಾರಾಯನು ಏನೂ ತಿಳಿಯದವನಾಗಿ ತನ್ನ ಪುತ್ರಿಯ ಅಂತಃಪುರಕ್ಕೆ ಹೋಗಿ ನಡೆದ ವೃತ್ತಾಂತವೆಲ್ಲವನ್ನೂ ತಿಳುಹಲಾಗಿ ಆ ಕನ್ಯೆಯು ಇಂತೆಂದಳು. ಕೇಳು ತಂದೆಯೇ! ಲೋಕದಲ್ಲಿ ದೈವವಶದಿಂದ ಸಂಭವಿಸುವ ಕಾರ್ಯಗಳಿಗೆ ಯಾರು ತಾನೆ ಮಾಡತಕ್ಕದ್ದೇನು. ಅಂಥಾ ದೈವಯೋಗಗಳಿಗೆ ನಾವು ವ್ಯಸನಪಡುವುದರಿಂದ ಯಾವುದೊಂದು ಫಲವೂ ಇಲ್ಲ, ನನ್ನ ಅದೃಷ್ಟವಶದಿಂದ ಈ ಪುಣ್ಯಪುರುಷನು ಇಲ್ಲಿಗೆ ಬಂದು ಪ್ರಯತ್ನಿಸಿದ್ದ ಇಷ್ಟವನ್ನು ನೆರವೇರಿಸಿದಾಗ್ಯೂ ನನ್ನ ಅದೃಷ್ಟವಿಶೇಷಕ್ಕೆ ಯಾರು ತಾನೇ ಚಿಂತಿಸಿ ಫಲವೇನು? ಯಾವ ಕಾಲಕ್ಕೆ ಸುಖಾನುಭವವು ದೈವಕಟ್ಟಳೆಯಾಗಿರುವುದೋ ಆಗಲೇ ನಡಿಯುವುದಲ್ಲದೆ ಅನ್ಯಥಾ ಇಲ್ಲ. ಈಗಲೇ ವಿವಾಹವನ್ನೆಸಗುವುದುತ್ತಮವಾಗಿರುತ್ತದೆ ಸಾವಕಾಶವಾದರೆ ಅದರಿಂದ ಅನುಕೂಲಗಳು ಕಡಿಮೆಯಾಗಿರುವುದೆಂದು ಹೇಳಿದ ತನಯಳ ಮಾತುಗಳನ್ನು ಕೇಳಿದ ಪೃಥ್ವೀಶನು ಉಚಿತವೆಂದು ಸಮ್ಮತಿಸಿ ಪಟ್ಟಣವನ್ನೆಲ್ಲಾ ಶೃಂಗಾರ ಮಾಡಿಸಿ ಶುಭದಿವಸದಲ್ಲಿ ಅತಿ ವಿಜೃಂಭಣೆಯಿಂದ ವಿವಾಹಮಹೋತ್ಸವವನ್ನು ನಡೆಸಿದನು. ತರುವಾಯ ವೀರಸೇನ ಮಹಾರಾಯನು ಇಂದ್ರನೀಲಮಣಿಯಂತೆ ಶೋಭಾಯಮಾನಳಾಗಿರುವ ನೀಲವೇಣಿಯೊಡನೆ ಸುಖಾನುಭವದೊಳಿದ್ದನು.

ಇತ್ತಲಾ ಸಮುದ್ರ ಮಧ್ಯದೇಶದಲ್ಲಿ ಹಡಗನ್ನು ನಡೆಸುತ್ತಲಿದ್ದವರೊಳು ಜೀವಸಹಿತದಿಂದ ತಡಿಯನ್ನು ಸೇರಿದ್ದ ಒಬ್ಬಾನೊಬ್ಬ ನಾವಿಕನು ವಿಧಿವಶದಿಂದ ಪ್ರಾಣವನ್ನು ಕಾಪಾಡಿಕೊಂಡು ಬಹಳ ದಿವಸಗಳಿಗೆ ಪಾಂಡ್ಯದೇಶವನ್ನು ಸೇರಿ ಅಲ್ಲಿನ ಅವನಿಪಾಲಕನಿಗೆ ನಡೆದ ಸಮಾಚಾರವನ್ನು ತಿಳುಹಿದನು. ಆ ನರೇಂದ್ರನು ಕೇಳಿ ಮೂರ್ಛಾಕ್ರಾಂತನಾಗಿ ಭೂಮಿಯಮೇಲೆ ಬೀಳಲಾಗಿ ಅದನ್ನು ನೋಡಿದ ಮಂತ್ರಿಪ್ರಧಾನಿಗಳು ದುಃಖಿಸುತ್ತಾ ಆತನನ್ನ ಶೈತ್ಯೋಪಚಾರಗಳಿಂದ ಎಬ್ಬಿಸಿ, ಎಲೈ ರಾಜೋತ್ತಮನೇ! ನಿನ್ನ ಅಳಿಯನು ಒಂದಾನೊಂದು ತೀರವನ್ನು ಸೇರಿರುವನಲ್ಲದೆ ಅಂಥಾ ಮಹಿಮೆಯುಳ್ಳ ಪುರುಷನು ಎಷ್ಟುಮಾತ್ರವೂ ಪ್ರಾಣವಿಯೋಗವನ್ನೈದಲಾರನು ಸಾವಕಾಶದಿಂದ ನಾವಾತನಂ ಕರೆತರಿಸಬಹುದು

ದೈವಯತ್ನಕ್ಕೆ ನಾವು ಮಾಡತಕ್ಕದ್ದೇನು. ನಿನ್ನ ಪುತ್ರಿಯಾದ ಶುಕವೇಣಿಗೂ ಶಾಂತಮಾರ್ಗದಿಂದ ಸಮಾಧಾನ ಪಡಿಸಬೇಕೆಂದು ನುಡಿಯಲು ರಾಜೋತ್ತಮನು ತನ್ನ ಕುವರಿಯ ಅಂತಃಪುರಕ್ಕೆ ಹೋಗಿ ಆ ನಾರೀಮಣಿಗೆ ಸಕಲ ವೃತ್ತಾಂತವನ್ನು ತಿಳುಹಿ, ಎಲೈ ಪುತ್ರಿಕಾರತ್ನವೇ! ನೀನು ವ್ಯಸನಪಡಬೇಡ. ಯಾವಕಾರಣದಿಂದಲಾದರೂ, ಎಲ್ಲಿದ್ದರೂ ನಿನ್ನ ವಲ್ಲಭನನ್ನು ನಾನು ಕರೆತರಿಸಿ ನಿನ್ನ ವಶಮಾಡುವೆನೆಂದು ಉತ್ತಮವಾದ ಮಾತುಗಳಿಂದ ಆಕೆಯ ದುಃಖವನ್ನು ಸಮಾಧಾನಪಡಿಸಿ, ಸಮುದ್ರತೀರದೊಳು ಅನೇಕ ನಾವೆಗಳನ್ನೂ ಭಟರುಗಳನ್ನೂ ನಿಲ್ಲಿಸಿ, ಎಲೈ ಭಟರುಗಳಿರಾ! ಈ ಮಾರ್ಗವಾಗಿ ಹೋಗಿ ಬರುವ ವಿಶಿಷ್ಟ ನಾವೆಗಳನ್ನು ನೀವು ನಿಲ್ಲಿಸಿ ಶೋಧಿಸುತ್ತಾ ನಮ್ಮ ವೀರಸೇನನು ಎಲ್ಲಿದ್ದರೂ ಕರೆತನ್ನಿರೆಂದಾಜ್ಞಾಪಿಸಿ, ಬಹಳವಾದ ಸೈನ್ಯಗಳನ್ನು ಸಮುದ್ರತೀರದಲ್ಲಿ ನಿಲ್ಲಿಸಿದ್ದನು. ಶುಕವೇಣಿಯು ತನ್ನ ಗಂಡನ ಸಾಹಸ ಪರಾಕ್ರಮಗಳನ್ನೂ, ಆತನ ರೂಪು ಸೌಂದರ್ಯಗಳನ್ನೂ ನೆನೆನೆನೆದು ವಿಚಾರಪಡುತ್ತಾ ಧರ್ಮದೇವತೆಯನ್ನು ಧ್ಯಾನಿಸುತ್ತಾ, ವೀರಸೇನ ಮಹಾರಾಯನ ಪಾದಕಮಲಗಳಲ್ಲಿಯೇ ತನ್ನ ಮನವನ್ನಿರಿಸಿಡುತ್ತಲಿದ್ದಳು. ಅತ್ತಲಾ ನೀಲದ್ವೀಪದಲ್ಲಿ ವೀರಸೇನನು ನೀಲವೇಣಿಯನ್ನು ನೋಡಿ, ಎಲೈ ಪ್ರಾಣನಾಯಕಿಯೇ! ನಾನಿಲ್ಲಿ ಕಾಲವನ್ನು ಮಾಡುವದು ಧರ್ಮವಲ್ಲ. ನಾನು ಸಿಂಹಳದ್ವೀಪಕ್ಕೆ ಹೋಗಿ ಬರಬೇಕಾದುದರಿಂದ ಹಡಗನ್ನು ತಡಮಾಡದೆ ಸಿದ್ಧಪಡಿಸೆಂದು ನುಡಿಯಲು ಆಗಲಾ ನೀಲವೇಣಿಯು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ, ಗಂಡನ ಪಾದಗಳ ಮೇಲೆ ಬಿದ್ದು ಹೊರಳಾಡುತ್ತಾ, ಎಲೈ ಪ್ರಾಣನಾಥನೇ! ಅನೇಕ ಪುರಾತನ ರಾಜರೂ, ರಾಜಪುತ್ರರೂ, ಹಂಸವೇಣಿಯ ಮೇಲಣ ವ್ಯಾಮೋಹದಿಂದ ಅಲ್ಲಿಗೆ ಹೋಗಿ ಪ್ರಾಣಗಳನ್ನು ತೊರೆದುಕೊಂಡಿರುವರು. ನನ್ನ ತಂದೆಯ ಸಹೋದರರೂ, ತಾತನ ಸಹೋದರರರೂ, ಇನ್ನೂ ಅವರಿಗೆ ಪೂರ್ವಿಕರಾದವರೂ ಕೂಡ ಹಂಸವೇಣಿಯ ನಿಮಿತ್ತವಾಗಿ ಅಲ್ಲಿಗೆ ಹೋಗಿ ಮರಣವಾದರು. ಆದಕಾರಣದಿಂದ ಅಲ್ಲಿಗೆ ಖಂಡಿತವಾಗಿ ಹೋಗಕೂಡದೆಂದು ಹೇಳಲಾಗಿ ವೀರಸೇನನು, ಎಲೈ ಕಾಂತಾಮಣಿಯೇ! ನಾನು ಆ ಸ್ಥಳಕ್ಕೆ ಹೋಗುವದಿಲ್ಲವೆಂದು ಬಹಳವಾಗಿ ನಂಬಿಕೆಯನ್ನು ಹೇಳಿ ಸಮಾಧಾನಗೊಳಿಸಿ, ಭೋಜನ ಪದಾರ್ಥಗಳನ್ನು ಸಿದ್ಧಪಡಿಸಿಕೊಂಡು ಶೀಘ್ರವಾಗಿ ಹೋಗಿ ಹಡಗಿನಲ್ಲಿ ಕುಳಿತುಕೊಂಡನು. ನೀಲಾಂಬರ ಮಹಾರಾಯನು ತನ್ನ ಭಟರುಗಳಿಗೂ, ನಾವಿಕರಿಗೂ ತ್ವರೆಯಾಗಿಯೂ ಭದ್ರವಾಗಿಯೂ ಇರಬೇಕೆಂದಾಜ್ಞಾಪಿಸಿ ಆ ಹಡಗಿನ ಹಿಂದೆ ಕಾವಲಿಟ್ಟು ಕಳುಹಿಸಿದನು. ಆಗಲಾ ನಾವಿಕರು ಕೆಲವು ದಿವಸಗಳಿಗೆ ಸಿಂಹಳದ್ವೀಪವನ್ನು ಸೇರಿ ಆ ಸ್ಥಳದಲ್ಲಿ ಲಂಗರು ಹಾಕಿ ನಾವೆಯನ್ನು ನಿಲ್ಲಿಸಿದರು.

ವೀರಸೇನನು ಹಡಗಿನಿಂದಿಳಿದು ತೀರಕ್ಕೆ ಬಂದು ತನ್ನ ಭಟರನ್ನು ನೋಡಿ, ನಾನು ಈ ದ್ವೀಪದ ರಾಜಸಭೆಗೆ ಹೋಗುವೆನಾದುದರಿಂದ ನೀವು ಜೊತೆಯೊಳು ಬನ್ನಿರೆಂದು ಅವರನ್ನು ಹಿಂದಿಟ್ಟುಕೊಂಡು ರಾಜನ ಸಭೆಗೆ ಸಂಭ್ರಮದಿಂದ ಹೋದನು. ಸಿಂಹಳಾಧಿಪನು ಆತಂಗೆ ಮರ್ಯಾದೆಗಳನ್ನು ಮಾಡಿಸಿ ಉಚಿತವಾದ ಆಸನದಲ್ಲಿ ಕುಳ್ಳಿರಿಸಿ, ಆತನು ಬಂದಿರುವ ವರ್ತಮಾನವನ್ನೆಲ್ಲಾ ಕೇಳಿ, ಓಹೋ ಅಸಾಧ್ಯಪ್ರಕರಣವೆಂದು ಆತಂಗೆ ಹಂಸವೇಣಿಯ ವರ್ತಮಾನವನ್ನೆಲ್ಲಾ ಹೇಳಿ, ದೊಡ್ಡ ಘಂಟೆಯನ್ನು ಬಾರಿಸಿ ಕಾವಲುಗಾರರನ್ನು ಜೊತೆಮಾಡಿ, ರಾಜಪುತ್ರನನ್ನು ಹಂಸವೇಣಿಯ ಅಂತಃಪುರಕ್ಕೆ ಕಳುಹಿಸಿದನು. ವೀರಸೇನನ ಹಿಂದೆ ನೀಲದ್ವೀಪದಿಂದ ಬಂದಿದ್ದ ಭಟರು ಆ ಸುದ್ದಿಯನ್ನು ಕೇಳಿ, ತಕ್ಷಣದಲ್ಲಿಯೇ ಓಹೋ ಮೋಸವಾಯಿತಲ್ಲಾ ಎಂದು ವ್ಯಸನಪಡುತ್ತಲಿದ್ದರು. ಆ ಘಂಟಾನಾದವನ್ನು ಕೇಳಿದ ತಕ್ಷಣದಲ್ಲಿಯೇ ಹಂಸವೇಣಿಯು ತಾರಿಕಾವೇಣಿಯನ್ನು ಕರೆದುಕೊಂಡು ಸಂಕೇತಸ್ಥಾನಗಳಿಗೆ ಹೋಗಿ ಈರ್ವರೂ ರತ್ನಪೀಠದಮೇಲೆ ಕುಳಿತುಕೊಂಡರು. ಕಾವಲುಗಾರರು ಏಳು ಉಪ್ಪರಿಗೆಗಳ ಮೇಲೆಯೂ ತಮ್ಮ ಪಹರೆಗಳನ್ನು ಬದಲಾಯಿಸಿಕೊಂಡು ನವರತ್ನಖಚಿತವಾದ ಬಂಗಾರದ ಅಂತಃಪುರಕ್ಕೆ ಕರೆದುಕೊಂಡು ಹೋಗಿ ರತ್ನಸಿಂಹಾಸನದ ಮೇಲೆ ಆತನನ್ನು ಕುಳ್ಳಿರಿಸಿ ಘಂಟೆಯನ್ನು ಬಾರಿಸುತ್ತಾ ಚಾಮರಗಳಿಂದ ಆ ರಾಜನಂದನನನ್ನು ಬೀಸುತ್ತಾ ಇದ್ದರು. ಆ ರಾಜನಂದನನಿಗೂ ರಾಜಪುತ್ರಿಯರಿಗೂ ಒಂದು ಪರದೆಯು ಅಡ್ಡವಾಗಿ ಹಾಕಲ್ಪಟ್ಟು ಅವರುಗಳಿಗೆ ಸಾಗ್ವಾದಗಳು ನಡೆಯಲಾರಂಭವಾದವು.

## ಹಂಸವೇಣಿಗೂ ವೀರಸೇನನಿಗೂ ನಡೆದ ಪ್ರಶ್ನೋತ್ತರ.

ಹಂಸವೇಣಿಯ ಪ್ರಶ್ನೆ—ಗಂಗೆಯೂ, ಯಮುನೆಯೂ ಸರಸ್ವತಿಯೂ ಈ ಮೂರು ಸೇರಿದ ಸ್ಥಳದಲ್ಲಿ (ತ್ರಿವೇಣಿ ಸಂಗಮ) ಪ್ರಕಾಶಿಸುತ್ತಲಿರುವ ನೀಲೋತ್ಪಲದ ನೀರು ಏನು?

ವೀರಸೇನನ ಉತ್ತರ—ಆ ನೀರನ್ನು ತೇಜಸ್ಸೆಂಬದಾಗಿಯೂ, ಕಳಾ ಎಂಬದಾಗಿಯೂ, ಆಪೋ ಜ್ಯೋತಿಯೆಂತಲೂ, ತಿಳುವಳಿಕೆಯೆಂತಲೂ ಹೇಳುವರೆಂದು ಧೈರ್ಯದಿಂದುತ್ತರಕೊಟ್ಟನು.

ಹಂಸವೇಣಿಯ ಪ್ರಶ್ನೆ—ಇಂದ್ರಿಯಗಳೊಳಗೆ (ಯಾವ ಇಂದ್ರಿ) ಯಾವುದರಿಂದ ನಿರಂತರವೂ ಬಹ್ಮನನ್ನು ನೋಡಬಹುದು?

ವೀರಸೇನನ ಉತ್ತರ—ಅಹಹಾ! ಅಚಲ ಬ್ರಹ್ಮನನ್ನು ಎಂದಿಗೂ ಇಂದ್ರಿಯಗಳು ನೋಡಲಾರವು. ಹಗಲು ರಾತ್ರಿಗಳಲ್ಲಿ ಯಾವಾಗಲಾದರೂ ಅಚಲ ಪರಿಪೂರ್ಣ ಬ್ರಹ್ಮವನ್ನು ಆಪೋಜ್ಯೋತಿಗಳಿಂದ ನೋಡಬಹುದು.

ಹಂಸವೇಣಿಯ ಪ್ರಶ್ನೆ— ನೀನು ಯಾರು? ಬ್ರಹ್ಮನಾರು ? ನಿಮ್ಮಿಬ್ಬರಿಗೂ ಇರುವ ಭೇದವೇನು ?

ವೀರಸೇನನ ಉತ್ತರ—ನಾನೇ ಬಹ್ಮವು. ಬ್ರಹ್ಮವೂ ನಾನೇ ನಾನೋರ್ವನೇ ಭೇದರಹಿತನಾಗಿ ಹದಿನಾಲ್ಕು ಲೋಕಗಳಲ್ಲಿಯೂ ತುಂಬಿರುವೆನು. ಭ್ರಾಂತಿಯಿಂದ ಭೇದ ಉಂಟಾಗುವದು ಸತ್ಯ, ಆದರೆ ಉಪಾಧಿ ಭೇದ ದಿಂದ ಬೇರೆಬೇರೆಯಾಗಿ ತೋರುವ ಜೀವಬ್ರಹ್ಮರಿಗೆ ಸತ್ಯಜ್ಞಾನಾನಂದ ತ್ವವೇ ಭೇದವು.

ಮೇಲೆ ಹೇಳಿದ ಮೂರು ಪ್ರಶ್ನೆಗಳಿಗೂ ಸರಿಯಾದ ಉತ್ತರಗಳನ್ನು ಹೇಳಿ ದಕಾರಣ ಹಂಸವೇಣಿಯು ಆಶ್ಚರ್ಯಭರಿತಳಾಗಿ ತನ್ನ ಮೂಗಿನಮೇಲೆ ಬೆರಳನ್ನಿ ಟ್ಟುಕೊಂಡು ಆ ವೀರಸೇನನನ್ನು ಕುರಿತು, ಎಲೈ ಮಹಾತ್ಮನೆ! ನನ್ನನ್ನು ಜೈಸು ವುದಕ್ಕೋಸ್ಕರ ಯಾವ ಲೋಕದಿಂದ ನೀನು ಅವತರಿಸಿದ. ನೀನು ಮನುಷ್ಯ ಮಾತ್ರದವನಲ್ಲ. ದೇವಾಂಶಸಂಭೂತನಾಗಿ ಗುರುಕಟಾಕ್ಷಮಂ ಪಡೆದು ಬಂದಿ ರುವಿಯಲ್ಲದೆ ಮತ್ತೆ ಬೇರೇ ಇಲ್ಲವೆಂದು ಬಹಳವಾಗಿ ಆತನನ್ನು ಸ್ತುತಿಸಿ ಪರ ದೆಯನ್ನು ತೆಗೆದು ಶಾರಿಕಾವೇಣಿ ಸಹಿತವಾಗಿ ಆತನಿಗೆ ಪ್ರದಕ್ಷಿಣ ನಮಸ್ಕಾರಗ ಳನ್ನು ಮಾಡಿ, ಈರ್ವರೂ ಆ ಮಹಾತ್ಮನ ಕಂಠವಲ್ಲಿ ಪುಷ್ಪಹಾರಗಳನ್ನು ಹಾಕಿ ತಮ್ಮ ತಮ್ಮ ಅಂತಃಪುರಗಳಿಗೆ ತೆರಳಿದರು. ಆ ಹಂಸವೇಣಿಯ ದೇಹಕಾಂತಿ ಗಳು ವೀರಸೇನನ ನೇತ್ರಗಳಿಗೆ ಮಿಂಚಿನೋಪಾದಿಯಲ್ಲಿ ಥಳಿಕಿಸಲಾರಾಜಪು ತ್ರನು ಕಣ್ಣುಗಳನ್ನು ಮುಚ್ಚಿಕೊಂಡು ನಿಶ್ಚೇಷ್ಟಿತನಾದನು. ಅಲ್ಲಿದ್ದ ಹಂಸವೇ ಣಿಯರ ದೂತಿಯರು ನಾನಾವಿಧಗಳಾದ ವಾದ್ಯಗಳನ್ನು ಬಾರಿಸಿ ಆತನಿಗೆ ಶೈತ್ಯೋಪಚಾರಗಳನ್ನು ಮಾಡಿ, ಜಯಜಯವೆಂಬ ಕೋಲಾಹಲಧ್ವನಿಗೈಯುತ್ತ ಲಿದ್ದರು. ತರುವಾಯ ವೀರಸೇನನು ಮೆಲ್ಲಗೆ ಕಣ್ಣುಗಳನ್ನು ತೆಗೆದು ನಾಲ್ಕು ದಿಕ್ಕುಗಳನ್ನು ಈಕ್ಷಿಸಿ, ತನ್ನ ಕೊರಳಿನಲ್ಲಿದ್ದ ಪುಷ್ಪಹಾರಗಳನ್ನು ನೋಡಿಕೊಂಡು ಆಶ್ಚರ್ಯಭರಿತನಾಗಿ, ಅಹಹಾ! ಇದೇನಾಶ್ಚರ್ಯ ಹಂಸವೇಣಿಯು ಎಲ್ಲಿಹೋದಳು ? ನನ್ನ ಕೊರಳಿನಲ್ಲಿ ಪುಷ್ಪಹಾರವನ್ನು ಯಾರು ಹಾಕಿದರು? ಎಂದು ದೂತಿಯ ರನ್ನು ಕೇಳಲಾಗಿ, ಅವರು ರಾಜೋತ್ತಮನೇ ! ಹಂಸವೇಣಿಯೂ ಶಾರಿಕಾವೇ ಣಿಯೂ ಇವರೀರ್ವರೂ ನಿನಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಪುಷ್ಪಹಾ ರಗಳನ್ನು ಹಾಕಿ, ತಮ್ಮ ಅಂತಃಪುರಗಳಿಗೆ ಹೋದರು. ನೀನು ರಾಜನ ಒಡ್ಡೋಲಗಕ್ಕೆ ಬರಬೇಕೆಂದು ಆತನನ್ನು ತಮ್ಮ ಹಿಂದೆ ಕರೆದುಕೊಂಡು ರಾಜನ ಸಭೆಗೆ ಬಂದು ಆತನಿಗೆ ನಡೆದ ವೃತ್ತಾಂತವನ್ನು ತಿಳುಹಿಸಿ, ವೀರಸೇನನನ್ನು ಅಲ್ಲಿ ಬಿಟ್ಟರು. ಸಿಂಹಳೇಶ್ವರನು ಆ ವೀರಸೇನನನ್ನು ಆಲಿಂಗನ ಮಾಡಿಕೊಂಡು, ಎಲೈ ಮಹಾತ್ಮನೇ! ನಮ್ಮ ವಂಶವನ್ನು ಉದ್ಧಾರಮಾಡುವುದಕ್ಕಾಗಿ ನೀನು ಈ

ಭೂಲೋಕದಲ್ಲಿ ಅವತರಿಸಿದ ಪುಣ್ಯಪುರುಷನೆಂದು ಬಹುಪ್ರಕಾರವಾಗಿ ಆತನನ್ನು ಸ್ತುತಿಗೈದು ಜಯಭೇರಿಗಳ ನಿನಾದವನ್ನು ಮಾಡಿಸಿ, ಮಂಗಳವಾದ್ಯಗಳನ್ನು ಭೋರ್ಗೋಳಿಸಿ, ಶುಭಮುಹೂರ್ತದಲ್ಲಿ ಹಂಸವೇಣಿಗೂ, ಶಾರಿಕಾವೇಣಿಗೂ, ವೀರಸೇನ ಮಹಾರಾಜನಿಗೂ, ಮಂಗಳಸ್ನಾನಗಳನ್ನು ಮಾಡಿಸಿ, ವಿವಾಹಮಹೋತ್ಸವವನ್ನು ಅತಿವಿಜೃಂಭಣೆಯಿಂದ ಮಾಡಿದವನಾಗಿ ಅಳಿಯನನ್ನು ಅನೇಕವಾದ ಸುವರ್ಣರತ್ನಗಳಿಂದ ಪೂಜೆಯನ್ನು ಮಾಡಿದನು. ವೀರಸೇನನ ಹಿಂದೆ ಬಂದಿದ್ದ ಭಟರು ತ್ವರಯಾಗಿ ನಾವಿಕರಬಳಿಗೆ ಹೋಗಿ ಸಕಲ ವೃತ್ತಾಂತವನ್ನೂ ತಿಳಿಸಲಾಗಿ ಅವರುಗಳೆಲ್ಲರೂ ಪರಮಾನಂದಭರಿತರಾಗುತ್ತಿದ್ದರು.

ಐದನೆಯ ದಿನದ ರಾತ್ರಿ ಅಂತಃಪುರದಲ್ಲಿ ಹಂಸವೇಣಿಯು ಭರ್ತನಿಗೆ ನಮಸ್ಕಾರವನ್ನು ಮಾಡಿ, ಎಲೈ ಪ್ರಾಣೇಂದ್ರನೇ! ನಿನಗೆ ಗುರುವು ಯಾರೆಂದು ಪ್ರಶ್ನೆಮಾಡಲಾತನು, ಕುಂಭಸಂಭವನಾದ ಆಗಸ್ತ್ಯ ಮಹಾಮುನಿಯೆಂದುಸುರಲಾಗಿ, ಆ ಪೂರ್ಣೇಂದುಮುಖಿಯು ಆಶ್ಚರ್ಯಪರವಶಳಾಗಿ ನನಗೂ ಆತನೇ ಗುರುವೆಂದು ನುಡಿದು ಆ ಮಹಾತ್ಮನನ್ನು ಸ್ತುತಿಸಿ, ಗಂಡನನ್ನು ಸ್ತುತಿಗೈದು ತಾನೂ ಶಾರಿಕಾವೇಣಿಯೂ ಈರ್ವರೂ ಸುಖ ಸಂತೋಷಗಳನ್ನನುಭವಿಸುತಲಿದ್ದರು. ಅತ್ತಲಾ ನೀಲವೇಣಿಯು, ತನ್ನ ಗಂಡನು ಮೂರು ತಿಂಗಳಾದರೂ ಬಾರದೇ ಇರುವುದನ್ನು ಕುರಿತು ಭಯಪಟ್ಟವಳಾಗಿ, ನಾನಾಪ್ರಕಾರದಿಂಯೋಚಿಸುತ್ತಾ ದುಃಖಿಸುತ್ತಲಿದ್ದಳು. ಶುಕವೇಣಿಯೂ ಕೂಡ ನಿದ್ರಾಹಾರಗಳಿಲ್ಲದವಳಾಗಿ ನಿರಂತರದಲ್ಲಿಯೂ ಆ ವೀರಸೇನನಲ್ಲಿಯೇ ಮನವಿಟ್ಟುಕೊಂಡು ಕಾಲವನ್ನು ಕಳೆಯುತಲಿದ್ದಳು. ಆ ವೀರಸೇನನು ಆರುತಿಂಗಳವರೆಗೂ ಇಂದ್ರಕುಬೇರರಿಗಿಂತಲೂ ಅಧಿಕವಾದ ಸುಖಗಳನ್ನು ಅನುಭವಿಸುತ್ತಾ ಆ ಸಿಂಹಳಾಧಿಪನಿಗೆ ಶುಕವೇಣಿ ನೀಲವೇಣಿ ಇವರುಗಳ ವೃತ್ತಾಂತವನ್ನು ತಿಳಿಸಿ, ತಾನು ಪ್ರಯಾಣ ಮಾಡಬೇಕೆಂದು ಹೇಳಲಾಗಿ, ರಾಜನು ಕೇವಲ ವ್ಯಸನಾಕ್ರಾಂತನಾಗಿ, ಎಲೈ ಮಹಾತ್ಮನೇ! ನಿನ್ನನ್ನು ನೋಡದೆ ಇರುವ ದಿನವು ನನಗೊಂದು ಯುಗವಾಗಿ ಪರಿಣಮಿಸುವುದೆಂದು ನುಡಿದು, ಅಳಿಯನ ಅಭಿಪ್ರಾಯದಂತೆ ಶುಭಮುಹೂರ್ತದಲ್ಲಿ ಪ್ರಯಾಣವನ್ನು ನಿಶ್ಚೈಸಿ, ಹಂಸವೇಣಿ ಶಾರಿಕಾವೇಣಿಗಳಿಗೆ ವಿವಿಧ ವಸ್ತ್ರಾಭರಣಗಳನ್ನೂ, ಬೆಳ್ಳಿ ಭಂಗಾರದ ಒಡವೆಗಳನ್ನೂ, ಅಪರಂಜಿಯ ಬೊಂಬೆಗಳನ್ನೂ, ಅತ್ತರು ಪೆಟ್ಟಿಗೆಗಳನ್ನೂ, ಅನೇಕಜನ ದಾಸಿಯರನ್ನು ಕೊಟ್ಟು ಅಳಿಯನಿಗೆ ರತ್ನಾಭರಣಗಳನ್ನೂ, ವಸ್ತ್ರಗಳನ್ನೂ, ಅನೇಕ ಚತುರಂಗಬಲವನ್ನೂ, ಕೊಟ್ಟು ವಿವಿಧವಾದ ಭೋಜನವಸ್ತುಗಳನ್ನೂ ಒಂದು ನಾವೆಯಲ್ಲಿಡಿಸಿ, ಇನ್ನೊಂದು ನಾವೆಯಲ್ಲಿ ವೀರಸೇನನನ್ನೂ, ಹಂಸವೇಣಿ ಶಾರಿಕಾವೇಣಿಯನ್ನೂ, ಮುಖ್ಯವಾದ ದಾಸಿಯರನ್ನೂ, ಶೂರಭಟರನ್ನೂ ಕುಳ್ಳಿರಿಸಿ, ಉಳಿದ ಚತುರಂಗ

ಬಲವನ್ನೂ ನಾನಾವಿಧವಾದ ವಸ್ತುವಾಹನಗಳನ್ನೂ ಮೂರು ಹಡಗುಗಳಲ್ಲಿ ಭರ್ತಿಮಾಡಿ, ನೀಲದ್ವೀಪದಕಡೆಗೆ ಪ್ರಯಾಣಮಾಡಿ ಕಳುಹಿಸಿದನು ಆ ಐದು ನಾವೆಗಳೂ ಮಾರ್ಗದೊಳು ಯಾವುದೊಂದು ಅಪಾಯವೂ ಹೊಂದದೆ, ನೀಲ ದ್ವೀಪದ ತೀರದಲ್ಲಿ ಬಂದು ನಿಲ್ಲಲಾಗಿ, ಅದನ್ನು ಅರಿತ ನೀಲಾಂಬರರಾಯನು ಅಚ್ಚರಿಯನಡರ್ದು, ಅತಿತೀವ್ರದಿಂದ ತೀರದ ಬಳಿಗೆ ಹೋಗಿ ಬಿಡಾರಗಳನ್ನು ಮಾಡಿಸಿ, ಎಲ್ಲರನ್ನೂ ಇಳಿಸಿ, ಅಳಿಯನಾದ ವೀರಸೇನನನ್ನು ಆಲಿಂಗನಮಾಡಿ ಕೊಂಡು, ಎಲೈ ಮಹಾಪುರುಷನೇ! ನೀನು ಉದ್ದೇಶಮಾಡಿಕೊಂಡು ಹೋದ ಮೂಲಿಕೆಯು ಲಭಿಸಿತೇ ಎಂದು ಕೇಳಲಾಗಿ, ಆ ಮಾತಿಗೆ ರಾಜಪುತ್ರನು ನಕ್ಕು ನಿಮ್ಮ ದಯೆಯಿಂದಲೂ ಆಶೀರ್ವಚನಗಳಿಂದಲೂ ಒಂದು ಮೂಲಿಕೆಯ ಜೊತೆಗೆ ಮತ್ತೊಂದು ಮೂಲಿಕೆಯನ್ನೂ ತಂದೆನೆಂದು ಹೇಳಿ ತಾನು ಹಂಸವೇಣಿಯನ್ನು ಜೈಸಿ, ಶಾರಿಕಾವೇಣಿಯೊಡನೆ ವಿವಾಹ ಮಾಡಿಕೊಂಡು ಬಂದ ಸಕಲ ವೃತ್ತಾಂತವನ್ನೂ ತಿಳುಹಲಾಗಿ, ನೀಲಾಂಬರನು ಸಂತೋಷಭರಿತನಾಗಿ, ತನ್ನ ಮೂಗಿನ ಮೇಲೆ ಬೆರಳನ್ನಿಟ್ಟುಕೊಂಡು, ಅಳಿಯನನ್ನು ನಾನಾವಿಧವಾಗಿ ಸ್ತುತಿಸಿ, ಎಲೈ ಪುಣ್ಯಾತ್ಮನೇ! ನಿನ್ನ ಚರಿತ್ರವು ಸಕಲ ಪಾಪನಾಶಕರಮಾಗಿರ್ಪುದೆಂದು ಪಟ್ಟಣ ದೊಳಕ್ಕೆ ಕರೆದುಕೊಂಡುಹೋಗಿ, ನೀಲವೇಣಿಗೆ ವಿವರವಾಗಿ ವೃತ್ತಾಂತವನ್ನೆಲ್ಲಾ ತಿಳುಹಿದನು. ಆಗಲಾ ನೀಲವೇಣಿಯು ಗಂಡನ ಪಾದಕಮಲಗಳಿಗೆರಗಿ, ಆತನಿಂದ ಸಕಲ ವೃತ್ತಾಂತವನ್ನು ತಿಳಿದು, ಆಶ್ಚರ್ಯಾನಂದವನ್ನು ಹೊಂದಿ, ಬಹುಪ್ರಕಾರ ವಾಗಿ ಸ್ತುತಿಸಿ, ಗಂಡನ ಅಪ್ಪಣೆಯಂತೆ ಪುಣ್ಯಪುರುಷಳಾದ ಹಂಸವೇಣಿಗೆ ನಮ ಸ್ಕರಿಸಿ, ನಾನಾವಿಧಗಳಿಂದವಳನ್ನು ಸ್ತುತಿಸಿ, ಸರ್ವರೂ ಸುಖಾನಂದವನ್ನು ಹೊಂದುತ್ತಾ, ಹದಿನೈದು ದಿವಸಗಳವರೆಗೂ ಅಲ್ಲಿಯೇ ಇದ್ದರು ತರುವಾಯ ನೀಲಾಂಬರ ರಾಜನು ಅಳಿಯನ ಇಷ್ಟಪ್ರಕಾರ ಪ್ರಯಾಣವನ್ನು ಸಿದ್ಧಮಾಡಿ, ಹಂಸವೇಣಿ, ಶಾರಿಕಾವೇಣಿ, ನೀಲವೇಣಿ ಇವರುಗಳಿಗೆ ಬೇರೆಬೇರೆಯಾಗಿ ವಸ್ತ್ರಾ ಭರಣಗಳನ್ನು ಕೊಟ್ಟು, ನೀಲಮಣಿಗಳಿಂದ ಅಳಿಯನನ್ನು ಪೂಜಿಸಿ, ನಾನಾವಿಧ ವಾದ ವಸ್ತುಗಳನ್ನೂ, ಚತುರಂಗಬಲವನ್ನೂ, ಎರಡುಕಡೆಗಳಲ್ಲಿ ತುಂಬಿಸಿ ಉಳಿ ದವರಿಗೆಲ್ಲಾ ಬೇರೆಯಾಗಿ ನಾವೆಯನ್ನು ಮಾಡಿಕೊಟ್ಟು, ಸಿಂಹಳದ್ವೀಪದ ಹಡ ಗುಗಳೊಡನೆ, ಪಾಂಡ್ಯದೇಶಕ್ಕೆ ಕಳುಹಿಸಿಕೊಟ್ಟನು. ವೀರಸೇನಮಹಾರಾಯನು ಹೆಂಡತಿಯರೊಡನೆ ಸಂತೋಷವಾಗಿ ಬರುತ್ತಾ ಇದ್ದನು. ಪಾಂಡ್ಯದೇಶಾಧಿ ಪನು ಸಮುದ್ರತೀರದಲ್ಲಿ ಕಾವಲಿಟ್ಟಿದ್ದ ನಾವಿಕರು ಬರುತ್ತಲಿರುವ ಹಡಗುಗಳನ್ನು ನೋಡಿ, ಓಹೋ ನಾವಿಕರಿರಾ! ನಿಮ್ಮ ನಾವೆಗಳನ್ನು ನಾವು ಶೋಧನೆ ಮಾಡ ಬೇಕಾಗಿರುವುದು, ಆರೀತಿ ಶೋಧನೆಮಾಡುವವರೆಗೂ ನೀವು ಮುಂದಕ್ಕೆ ಹೋಗ ಕೂಡದೆಂದು ನುಡಿದು ಅವುಗಳನ್ನು ತಡೆದರು. ಆ ನಾವಿಕರು ಭಯಪಟ್ಟು

ಅಹಹಾ ಇವುಗಳನ್ನು ಯಾರೂ ತಡೆಯಕೂಡದು. ಇವು ವೀರಸೇನ ಮಹಾರಾ ಯನ ನಾವೆಗಳು. ಪಾಂಡ್ಯದೇಶದ ತೀರದಲ್ಲಿ ಇಳಿಯುವುದಕ್ಕೆ ಬಂದಿರುವುದೇ ಲಾಗಿ, ಆ ಕಾವಲುಗಾರರಿಗೆ ಸಂಶಯವುಂಟಾಗಿ, ನಾವಾತನನ್ನು ನೋಡುವಪ ರ್ಯಂತರವೂ ಒಪ್ಪುವದಿಲ್ಲವೆಂದು ಹೇಳುತ್ತಾ ಇರಲು, ವೀರಸೇನನು ನಾವೆಯಿಂದ ಮೇಲಕ್ಕೆ ಬಂದು ಅವರಿಗೆ ತನ್ನ ವರ್ತಮಾನವನ್ನೆಲ್ಲಾ ಹೇಳಲು, ಆ ನಾವಿಕರು ಆ ಮಹಾನುಭಾವನಿಗೆ ನಮಸ್ಕರಿಸಿ, ಎಲೈ ದಿವ್ಯಪುರುಷನೇ! ನಿನ್ನ ದರ್ಶನ ದಿಂದ ನಾವು ಕೃತಾರ್ಥರಾದೆವು ಎಂಬದಾಗಿ ಬಹಳಪ್ರಕಾರವಾಗಿ ಆತನನ್ನು ಸ್ತುತಿಸಿ, ಹಡಗುಗಳನ್ನು ತೀರಕ್ಕೆ ಸಾಗಿಸಿಕೊಂಡು ಬಂದು ಲಂಗರು ಹಾಕಿ ಎಲ್ಲವನ್ನು ನಿಲ್ಲಿಸಿ, ತಮ್ಮ ರಾಜನಿಗೆ ಸಮಾಚಾರವನ್ನು ಹೇಳಿಕಳುಹಿಸಿದರು ಆಗಲಾ ಪಾಂಡ್ಯಭೂಪತಿಯು ಅಹಹಾ! ಆಶ್ಚರ್ಯವನ್ನೆಂತು ವರ್ಣಿಸಲಿ. ಇಂದಿಗ ಅಪಾರವಾದ ಆನಂದವುಂಟಾಯಿತೆಂದು ಸಂಭ್ರಮದಿಂದ ತೀರದಲ್ಲಿ ಶಿಬಿರಗ ಳನ್ನು (ಬಿಡಾರ) ಮಾಡಿಸಿ, ಸಕಲರನ್ನು ತೀರಕ್ಕೆ ಕರೆತರಿಸಿ, ಅಳಿಯನನ್ನು ಆಲಿಂಗನ ಮಾಡಿಕೊಂಡು, ಆನಂದಭಾಷ್ಪಗಳನ್ನು ಸುರಿಸುತ್ತಾ ಅನೇಕವಿಧಗಳಿ ಸ್ತುತಿಸಿ, ಎಲೈ ಮಹಾತ್ಮನೇ ! ನೀನು ಇಲ್ಲಿಂದ ತೆರಳಿದಾರಭ್ಯ ಇಂದಿನವರೆಗೂ ನಡೆದ ವೃತ್ತಾಂತವನ್ನು ಕ್ರಮವಾಗಿ ಹೇಳಬೇಕೆಂದು ಕೇಳಲಾಗಿ, ವೀರಸೇನನು ಸಕಲ ವೃತ್ತಾಂತವನ್ನು ತಿಳುಹಿ, ನೀಲವೇಣಿ, ಹಂಸವೇಣಿ, ಶಾರಿಕಾವೇಣಿ ಇವ ರುಗಳನ್ನೆಲ್ಲಾ ತೋರಿಸಿದವನಾದನು. ಪಾಂಡ್ಯಭೂಪಾಲನು ಮಹದಾಶ್ಚರ್ಯ ವನ್ನು ಹೊಂದಿ, ಮೂಗಿನಮೇಲೆ ಬೆರಳನ್ನಿಟ್ಟುಕೊಂಡು, ಓ ಪುಣ್ಯಾತ್ಮನೇ ನೀನು ಶ್ರೀಮನ್ನಾರಾಯಣಮೂರ್ತಿಯ ಅಂಶದಿಂದ ಈ ಲೋಕದಲ್ಲಿ ಮಾನವನಾಗಿ ಜನಿಸಿರುವಿಯಲ್ಲದೆ, ಮಾನುಷ ಮಾತ್ರದವನಲ್ಲ. ನಿನ್ನಿಂದ ನನ್ನ ವಂಶವು ಪಾವನವಾಗಿ ನಾನು ಧನ್ಯನಾದೆನೆಂದು ಅನೇಕಪ್ರಕಾರವಾಗಿ ಆತ ನನ್ನು ಸ್ತುತಿಸಿ, ಆ ಹಂಸವೇಣಿ ಮೊದಲಾದವರನ್ನು ಸಂತೈಸಿ, ನಾವಿಕರಿಗೆ ಬಹ ಳವಾಗಿ ಮರ್ಯಾದೆಗಳನ್ನು ಮಾಡಿ, ಬಹುಮತಿಗಳನ್ನಿತ್ತು, ಸಂತೋಷ ಪತ್ರಿಕೆ ಳೊಡನೆ ಅವರವರ ದ್ವೀಪಗಳಿಗೆ ಕಳುಹಿಸಿದನು. ಆಗಲಾ ಶುಕವೇಣಿಯು ಅತ್ಯಂತ ಭಯಭಕ್ತಿಯಿಂದ ಗಂಡನಿಗೆ ನಮಸ್ಕರಿಸಿ, ಆನಂದಭಾಷ್ಪಗಳಿಂದಾತನ ಅಡಿದಾವರೆಗಳನ್ನು ತೊಳೆಯಲಾಗಿ, ಆತನು ಸಂತೈಸಿದವನಾಗಿ ಆ ಇಂದುವದ ನೆಗೆ ಸಕಲ ವಿಷಯವನ್ನು ತಿಳುಹಿ, ನೀನು ಎರಡನೆಯ ಹೆಂಡತಿಯೆಂದು ನುಡಿ ಯಲಾಗಿ, ಶುಕವೇಣಿಯು ಗಂಡನ ಅಪ್ಪಣೆಯ ಪ್ರಕಾರ ಹಂಸವೇಣಿಯನು ಸ್ತುತಿಸಿ, ಆಕೆಗೆ ನಮಸ್ಕರಿಸಿ, ತನಗೆ ನಮಿಸಿದ ನೀಲವೇಣಿ ಶಾರಿಕಾವೇಣಿ ಇವರುಗಳನ್ನು ಸಂತೈಸಿ, ಆಲಿಂಗನಮಂ ಮಾಡಿಕೊಂಡು ಆನಂದಿಸಿದಳು

ಬಳಿಕಲಾ ವೀರಸೇನ ಮಹಾರಾಯನು ನಾಲ್ಕುಜನ ಹೆಂಡತಿಯರೊಡನೆ ಸುಖಗಳನ್ನನುಭವಿಸುತ್ತಾ ಮೂರು ತಿಂಗಳುಗಳು ಅಲ್ಲಿಯೇ ಇದ್ದು, ಬಳಿಕ ಪ್ರಯಾಣಸನ್ನದ್ಧನಾಗಿ ಮಾವನವರು ಕೊಟ್ಟ ವಸ್ತ್ರಾಭರಣಗಳನ್ನೂ, ಸುವರ್ಣ ರತ್ನಗಳನ್ನೂ, ಚತುರಂಗಬಲವನ್ನೂ, ನಾನಾವಿಧವಾದ ವಸ್ತುಗಳನ್ನೂ ತೆಗೆದು ಕೊಂಡು ನವರತ್ನಖಚಿತಗಳಾದ ಪಾಲಕಿಗಳಲ್ಲಿ ನಾಲ್ವರು ಭಾರ್ಯೆಯರನ್ನು ಕುಳ್ಳಿರಿಸಿಕೊಂಡು ಬರುತ್ತಾ ಮಾರ್ಗದಲ್ಲಿ ಮಜಲಿನ ಪ್ರಕಾರವಾಗಿ ಅಲ್ಲಲ್ಲಿ ಕಾಲಕಾಲಕ್ಕಿಳಿದು ಮಜ್ಜನ ಭೋಜನಾದಿಗಳನ್ನು ಮಾಡಿಕೊಂಡು, ಕೆಲವು ದಿವಸಗಳಿಗೆ ಅಗಸ್ತ್ಯಮಹಾಮುನಿಯ ಆಶ್ರಮವನ್ನು ಸೇರಿ, ಅಲ್ಲಿ ಬಿಡಾರ ಗಳನ್ನು ಮಾಡಿಸಿಕೊಂಡು, ಸಕಲ ಚತುರಂಗಬಲವನ್ನು ಇಳಿಸಿ, ವೀರಸೇನನು ನಾಲ್ವರು ಹೆಂಡತಿಯರೊಡನೆ ಆ ಮುನಿಪೋತ್ತಮನ ಪಾದಕಮಲಗಳಿಗೆರಗಲು, ಆ ಮುನೀಂದ್ರನು ಸಂತೈಸಿ ಹಂಸವೇಣಿಯನ್ನು ನೋಡಿ, ಎಲೈ ಕಮಲಾಕ್ಷಿಯೇ! ಈ ಲೋಪಾಮುದ್ರೆಯ ಕಟಾಕ್ಷದಿಂದ ನಿನಗೆ ವೈವಾಹವೂ, ಸುಖಾನಂದವೂ ಸಂಭವಿಸಿತು. ಮಹಾತ್ಮನಾಗಿಯೂ, ದೇವಾಂಶಸಂಭೂತನಾಗಿಯೂ, ಪುಣ್ಯ ಪುರುಷನಾಗಿಯೂ ಇರುವ ಈ ನಿನ್ನ ಪತಿಯನ್ನು ಪೂಜಿಸುತ್ತಾ ಅನೇಕ ದಿವಸ ಗಳು ಈ ಮಹೀಮಂಡಲ ಸುಖಸಾಮ್ರಾಜ್ಯಗಳನ್ನನುಭವಿಸಿ, ಬಳಿಕ ಗಂಡನೊ ಡನೆ ಸಹಗಮನವನ್ನು ಮಾಡಿ, ಪರಲೋಕದಲ್ಲಿ ಶಾಶ್ವತವಾದ ಸುಖಾನುಭವ ವನ್ನು ಹೊಂದುವವಳಾಗೆಂದು ಸಂತೈಸಿ, ಆ ವೀರಸೇನನಿಂದ ಶುಕವೇಣಿಯ ವೃತ್ತಾಂತವನ್ನೂ, ಬಿರುಗಾಳಿಯಿಂದುಂಟಾದ ಬಾಧೆಗಳನ್ನೂ, ನೀಲವೇಣಿಯ ವಿಚಾರವನ್ನೂ, ಹಂಸವೇಣಿಯೊಡನೆ ನಡೆದ ಪ್ರಶ್ನೋತ್ತರಗಳನ್ನೂ ಕೇಳಿ ಸಂತೋಷಭರಿತನಾಗಿ, ನೀನು ಪುಣ್ಯಪುರುಷರಲ್ಲೆಲ್ಲ ಅಗ್ರಗಣ್ಯನೆಂದು ಹೊಗಳಿ ಅಪ್ಪಣೆಯನ್ನಿತ್ತನು. ಅವರು ಲೋಪಾಮುದ್ರಾದೇವಿಯನ್ನು ವಸ್ತ್ರಾ ಭರಣಗಳಿಂದ ಪೂಜಿಸಿ, ಆಕೆಯಿಂದ ಅಪ್ಪಣೆಯನ್ನು ಕೈಕೊಂಡು ಅಲ್ಲಿಂದ ಪ್ರಯಾಣವಾಗಿ ಬರುತ್ತಾ, ಕೆಲವು ದಿವಸಗಳಿಗೆ ತನ್ನ ದೇಶವನ್ನು ಸೇರಿ, ತಂದೆತಾಯಿಗಳಿಗೆ ವರ್ತಮಾನವನ್ನು ಕಳುಹಿದನು. ಆ ವರ್ತಮಾನವನ್ನು ಕೇಳಿದ ತಂದೆತಾಯಿಗಳು ಆಶ್ಚರ್ಯಭರಿತರಾಗಿ ತಕ್ಷಣದಲ್ಲಿಯೇ ಮಂಗಳವಾದ್ಯ ಗಳನ್ನು ಭೋರ್ಗರೆಯಿಸುತ್ತಾ ಮಗನಿಗೆದುರಾಗಿ ಮಂತ್ರಿಸಮಾಜ ಸಹಿತರಾಗಿ ಹೋದರು. ಮಾರ್ಗದಲ್ಲಿ ಎದುರುಗೊಳ್ಳಲಿಕ್ಕೆ ಬಂದ ತಂದೆತಾಯಿಗಳನ್ನು ನೋಡಿ ವೀರಸೇನನು ಜಾಗ್ರತೆಯಾಗಿ ಅವರ ಬಳಿಗೆ ಬಂದು, ಅವರ ಪಾದ ಕಮಲಗಳಿಗೆರಗಿದನು. ಬಳಿಕ ನಾಲ್ವರು ಭಾರ್ಯೆಯರು ಅತ್ತೆ ಮಾವನವರ ಅಡಿದಾವರೆಗಳಿಗೆ ನಮಸ್ಕರಿಸಿದ ಬಳಿಕ, ವೀರಸೇನನು ಸಕಲ ವೃತ್ತಾಂತವನ್ನು ತಿಳುಹಿದನು. ಆಗಲಾ ಜನನಿ ಜನಕರು ಮೂಗಿನ ಮೇಲೆ ಬೆರಳುಗಳನ್ನಿಟ್ಟು

ಕೊಂಡು ಆಶ್ಚರ್ಯಾನಂದಗಳನ್ನು ಹೊಂದಿ ಹಂಸವೇಣಿಯನ್ನಾಲಿಂಗನ ಮಾಡಿ ಕೊಂಡು, ಎಲೈ ಮಹಾತ್ಮಳೇ! ನೀನು ಮುನ್ನೂರು ಸಂವತ್ಸರಗಳಿಂದ ಯಾವ ರೀತಿಯೊಳು ಕನ್ಯೆಯಾಗಿ ಬಾಲಭಾವದಲ್ಲಿರುವೆ. ನಿನ್ನನ್ನು ಸ್ತುತಿಸಲು ನಾವು ಶಕ್ತರೇ. ನಮ್ಮ ಭಾಗ್ಯವಶದಿಂದ ನೀನು ನಮಗೆ ಸೊಸೆಯಾದೆ ಎಂದು ನುಡಿದು ಆ ನಾಲ್ವರನ್ನು ಮುದ್ದಾಡಿ, ಪುತ್ರನಂ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಆತನ ಮೈಯನ್ನು ತಡವಿ, ತಲೆಯಂ ಮೂಸಿನೋಡಿ ಆನಂದಭಾಷ್ಪಗಳಂ ಸುರಿಸುತ್ತಾ, ಅನೇಕವಾದ ದ್ರವ್ಯಗಳನ್ನು ಸತ್ಪಾತ್ರರಿಗೆ ದಾನಮಾಡಿ, ಶುಭದಿನದಲ್ಲಿ ಪುರ ಪ್ರವೇಶಮಾಡಿಸಿ, ಪುನಃ ಅತಿ ವಿಜೃಂಭಣೆಯಿಂದ ವಿವಾಹಮಹೋತ್ಸವವನ್ನೂ, ಪಟ್ಟಾಭಿಷೇಕೋತ್ಸವವನ್ನೂ ನಡೆಸಿ ನೇತ್ರಾನಂದವನ್ನೈದುತ್ತಲಿದ್ದರು. ಆಗ ಲಾವೀರಸೇನ ಮಹಾರಾಯನು ಮಂತ್ರಿಯ ಮನೆಗೆ ಹೋಗಿ ಆತನನ್ನಾಲಿಂಗಿಸಿ ಕೊಂಡು, ಎಲೈ ಪುಣ್ಯಾತ್ಮನೇ! ಅಗಸ್ತ್ಯ ಮಹರ್ಷಿಯ ಕರುಣವೂ, ಶುಕವೇಣಿ ನೀಲವೇಣಿ, ಹಂಸವೇಣಿ, ಶಾರಿಕಾವೇಣಿಗಳೆಂಬ ನಾಲ್ವರು ಲಲನಾಮಣಿಗಳೂ ಅನೇಕ ಕೋಟಿ ಧನವೂ, ದಿವ್ಯತರವಾದ ರತ್ನಗಳೂ, ಲೋಕದಲ್ಲಿ ಸತ್ಕೀರ್ತಿಯೂ ಇವುಗಳೆಲ್ಲಾ ನಿನ್ನ ಅನುಗ್ರಹದಿಂದಲ್ಲವೇ ನನಗೆ ಸಂಭವಿಸಿವವು ನೀನು ಸಂತೋಷಮಾನಸನಾಗಿ ಒಡ್ಡೋಲಗಕ್ಕೆ ಬಾರೆನಲು, ಮಂತ್ರಿಯು ತನಗೆ ಪ್ರಾಪ್ತವಾಗಿದ್ದ ಮನೋದುಃಖವನ್ನಾತನಿಗರುಹಿ ಬಹಳ ವಿಧಗಳಿಂದ ಆತನನ್ನು ಸ್ತುತಿಸಿ ರಾಜನಸಭೆಗೈತಂದನು.

ಅನಂತರದಲ್ಲಿ ವೀರಸೇನಮಹಾರಾಯನು ದೇಶದೇಶಗಳಿಗೆ ದಂಡೆತ್ತಿ ಹೋಗಿ ತನ್ನ ಭುಜಬಲದಿಂದಲೂ, ಅಗಸ್ತ್ಯಮಹಾಮುನಿಯ ಕರುಣಾ ಕಟಾಕ್ಷದಿಂದಲೂ, ಚತುಸ್ಸಮುದ್ರ ಮುದ್ರಿತವಾದ ಭೂಮಂಡಲವನ್ನೆಲ್ಲಾ ಗೆದ್ದು, ಸಾಮ್ರಾಜ್ಯ ಪಟ್ಟಾಭಿಷಿಕ್ತನಾಗಿ ರಾಜಾಧಿರಾಜರುಗಳನ್ನೆಲ್ಲಾ ತನ್ನ ಕೈ ಕೆಳಗೆ ತೆಗೆದುಕೊಂಡು, ಅವರುಗಳಿಂದ ಕಪ್ಪಕಾಣಿಕೆಗಳನ್ನು ಕೈಗೊಳ್ಳುತ್ತಾ ನವಖಂಡ ಮಂಡಲಾಧಿಪನಾಗಿ ಚಕ್ರವರ್ತಿಯೆಂದೆನ್ನಿಸಿಕೊಳ್ಳುತ್ತಾ ಇಂದ್ರ ಯಮ, ವರುಣ, ಕುಬೇರರೇ ಮೊದಲಾದ ದಿಕ್ಪಾಲಕರುಗಳಿಗಿಂತಲೂ ಅಧಿಕ ವಾದ ಭೋಗಗಳನ್ನನುಭವಿಸುತ್ತಾ ವೃದ್ಧರಾದ ಸತ್ಪುರುಷರನ್ನೂ, ಯೋಗಿ ಗಳನ್ನೂ ಜ್ಞಾನಿಗಳನ್ನೂ ಪೂಜಿಸುತ್ತಾ, ಭೂಲೋಕದೊಳೆಲ್ಲಾ ವೇದಾಂತಶಾ ವನ್ನು ಪ್ರಕಟಿಸಿ ಪ್ರಾಬಲ್ಯ ಧರ್ಮವಂ ನಾಲ್ಕು ಪಾದಗಳಲ್ಲಿ ನಡೆಸುತ್ತಾ ಅನೇಕ ವರುಷಗಳು ಭೂಮಂಡಲವನ್ನಾಳಿ, ಬಳಿಕ ಹಂಸವೇಣಿ ಸಹಿತನಾಗಿ ದೇಹವನ್ನು ಬಿಟ್ಟು, ಬ್ರಹ್ಮ, ವಿಷ್ಣು, ಮಹೇಶ್ವರರಿಂದ ಶ್ಲಾಘಿಸಲ್ಪಟ್ಟವನಾಗಿ, ಉತ್ತಮ ವಾದ ಪುಣ್ಯದಲ್ಲಿ ಜನನ, ಮರಣ ಪ್ರವಾಹರೂಪಗಳಿಲ್ಲದ, ಶಾಶ್ವತವಾದ ಸುಖ ವನ್ನು ಅನುಭವಿಸುತ್ತಲಿದ್ದರೆಂದು ವಾಸುದೇವನು ನುಡಿಯಲಾಗಿ, ಅರ್ಜುನನ

ಅದನ್ನು ಕೇಳಿ, ಬಹಳ ವಿಧದಿಂದ ವೀರಸೇನನನ್ನು ಕೊಂಡಾಡಿ, ಗೋವಿಂದನನ್ನು ಸ್ತುತಿಸಿ, ಆ ಮಹಾನುಭಾವನನ್ನು ಕುರಿತು, ಎಲೈ ಮಹಾನುಭಾವನೇ! ಈ ಪುಣ್ಯಚರಿತ್ರೆಯನ್ನು ಕೇಳಿದ ಕಾರಣ ನನ್ನ ಪಾಪರಾಶಿಗಳೆಲ್ಲಾ ನಾಶವಾದುವು. ಬಹಳ ಹೊತ್ತಾಗುತ್ತಾ ಬಂದುದರಿಂದ ಇನ್ನು ನಿದ್ರೆಗೆ ಮನಕೊಡಬೇಕೆಂದು ಪ್ರಾರ್ಥಿಸಲಾಗಿ, ವಾಸುದೇವನು ಸಮ್ಮತಿಸಿ ಈರ್ವರೂ ಶಯನಿಸಿ ಸುಖನಿದ್ರೆಯನ್ನು ಮಾಡಿದರು.

ಹತ್ತನೆಯ ಕಥೆ ಸಂಪೂರ್ಣ. ಶ್ರೀ. ಶ್ರೀ. ಶ್ರೀ.



ಶ್ರೀರಸ್ತು.

ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ.

## ಸೂರ್ಯದತ್ತರಾಯನೆಂಬ ಹನ್ನೊಂದನೆ ರಾಜಪುತ್ರನ ಕಥೆ.

ಹನ್ನೊಂದನೆಯ ದಿನದ ರಾತ್ರಿ ಕೃಷ್ಣಾರ್ಜುನರೀರ್ವರೂ ಆ ಯಮುನಾ ನದೀ ಪ್ರಾಂತ್ಯದ ಮರಳು ದಿಣ್ಣೆಯ ಮೇಲೆ ಕುಳಿತುಕೊಂಡು ಸುಖಭೋಜನವನ್ನು ಮಾಡಿದ ಬಳಿಕ ತಾಂಬೂಲವನ್ನು ಸೇವಿಸುತ್ತಾ, ತಂಪಾಗಿ ಬೀಸುವ ಮಂದಮಾರುತಕ್ಕಾನಂದಿಸುತ್ತಾ ಸರಸಸಲ್ಲಾಪಗಳೊದಗಿರುವ ಸಮಯದಲ್ಲಿ ಇಂದ್ರನಂದನನು ಶ್ರೀಕೃಷ್ಣನನ್ನು ಕುರಿತು, ಎಲೈ ದೇವದೇವನೇ! ಭಕ್ತಜನರಕ್ಷಕನೇ! ವೇದಾಂತ ರಹಸ್ಯಗಳೊಳು ಸಾರಭೂತವಾದ ಜ್ಞಾನಪ್ರಭಾವವನ್ನು ನನಗೆ ಇತಿಹಾಸರೂಪದಿಂದ ಬೋಧಿಸಿ ಕೃತಾರ್ಥನನ್ನಾಗಿ ಮಾಡಬೇಕೆಂದು ಅತಿ ಭಯಭಕ್ತಿಯಿಂದ ಪ್ರಾರ್ಥಿಸಲಾಗಿ, ಆ ಯಾದವಕುಲಾಗ್ರಗಣ್ಯನಾದ ವಾಸುದೇವನು ಮಂದಸ್ಮಿತ ಸುಂದರಮುಖಾರವಿಂದದಿಂದ ಅವನನ್ನು ನೋಡಿ ಎಲೈ ಪಾಂಡವ ಮಧ್ಯಮನೇ! ಅದ್ಭುತವಾಗಿಯೂ, ಪಾವನವಾಗಿಯೂ, ವೇದಾಂತ ರಹಸ್ಯವುಳ್ಳದ್ದಾಗಿಯೂ ಇರುವ ಸೂರ್ಯದತ್ತರಾಯನ ಚರಿತ್ರೆಯನ್ನಾಲೈಸಿ ಕೇಳೆಂದು ಹೇಳತೊಡಗಿದನು.

ಕೇಳೈಯ್ಯಾ, ಪಾಂಡವ ಮಧ್ಯಮನೇ! ಹಿಂದೆ ಆಂಧ್ರದೇಶವನ್ನು ಅತ್ಯಂತ ಧರ್ಮದಿಂದ ಪರಿಪಾಲಿಸುತಲಿದ್ದ ದ್ಯುಮತ್ಸೇನನೆಂಬ ಇಳೆಯಾಣ್ಮನಿಗೆ ಸೂರ್ಯನವರದಿಂದ ಓರ್ವ ಸುಕುಮಾರನು ಜನಿಸಿದನು. ದ್ಯುಮತ್ಸೇನ ರಾಯನು ಪುತ್ರೋತ್ಸವದ ಸಂತೋಷವನ್ನಪಾರವಾಗಿ ತಿಳಿದು, ಅನೇಕ ಧನಕನಕಾದಿಗಳನ್ನು ಸತ್ಪಾತ್ರರಿಗೆ ದಾನಮಾಡಿ, ಜಾತಕರ್ಮ ಮುಂತಾದ ಕ್ರಿಯೆಗಳನ್ನು ನಡೆಸಿ, ಸೂರ್ಯದತ್ತನೆಂದು ಮಗನಿಗೆ ನಾಮಕರಣವಂ ಮಾಡಿದನು ಆಗ ಬಾಲಕನು

ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೂ ಅಭಿವೃದ್ಧಿಯನ್ನೈದುತ್ತಾ ಸಕಲ ವಿದ್ಯೆಗಳನ್ನು ಅಭ್ಯಾಸಿಸುತ್ತಾ, ದಿವ್ಯತೇಜಸ್ವಿಯಾಗಿ ಸಕಲರಿಂದ ನುತಿಸಲ್ಪಡುತ್ತಿದ್ದನು. ದ್ಯುಮತ್ಸೇನ ರಾಯನು ತನ್ನ ಪುತ್ರನಿಗೆ ಬಾಲ್ಯದಲ್ಲಿಯೇ ವಿವಾಹಮಂ ಮಾಡಬೇಕೆಂದಿಚ್ಛೈಸಿ ತನಗೆ ಅತಿಸಮೀಪ ಬಾಂಧವ್ಯವುಳ್ಳ ಕಾಶೀದೇಶದ ಅರಸನ ಮಗಳನ್ನು ಮಗನಿಗೆ ತರಬೇಕೆಂದು ಆಲೋಚಿಸಿ, ಈ ಅಭಿಪ್ರಾಯಮಂ ಕಾಶೀರಾಜಂಗರುಹಿದನು. ಆ ಕಾಶೀ ದೇಶಾಧಿಪನು ಈ ಅಭಿಪ್ರಾಯವನ್ನು ಕೇಳ್ಬು ತನ್ನ ಕುವರಿಯಾದ ಐದು ವರ್ಷಗಳ ವಯಸ್ಸಿನ ವಿಚಿತ್ರವತಿಯೆಂಬ ನಾರೀರತ್ನವನ್ನು ಸೂರ್ಯದತ್ತನಿಗೆ ಕೊಡಬೇಕೆಂದು ಮನದೊಳು ನಿಶ್ಚೈಸಿ, ವಿವಾಹಕ್ಕೆ ಇನ್ನೂ ಕಾಲವು ಸಮೀಪಿಸಲಿಲ್ಲವೆಂದು ನಾವಕಾಶ ಅವಧಿಯನ್ನು ಮಾಡಿಕೊಂಡು ಆ ಸಂಗತಿಯನ್ನು ದ್ಯುಮತ್ಸೇನ ರಾಯನಿಗೆ ತಿಳುಹಿಸಿದನು. ಹೀಗಿರುವಾಗ ದೈವಯೋಗದಿಂದ ದ್ಯುಮತ್ಸೇನನಿಗೆ ಬೆನ್ನಿನಲ್ಲಿ ಪ್ರಬಲವಾದ ಹುಣ್ಣು ಎದ್ದು ಅದರಿಂದ ವ್ಯಾಧಿಯು ಪ್ರಬಲವಾಗುತ್ತಾ ಬರಲು, ರಾಯನು ತನ್ನ ಮನದೊಳು ಇನ್ನು ತಾನು ಜೀವಸಹಿತನಾಗಿರಲಾರೆನೆಂಬವಾಗಿ ಯೋಚಿಸಿ, ಮಗನು ಬಾಲನಾಗಿಯೂ, ಹೆಂಡತಿಯು ಅಬಲೆಯಾಗಿಯೂ ಇರುವವರಿಂದ ಇವರಿಗೆ ನಾಥರಿಲ್ಲದೆ ಹೋಗುವದಕ್ಕಾಗಿ ದೈವವನ್ನು ನೆನೆದು ಚಿಂತಿಸುತ್ತಾ, ಒಂದಾನೊಂದು ದಿವಸ ತನ್ನ ಆಪ್ತ ಮಂತ್ರಿಯನ್ನು ಅಂತಃಪುರಕ್ಕೆ ಕರೆಸಿ, ಎಲೈ ಮಂತ್ರಿವರ್ಯನೇ! ನನಗೆ ಪ್ರಾಪ್ತವಾಗಿರುವ ವ್ಯಾಧಿಯಿಂದ ಪ್ರಾಣವು ನಿಲ್ಲುವದಿಲ್ಲವಾಗಿ ನನ್ನ ಕುವರನಾದ ಸೂರ್ಯದತ್ತನು ಪ್ರಾಪ್ತವಯಸ್ಕನಾಗುವವರೆಗೂ, ನೀನೇ ರಾಜ್ಯಭಾರವನ್ನು ಮಾಡುತ್ತಾ, ರಾಣಿಯನ್ನೂ ಬಾಲಕನನ್ನೂ ಚೆನ್ನಾಗಿ ವಿಚಾರಿಸುತ್ತಾ, ಸಂದರ್ಭ ಸಮಯಗಳಿಗನುಸಾರವಾಗಿ, ರಾಣಿಯ ಅಪ್ಪಣೆಯನ್ನು ಕೇಳುತ್ತಾ, ಮಗನು ಯೌವನಶಾಲಿಯಾದ ಬಳಿಕ ರಾಜ್ಯಭಾರವನ್ನು ಆತಂಗೊಪ್ಪಿಸಿ, ನೀನು ಪೂರ್ವದಂತೆಯೇ ದಯಾವಂತನಾಗಿರಬೇಕೆಂದಾತನಿಗೆ ಕಟ್ಟಳೆಯಿತ್ತು, ಲೋಕದಲ್ಲಿ ಮನುಷ್ಯರು ಕಡೆಗೆ ಸೇರುವ ಸ್ಥಾನವನ್ನೈದಿದನು. ಬಳಿಕಲಾ ಮಂತ್ರಿಯಾದ ಸುನೀತನು ಮೃತಿಯನ್ನೈದಿದ ರಾಜನಿಗೆ ಪದ್ಧತಿಯ ಮೇರೆಗೆ ನಡೆಯಬೇಕಾದ ಕ್ರಿಯಾದಿಗಳನ್ನು ರಾಣಿಯ ಅಪ್ಪಣೆಯಂತೆ ನಡೆಸಿ, ತಾನು ಆಕೆಯ ಅನುಜ್ಞೆಯಂತೆಯೇ ಕೆಲವು ದಿವಸಗಳ ಪರ್ಯಂತವೂ ರಾಜ್ಯಭಾರವನ್ನು ಕ್ರಮವಾಗಿ ಮಾಡಿಕೊಂಡು, ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸುತ್ತಾ ಇರಲಾಗಿ, ದೈವಯೋಗದಿಂದ ಕೆಲವುಕಾಲದ ಮೇಲೆ ಸುನೀತನಿಗೆ ದುರ್ಬುದ್ಧಿಯುಂಟಾಗಿ ತಾನು ಆಳುತ್ತಲಿದ್ದ ರಾಜ್ಯವನ್ನು ಏನಾದರೂ ಕಾರಣಾಂತರದಿಂದ ಅಪಹರಿಸಲಿಚ್ಛೈಸಿ, ರಾಜಪತ್ನಿ ಪುತ್ರರನ್ನು ದೇಶಭ್ರಷ್ಟರನ್ನಾಗಿ ಮಾಡಬೇಕೆಂತಲೂ, ಕಾಶೀರಾಜನ ಕುವರಿಯನ್ನು ತನ್ನ ಕುಮಾರನಿಗೆ

ಮದುವೆ ಮಾಡಿಕೊಳ್ಳಬೇಕೆಂತಲೂ ಪ್ರಯತ್ನ ಮಾಡಿ, ರಾಜಪುತ್ರನನ್ನೂ ಆತನ ತಾಯಿಯನ್ನೂ ವಿಷಶಸ್ತ್ರಪ್ರಯೋಗಗಳಿಂದಲಾದರೂ ಪ್ರಾಣದಿಂದಿಲ್ಲವಂತೆ ಮಾಡಬೇಕೆಂದು ಯೋಚಿಸುತಲಿದ್ದನು. ಕೆಲವುಕಾಲದಮೇಲೆ ಸುನೀತನು ರಾಜ್ಯ ಭಾರವನ್ನು ಸರಿಯಾಗಿ ಮಾಡುತ್ತಾ ಇರುವ ಕಾರಣ ತನ್ನ ಸಭೆಯವರನ್ನೆಲ್ಲಾ ತನ್ನ ಇಷ್ಟದಂತೆ ನಡೆಯುವವರನ್ನಾಗಿ ಮಾಡಿಕೊಳ್ಳಲು, ಈ ಮರ್ಮವು ಸುತಾನು ಸುದ್ಧಿಯಾಗಿ ರಾಣಿಗೆ ತಿಳಿಯಬಂತು. ಆಗಲಾ ಅಸಹಾಯವುಳ್ಳ ರಾಜ ಪತ್ನಿಯು ಬಹಳವಾಗಿ ದುಃಖಿಸುತ್ತಾ ಏನಾದರೂ ಮಾಡಿ ತನ್ನ ಪ್ರಾಣಗಳನ್ನೂ, ಮಗನ ಪ್ರಾಣಗಳನ್ನೂ ರಕ್ಷಿಸಿಕೊಳ್ಳಬೇಕೆಂದು ಯೋಚಿಸಿ, ಅದಕ್ಕೆ ತಕ್ಕ ಉಪಾಯವನ್ನು ಮಾಡಿಕೊಳ್ಳುತ್ತಾ, ಕೆಲವು ದಿವಸಗಳ ಮೇಲೆ ತನ್ನ ಅರಮನೆಯ ಬೊಕ್ಕಸದಲ್ಲಿದ್ದ ತನಗೆ ಸಾಧ್ಯವಾದಷ್ಟು ಧನವನ್ನೂ, ವಸ್ತ್ರಾಭರಣಗಳನ್ನೂ ತೆಗೆದುಕೊಂಡು, ಬಾಲನಾದ ಮಗನನ್ನು ಹಿಂದೆ ಕರೆದುಕೊಂಡು ರಹಸ್ಯವಾಗಿ ಅರ್ಧರಾತ್ರಿಯ ಸಮಯದಲ್ಲಿ ಎದ್ದು ಪ್ರಯಾಣವಾಗಿ ಹೋಗುತಲಿದ್ದಳು. ಈ ಸುದ್ದಿಯು ಸುನೀತನಿಗೆ ಮುಟ್ಟಲಾಗಿ, ಅಯ್ಯಯ್ಯೋ ಇವರು ಪ್ರಾಣ ಸಹಿತರಾಗಿ ಹೋದರಲ್ಲಾ ಎಂದು ದುಃಖಿಸುತ್ತಾ, ಆದರೂ ಅವರನ್ನು ಏನಾದರೂ ಮಾಡಿ ಸಂಹರಿಸಿ ಬಿಡಬೇಕೆಂದು ಮನವುಂಟಾಗಿ, ನಾಲ್ಕು ದಿಕ್ಕುಗಳಿಗೂ ಅವರನ್ನು ಹುಡುಕುವುದಕ್ಕೆ ಚಾರರನ್ನು ಕಳುಹಿದನು. ಅರ್ಧರಾತ್ರಿಯೊಳು ಹೊರಟ ದ್ಯುಮತ್ಸೇನನ ಪತ್ನಿಯು ಕೆಲವು ದಿವಸಗಳಿಗೆ ಮೆಲ್ಲಮೆಲ್ಲಗೆ ಮಗನ ಸಹಿತವಾಗಿ ಕಾಶೀಪುರವನ್ನು ಸೇರುವವಳಾಗಿ ತಾನು ಆ ಪಟ್ಟಣಕ್ಕೆ ಹೋದದ್ದನ್ನು, ಅಲ್ಲಿಯೇ ತಾನು ನೆಲೆಯಾಗಿರಬೇಕೆಂಬ ಅಭಿಪ್ರಾಯವನ್ನು ಯಾರಿಗೂ ತಿಳಿಸದೆಯೂ, ಅಲ್ಲಿ ಒಂದು ಬಿಡದಿಯ ಮನೆಯನ್ನು ಮಾಡಿಸಿಕೊಂಡು ಅದರಲ್ಲಿ ವಾಸಮಾಡುತ್ತಾ, ಒಂದು ದಿವಸ ಮಗನನ್ನು ಕುರಿತು, ಎಲೈ ಮಗುವೇ! ಸುನೀತನೆಂಬ ಮಂತ್ರಿಯ ದೆಸೆಯಿಂದ ನಮಗೀ ದುರವಸ್ಥೆಯು ಸಂಭವಿಸಿತು. ನಿನಗೆ ಹದಿನೈದುವರುಷ ವಯಸ್ಸಾಗುತ್ತಾ ಬಂತು. ಇನ್ನು ನೀನು ಪ್ರಾಪ್ತ ವಯಸ್ಕನಾದುದರಿಂದ ಇತಃಪರ ಈ ಪಟ್ಟಣದೊಳಗಿನ ವಿದ್ಯಾಶಾಲೆಗೆ ನೀನು ಪ್ರತಿ ದಿನವೂ ಹೋಗಿ ವಿವಿಧ ಶಾಸ್ತ್ರಗಳನ್ನು ಅಭ್ಯಸಿಸುವವನಾಗೆನಲು, ಆ ರಾಜತನಯನು ಯುಕ್ತವೆಂದು ಗ್ರಹಿಸಿ ಪ್ರತಿನಿತ್ಯವೂ ಪಾಠಶಾಲೆಗೆ ಹೋಗುತ್ತಾ ಸಕಲ ವಿದ್ಯೆಗಳನ್ನು ಅಲ್ಲಿ ಗುರುಮುಖದಿಂದ ಗ್ರಹಿಸುತಲಿದ್ದನು. ಆ ಪಾಠಶಾಲೆಗೆ ವಿದ್ಯಾಭ್ಯಾಸವನ್ನು ಮಾಡುವುದಕ್ಕೋಸ್ಕರ ಕಾಶೀರಾಜನ ಪುತ್ರಿಯಾದ ವಿಚಿತ್ರವತಿ ಎಂಬುವಳೂ ಕೂಡ ಪ್ರತಿ ದಿನವೂ ಬರುತ್ತಾ ಇರಲಾಗಿ, ರಾಜಪುತ್ರನು ಅವಳ ರೂಪು, ರೇಖ, ಸೌಂದರ್ಯ, ಲಾವಣ್ಯಗಳಿಗೆ ಆನಂದವುಳ್ಳವನಾಗಿ, ಅವಳಲ್ಲಿ ತುಂಬಾ ಅನುರಾಗವನ್ನಿಟ್ಟು, ತಾನು ಏನಾದರೂ

ಮಾಡಿ ಆ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕೆಂದು ಮನದೊಳು ಚಿಂತಿಸು ತ್ತಲಿದ್ದನು. ಕಾಶೀರಾಜನ ಪುತ್ರಿಯಾದ ವಿಚಿತ್ರವತಿಯೂ ಕೂಡ ಆ ರಾಜ ನಂದನನಾದ ಸೂರ್ಯದತ್ತನನ್ನು ನೋಡಿ, ಇವನು ಯಾವ ದೇಶದ ಅರಸು ಮಗನೋ ಬಹಳ ಸುಂದರನಾಗಿರುವನೆಂದು ಅವನಲ್ಲಿ ಮನವನ್ನಿಟ್ಟವಳಾಗಿ ದ್ದಳು. ಒಂದಾನೊಂದು ದಿವಸ ರಾಜಪುತ್ರಿಯು ತನಗೆ ಉಪಾಧ್ಯಾಯರು ಹೇಳಿಕೊಡುವ ಶ್ಲೋಕಗಳಲ್ಲಿ ಕೆಲವು ಬಾರದೇ ಇರಲಾಗಿ, ಆ ಪಾಠವನ್ನು ಘಟ್ಟಿಮಾಡಿ ಒಪ್ಪಿಸದೇ ಇದ್ದರೆ ಗುರುವು ಶಿಕ್ಷಿಸುವನೆಂದು ಸೂರ್ಯದತ್ತನನ್ನು ನೋಡಿ, ಎಲೈ ಅನ್ಯದೇಶದ ರಾಜತನಯನೇ! ನನಗೆ ಪಾಠವನ್ನು ಪೇಳುವೆಯಾ ಎಂದು ಕೇಳಿದಳು. ಆ ಮಾತಿಗೆ ರಾಜಪುತ್ರನು, ಎಲೈ ಕನ್ಯಾರತ್ನವೇ! ನೀನು ಕೇಳುವ ಪ್ರಶ್ನೆಯು ಸಹಜವಾದದ್ದೇ ಆದರೂ ನಿನಗೆ ನಾನು ಪಾಠವನ್ನು ಹೇಳೋಣದರಿಂದ ಪ್ರತಿಫಲವೇನೆಂದು ಕೇಳಲಾಗಿ ಆ ತರುಣಿಯು, ಎಲೈ ರಾಜ ಕುವರನೇ! ನೀನು ಏನು ಅಪೇಕ್ಷಿಸಿದರೂ ಕೊಡುವೆನೆಂದು ಪ್ರತ್ಯುತ್ತರ ಕೊಡ ಲಾಗಿ, ಅಂದಿನಿಂದ ಈರ್ವರಿಗೂ ಪರಸ್ಪರ ಮೈತ್ರಿಭಾವವುಂಟಾಗಿ ರಾಜ ಪುತ್ರನು ಆಕೆಗೆ ಪಾಠಗಳನ್ನು ಹೇಳಿಕೊಡುತ್ತಾ ಬಂದನು. ಈ ಪ್ರಕಾರ ಕೆಲವು ಕಾಲ ಕಳೆದ ಬಳಿಕ ಒಂದಾನೊಂದು ದಿವಸ ಕಾಶೀರಾಜನು ತನ್ನ ಕುವರಿ ಯನ್ನು ಕರೆದು ತನ್ನ ಹತ್ತಿರ ಕುಳ್ಳಿರಿಸಿಕೊಂಡು, ಎಲೈ ಯುವತಿಯೇ! ನಿನಗೆ ಯೌವನವು ಪ್ರಾಪ್ತವಾಯಿತು. ಆಂಧ್ರದೇಶದ ಅವನಿಪಾಲನ ತನಯನಾದ ಸೂರ್ಯದತ್ತನೆಂಬವನಿಗೆ ನಿನ್ನನ್ನು ಕೊಟ್ಟು ಮದುವೆಯನ್ನು ಮಾಡಲಿಚ್ಛಿಸಿರು ವೆನು. ನಿನ್ನ ಮಾವನಾದ ದ್ಯುಮತ್ಸೇನರಾಯನು ಮರಣವನ್ನೈದಿದಕಾರಣ ಆತನ ಮಂತ್ರಿಯಾದ ಸುನೀತನು ನಿನ್ನ ಗಂಡನಾದ ಸೂರ್ಯದತ್ತನನ್ನು ಕರೆದು ಕೊಂಡು ವೈವಾಹಕ್ಕಾಗಿ ಬರುವನು. ಆದುದರಿಂದ ನಿನ್ನ ವಿದ್ಯಾ ಗುರುವಿಗೆ ಯಥೋಚಿತ ಬಹುಮತಿಯನ್ನು ಕೊಟ್ಟು ಇತಃಪರ ವಿದ್ಯಾಶಾಲೆಗೆ ನೀನು ಹೋಗದೆ ಅಂತಃಪುರದಲ್ಲಿಯೇ ಇರೆಂದು ಆಜ್ಞಾಪಿಸಿದನು.

ಆಗಲಾ ವಿಚಿತ್ರವತಿಯು ಅಪೂರ್ವವಾದ ವಿವಿಧ ವಸ್ತುಗಳನ್ನೂ ಅನೇಕ ದ್ರವ್ಯವನ್ನೂ ತೆಗೆದುಕೊಂಡು ಹೋಗಿ ವಿದ್ಯಾಗುರುವಿಗೆ ಅಭಿವಂದಿಸಿ, ತಂದೆಯ ಅನುಜ್ಞೆಯನ್ನು ನುಡಿದು ಕೊಟ್ಟವಳಾದಳು. ಈ ವೃತ್ತಾಂತವನ್ನು ಸೂರ್ಯ ದತ್ತನಿಗೂ ಆ ವಿಚಿತ್ರವತಿಯೇ ತಿಳುಹಿದಳು. ಆಗ ಸೂರ್ಯದತ್ತನು ತನ್ನ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ, ಎಲೈ ಇಂದುವದನೆಯೇ! ನೀನು ಪೂರ್ವ ದಲ್ಲಿ ನನಗೆ ಮಾಡಿದ ವಾಗ್ದಾನವನ್ನು ಮರೆತು ಅದನ್ನು ಸಫಲ ಮಾಡದೇ ಹೋಗಿ ಅಂತಃಪುರದೊಳು ಸೇರುವೆಯಾ? ಎಂದು ಕೇಳಿದನು. ಆ ಪೂರ್ಣೇಂದು ನಿಭಾನನೆಯು ರಾಜಪುತ್ರನಿಗೆ ತಾನು ಪೂರ್ವದೊಳು ಪೇಳಿದ್ದ ಮಾತನ್ನು

ಜ್ಞಾಪಿಸಿಕೊಂಡು ನಿಜವೆಂದು ಭಾವಿಸಿ, ಎಲೈ ರಾಜತನಯನೇ! ನಿನ್ನ ಮನದೊಳಗೆ ಏನು ಅಪೇಕ್ಷೆ ಇರುವುದೋ ಅದನ್ನು ಹೇಳಿದರೆ ನಡೆಸುವೆನೆನಲು ಅದಕ್ಕೆ ರಾಜನಂದನನು ಎಲೈ ನಾರೀಮಣಿಯೇ ನನಗೆ ಯಾವುದರಲ್ಲಿಯೂ ಅಪೇಕ್ಷೆ ಇಲ್ಲ. ನಿನ್ನನ್ನು ಪಾಣಿಗ್ರಹಣ ಮಾಡಿಕೊಳ್ಳಬೇಕೆಂದು ಬಹಳ ದಿವಸಗಳಿಂದಲೂ ಆಶ್ರಯುವಿರುವುದರಿಂದ ಅದನ್ನು ನೆರವೇರಿಸಬೇಕೆಂದು ನುಡಿದನು. ಆ ಮಾತುಗಳನ್ನು ಕೇಳಿದ ಕ್ಷಣದಲ್ಲಿಯೇ ವಿಚಿತ್ರವತಿಗೆ ಎದೆಯು ಝುಗ್ಗೆಂದು ಒಡೆದು ಧೈರ್ಯಗುಂದಿ ತನ್ನ ಮನದೊಳಗೆ ಅಹಹಾ ಇದೇನಾಶ್ಚರ್ಯ! ನನ್ನ ತಂದೆಯ ಕೋರಿಕೆಯೊಂದು ರೀತಿಯಾಗಿಯೂ, ಈತನ ಅಭಿಪ್ರಾಯವು ಮತ್ತೊಂದು ರೀತಿಯಾಗಿಯೂ ಇರುವುದರಿಂಹ ದೈವಸಂಕಲ್ಪವನ್ನು ಯಾರು ಉಲ್ಲಂಘಿಸುವುದಕ್ಕೆ ಶಕ್ತರೆಂದು ಸ್ವಲ್ಪ ಹೊತ್ತು ಯೋಚಿಸಿ ತರುವಾಯ ಇಳೆಯಾಣ್ಮ ತನಯನನ್ನು ಕುರಿತು. ಎಲೈ ರಾಜಪುತ್ರನೇ! ನಾವು ಈ ಸ್ಥಳದಲ್ಲಿ ಇದ್ದರೆ ನಮ್ಮ ಮನೋಭೀಷ್ಟಗಳು ನೆರವೇರುವುದು ಕಷ್ಟ. ಆದುದರಿಂದ ನಾಳಿನ ಅರ್ಧರಾತ್ರಿಗೆ ಸರಿಯಾಗಿ ಈ ಪಟ್ಟಣದ ಉತ್ತರ ಬಾಗಿಲಿನಲ್ಲಿರುವ ಮಂಟಪದೊಳಗೆ ನೀನು ಬಂದು ಕಾದುಕೊಂಡಿರು. ಆ ಸಮಯಕ್ಕೆ ಸರಿಯಾಗಿ ನಾನು ಅಲ್ಲಿಗೆ ಬರುವೆನು. ಬಳಿಕ ಈರ್ವರೂ ಈ ಪಟ್ಟಣವನ್ನು ಬಿಟ್ಟು ಇನ್ನಾವ ದೇಶಕ್ಕಾದರೂ ಹೋಗಿ ಅಲ್ಲಿ ಸುಖವಾಗಿ ಇರೋಣವೆಂದು ಹೇಳಿ, ಆತನನ್ನು ಕಳುಹಿಸಿ, ತಾನು ತನ್ನ ಅರಮನೆಗೆ ಬಂದು ಈ ಸಮಾಚಾರವನ್ನು ತನಗೆ ಆಪ್ತಳಾಗಿಯೂ, ಯೋಗ್ಯಳಾಗಿಯೂ ಇರುವ ಓರ್ವ ದೂತಿಯ ಸಂಗಡ ಹೇಳಿದಳು. ಅದನ್ನು ಕೇಳಿದ ದೂತಿಯು ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ, ಎಲೈ ಪ್ರಿಯಳೇ! ಇಂಥಾ ಸಾಹಸವಾದ ಕಾರ್ಯಗಳನ್ನು ಮಾಡಲೆತ್ನಿಸಿರುವೆ. ನಿನಗೆ ಕೇವಲ ಬಾಲ್ಯವಾದ್ದರಿಂದ ಈಯೋಚನೆಯುಂಟಾಗಿರುವುದು. ಇದರಿಂದ ನಿನಗೆ ಕೇವಲಶ್ರಮದುಃಖಗಳೂ, ಮಾತಾಪಿತೃಗಳಿಗೆ ಲೋಕಾಪವಾದವೂ, ಸಂಭವಿಸುವುದರಲ್ಲಿ ಸಂಶಯವಿಲ್ಲವೆಂದು ನುಡಿಯಲು, ಆ ರಾಜಪುತ್ರಿಯು, ಎಲೈ ದಾದಿಯೇ! ನನ್ನ ತಂದೆ ತಾಯಿಗಳು ನನಗೆ ತಿಳಿಯಪಡಿಸದೆ ವರನನ್ನು ನಿಶ್ಚೈಸಿ ಲಗ್ನವನ್ನು ಬೆಳೆಸಿರುವರು ಆ ವರನು ಕೆಂಪಾಗಿಯೋ ಅಥವಾ ಕಪ್ಪಾಗಿಯೋ ಇಲ್ಲವೇ ಕುರೂಪಿಯಾಗಿಯೋ, ಸ್ಫುರದ್ರೂಪಿಯಾಗಿಯೋ ಇರುವುದನ್ನು ನಾನರಿಯೆ. ಈಗ ನಾನು ಮನವಿಟ್ಟಿರುವ ರಾಜಪುತ್ರನು ಸದ್ವಂಶಸ್ಥನಾಗಿಯೂ, ರೂಪುರೇಖೆಗಳಲ್ಲಿ ಕಂದರ್ಪನಿಗಿಮ್ಮಡಿಯಾಗಿಯೂ ಇರುವನು. ಆದುದರಿಂದ ನಾನು ಮನವಿಟ್ಟಿರುವ ಪುರುಷನನ್ನಲ್ಲದೆ ಅನ್ಯರನ್ನು ವರಿಸೆನು. ನೀನು ಯಾರಿಗೂ ತಿಳಿಸದೆ ಸುಮ್ಮನೆ ಇರೆಂದು ಅವಳನ್ನು ಸಮಾಧಾನಪಡಿಸಿ, ಅವಳಿಗೆ ಬೇಕಾದಷ್ಟು ವಸ್ತ್ರಾಭರಣಗಳನ್ನು ಕೊಟ್ಟು, ತಾನು ಅರ್ಧರಾತ್ರಿಯೊಳೆದ್ದು ಅಂತಃಪುರದಿಂದ ಇಳಿದು, ಹೊರಗೆ ಬಂದು, ಅದುವರೆಗೆ

ದಾದಿಯು ಸಿದ್ಧಮಾಡಿದ್ದ ಕುದುರೆಯನ್ನೇರಿ, ತಾನು ತೆಗೆದುಕೊಂಡಿದ್ದ ವಸ್ತ್ರಾಭರಣಗಳನ್ನು ಭದ್ರವಾಗಿ ನೋಡಿಕೊಂಡು, ರಾಜಪುತ್ರನಿಗೆ ಹೇಳಿದ್ದ ಸಂಕೇತ ಸ್ಥಾನಕ್ಕೆ ಬರಲು, ಅಲ್ಲಿ ಕಾದುಕೊಂಡಿದ್ದ ರಾಜಪುತ್ರನು ಅವಳನ್ನು ಆಲಿಂಗನ ಮಾಡಿಕೊಂಡು ಮುದ್ದಾಡಿ, ಈರ್ವರೂ ಕುದುರೆಗಳನ್ನೇರಿದವರಾಗಿ ಪ್ರಯಾಣ ಮಾಡಿ ಹೋಗುತ್ತಲಿದ್ದರು. ವಿಚಿತ್ರವತಿಯು ತಂದೆತಾಯಿಗಳು ತಮ್ಮ ಮಗಳನ್ನು ಕಾಣದೆ, ಕೇವಲ ದುಃಖಾಶ್ಚರ್ಯವುಳ್ಳವರಾಗಿ, ದೂತರ ಮುಖದಿಂದ ಹುಡುಕಿಸುತ್ತಾ, ಘೋರವಾದ ದುಃಖವನ್ನು ಮಾಡುತಲಿದ್ದರು. ಈ ಸುದ್ದಿಯನ್ನು ಕೇಳಿದ ಪುರಜನಗಳು ಆಶ್ಚರ್ಯವನ್ನು ಹೊಂದಿ, ಅಪಾರವಾದ ದುಃಖವನ್ನೇ ಅನುಭವಿಸುತಲಿದ್ದರಲ್ಲದೆ ಸೂರ್ಯದತ್ತನ ತಾಯಿಯು ಮಗನನ್ನು ಕಾಣದೆ ಕೇವಲ ಚಿಂತಾಕ್ರಾಂತಳಾಗಿದ್ದಳು. ಕಾಶೀರಾಜನೂ ಮಂತ್ರಿಯೂ ಸಹ ಆಲೋಚಿಸಿ, ಮದುವೆಯ ಸಂಭ್ರಮದಲ್ಲಿ ಕನ್ಯೆಯೇ ಮಾಯವಾಯಿತೆಂದು ಅಂತರಂಗದಲ್ಲಿ ದುಃಖಿಸುತ್ತಾ, ನಮ್ಮ ಕನ್ಯೆಗೆ ಕೇವಲ ವ್ಯಾಧಿಯು ಸಂಭವಿಸಿರುವುದರಿಂದ ಪ್ರಕೃತದಲ್ಲಿ ಲಗ್ನವನ್ನು ನಿಲ್ಲಿಸಿರುವುದೆಂತಲೂ, ಪುನಃ ಲಗ್ನವಾರ್ತಾ ಪತ್ರಿಕೆಯನ್ನು ನಿಮಗೆ ಕಳುಹಿಸುವವರೆಗೂ ನೀವು ಬರಬೇಕಾದ್ದನ್ನು ಸಾವಕಾಶ ಮಾಡಬೇಕೆಂತಲೂ, ಸುನೀತನಿಗೆ ಲೇಖನವಂ ಬರೆದು ಕಳುಹಿದರು. ಅತ್ತಲಾ ಸೂರ್ಯದತ್ತನೂ, ವಿಚಿತ್ರವತಿಯೂ ಮಧ್ಯಾಹ್ನದವರೆಗೂ ಪ್ರಯಾಣವಾಗಿ ಹೋಗಿ ಮಾರ್ಗದಲ್ಲಿ ಆಯಾಸವನ್ನು ತೀರಿಸಿಕೊಳ್ಳುವದಕ್ಕೋಸ್ಕರ ಒಂದು ಆಲದ ಮರದ ಬುಡದಲ್ಲಿ ಕುದುರೆಗಳನ್ನಿಳಿದು ಈರ್ವರೂ ವಿಶ್ರಾಂತಿಯನ್ನೈದುತ್ತಾ, ರಾಜಪುತ್ರನು ವಿಚಿತ್ರವತಿಯನ್ನು ಕುರಿತು, ಎಲೈ ಕಮಲಾಕ್ಷಿಯೇ! ಆನಂದವಾದ ಅಂತಃಪುರವನ್ನೂ, ಪ್ರಾಣಸಮಾನರಾದ ತಂದೆತಾಯಿಗಳನ್ನೂ, ನಾನಾವಿಧಗಳಾದ ವಸ್ತ್ರಾಭರಣಗಳನ್ನೂ ಲೋಕೋತ್ತಮವಾಗಿ ಅನುಭವಿಸುತ್ತಿದ್ದ ಸುಖವನ್ನೂ, ತ್ಯಜಿಸಿ, ಮನೋವ್ಯಥೆಯಿಂದ ಬಂದ ಕಾರಣವೇನೆಂದು ಕೇಳಲಾಗಿ, ಅದಕ್ಕಾ ವಿಚಿತ್ರವತಿಯು, ಎಲೈ ಪ್ರಾಣನಾಥನೇ! ನಮ್ಮ ತಂದೆಯು ಆಂಧ್ರದೇಶಾಧಿಪನ ಪುತ್ರನಾದ ಸೂರ್ಯದತ್ತನೆಂಬವನಿಗೆ ನನ್ನನ್ನು ಕೊಟ್ಟು ಮದುವೆ ಮಾಡುವದಾಗಿಯೂ, ಆ ಆಂಧ್ರದೇಶದ ಅಧಿಪತಿಯಾದ ದ್ಯುಮತ್ಸೇನರಾಯನು ಮಗನನ್ನೊಪ್ಪಿದ ಕಾರಣ ಸೂರ್ಯದತ್ತನನ್ನು ಕರೆದುಕೊಂಡು ಅಲ್ಲಿನ ಮಂತ್ರಿಯಾದ ಸುನೀತನೆಂಬ ಮಂತ್ರಿವರ್ಯನು ಬರುವುದಾಗಿ ಹೇಳಿದನು. ಇಂಥಾ ಮಹದುತ್ಸವ ಲಗ್ನವನ್ನು ತ್ಯಜಿಸಿ, ನಿನಗೆ ನಾನು ಮಾಡಿದ್ದ ವಾಗ್ದಾನಕ್ಕೆ ತಪ್ಪದೆ ಬಂದಿರುವೆನು. ಎಲ್ಲಾ ದೋಷಗಳಿಗಿಂತಲೂ ಅನೃತ ದೋಷವೇ ಪ್ರಾಬಲ್ಯವಾದುದರಿಂದ ಅದಕ್ಕೆ ಭಯಪಟ್ಟು ನಿನ್ನ ಅಭೀಷ್ಟವನ್ನು ನೆರವೇರಿಸಿದೆನೆಂದು ನುಡಿಯಲಾಗಿ, ಸೂರ್ಯದತ್ತನು ಆಶ್ಚರ್ಯ

ವನ್ನೈದಿ, ಓಹೋ! ಇದೇನು ವಿಸ್ಮಯವಾಗಿರುವುದು. ಆಂಧ್ರದೇಶಾಧಿಪನ ತನಯನಾದ ಸೂರ್ಯದತ್ತನು ನಾನೇ ಆಗಿರುವೆನು. ಮಂತ್ರಿಯ ದುಷ್ಕಾರ್ಯದಿಂದ ಪ್ರಾಣಗಳನ್ನು ರಕ್ಷಿಸಿಕೊಳ್ಳಲೋಸುಗ ಆ ಪಟ್ಟಣವನ್ನು ಬಿಟ್ಟು, ನನ್ನ ತಾಯಿಯೂ ನಾನು ನಿಮ್ಮ ಪುರಿಯಲ್ಲಿಯೇ ಬಹಳ ದಿವಸಗಳಿಂದ ಇರುವೆವು. ಮಂತ್ರಿಯಾದ ಸುನೀತನು ತನ್ನ ಮಗನನ್ನೇ ನಾನೆಂದು ನಿಮ್ಮ ತಂದೆ ತಾಯಿಗಳಿಗೆ ಅನೃತವನ್ನು ನುಡಿದು ನಿನ್ನನ್ನು ಅವನ ಸುತನಿಗೆ ಮದುವೆಯ ಮಾಡಲೆತ್ನಿಸಿರುವನೆಂದು ಹೇಳಲಾಗಿ, ವಿಚಿತ್ರವತಿಯು ಆನಂದಪರವಶಳಾಗಿ, ಆಹಾ! ದೈವಸಂಕಲ್ಪದಂತೆಯೂ, ಜನರು ಆಡಿಕೊಳ್ಳುತಲಿದ್ದ ಮಾತುಗಳಂತೆಯೂ, ಅನುಕೂಲವಾಯಿತೆಂದು ಆ ಸೂರ್ಯದತ್ತನ ಪಾದಗಳಿಗೆ ನಮಸ್ಕರಿಸಿ, ಆತನನ್ನು ಬಹಳವಾಗಿ ಸ್ತುತಿಸಿದಳು. ಬಳಿಕ ಸೂರ್ಯದತ್ತನೂ ವಿಚಿತ್ರವತಿಯೂ ಈರ್ವರೂ ಓರ್ವರ ಸುಖಗಳನ್ನೋರ್ವರು ಮಾತನಾಡುತ್ತಾ, ಅಲ್ಲಿಂದ ಮುಂದಕ್ಕೆ ಪ್ರಯಾಣ ಮಾಡುವವರಾದರು. ಅತ್ತಲಾ ಸುನೀತನು ಕಾಶೀರಾಜನು ಕಳುಹಿದ ವಿಚಿತ್ರ ಪತ್ರಿಕೆಯನ್ನು ನೋಡಿಕೊಂಡು ತನ್ನ ಕುವರನಿಗೆ ಆ ವಿಚಿತ್ರವತಿಯು ಅನುಕೂಲಿಸುವುದಕ್ಕೆ ದೈವಸಂಕಲ್ಪವು ಈ ರೀತಿಯಾಯಿತೆಂದು ಮಗನ ದೌರ್ಭಾಗ್ಯವನ್ನು ಕುರಿತು ದುಃಖಿಸುತ್ತಲಿದ್ದನು. ಬಳಿಕ ಸೂರ್ಯದತ್ತನೂ, ವಿಚಿತ್ರವತಿಯೂ ಈರ್ವರೂ ಬಹುದೂರವಾಗಿ ಹೋಗುತ್ತಾ ಇರಲು, ಮೂರು ತಿಂಗಳುಗಳಿಗೆ ಆ ಇಂದುವದನೆಯು ಪುಷ್ಪವತಿಯಾಗಿ ಬಹಳವಾಗಿ ದುಃಖಿಸುತ್ತಿರಲಾಗಿ, ರಾಜಕುವರನು, ಎಲೈ ಕಮಲಾಕ್ಷಿಯೇ! ದೈವತಂತ್ರಗಳಿಗೆ ಯಾರು ತಾನೇ ಮಾಡತಕ್ಕದ್ದೇನೆಂದು ರುಚಿಯಾದ ಮಾತುಗಳಿಂದಾಕೆಯನ್ನು ಸಂತೋಷಪಡಿಸಿ, ಜೇನುತುಪ್ಪ ಮೊದಲಾದ ಮಧುರ ಫಲಗಳನ್ನವಳಿಗೆ ತಂದುಕೊಡುತ್ತಾ, ಅಲ್ಲಿಯೇ ಐದು ದಿವಸಗಳಿದ್ದು, ಆಮೇಲೆ ಪ್ರಯಾಣಮಾಡಿ ಹೋಗುತ್ತಾ ಕೆಲವು ದಿವಸಗಳಿಗೆ ನವರತ್ನ ಖಚಿತವಾದ ಅಪರಂಜಿಯ ಧ್ವಜಗಳಿಂದ ಶೋಭಾಯಮಾನವಾಗಿರುವ ಮಂಟಪವನ್ನೂ ಅದರ ಸಮೀಪದಲ್ಲಿ ನಾನಾ ವಿಧವಾದ ಸುಪುಷ್ಪಗಳ ವೃಕ್ಷಗಳಿಂದ ಯುಕ್ತವಾಗಿರುವ ವನವನ್ನೂ ಅದರ ಮಧ್ಯದಲ್ಲಿ ಅತಿರಮಣೀಯವಾಗಿರುವ ಸರಸ್ಸನ್ನೂ ನೋಡಿದವರಾಗಿ, ಕೇವಲ ಸಂತೋಷ ಭರಿತರಾಗಿ, ಈರ್ವರೂ ಕುದುರೆಗಳನ್ನಿಳಿದು, ಆ ಮಂಟಪದ ಒಳಹೊಕ್ಕು, ಅದರ ನಾಲ್ಕು ಮೂಲೆಗಳಲ್ಲಿಯೂ ನಿಲ್ಲಿಸಿರುವ ಅಪರಂಜಿಯ ಬೊಂಬೆಗಳನ್ನು ನೋಡಿ, ಆಶ್ಚರ್ಯವನ್ನು ಹೊಂದಿ ನಾವಿಲ್ಲಿ ಗಾಂಧರ್ವ ವಿವಾಹವನ್ನು ಮಾಡಿಕೊಂಡು ಕ್ರೀಡಾ ಸುಖಗಳನ್ನನುಭವಿಸೋಣವೆಂದು, ಅಲ್ಲಿ ಸುರತಕ್ರೀಡೆಗಳನ್ನನುಭವಿಸಿ, ಸರಸ್ಸಿನಲ್ಲಿ ಜಲಕ್ರೀಡೆಗಳನ್ನಾಡಿ, ಫಲಗಳನ್ನು ಭಕ್ಷಿಸಿ, ನೀರನ್ನು ಕುಡಿಯುತ್ತಾ, ಈ ಪ್ರಕಾರ ಸುಖಗಳನ್ನನುಭವಿಸುತ್ತಿರಲಾಗಿ, ಒಂದಾನೊಂದು

ದಿವಸ ಓರ್ವ ಮುದುಕಿಯು ಆ ಮಂಟಪಕ್ಕೆ ಬಂದು ವಿಚಿತ್ರವತಿಯನ್ನು ನೋಡಿ, ತನ್ನ ಕುವರಿಯೆಂದು ಭ್ರಾಂತಚಿತ್ತಳಾಗಿ, ಓಹೋ ಎಂದು ಅತಿ ತೀವ್ರ ದಿಂದ ಬಂದು, ಅವಳನ್ನು ಹಿಡಿದುಕೊಂಡು ಮುದ್ದಿಟ್ಟು, ನನ್ನನ್ನು ನೀನು ಮೋಸಮಾಡಿ ಬರಬಹುದೇ ಎಂದು ಕೇಳಲಾಗಿ, ಆ ಲತಾಂಗಿಯು ಆಶ್ಚರ್ಯಪಟ್ಟು ಎಲೈ ಮುದುಕಿಯೇ! ನೀನು ಯಾರು? ಈ ರೀತಿಯಾಗಿ ಮನಬಂದಂತೆ ಮಾತನಾ ಡಲು ಕಾರಣವೇನು? ಎಂದು ಕೇಳಲಾಗಿ, ಆ ವೃದ್ಧಳು ತಕ್ಷಣವೇ ತನ್ನ ಭ್ರಾಂತಿ ಯನ್ನು ನೆನೆದು, ತಾಯಿಯೇ! ನಾನು ಕನಕಾಂಗಿಯೆಂಬುವಳು, ನನ್ನ ಪುತ್ರಿ ಯಾದ ರತ್ನಾಂಗಿ ಎನ್ನುವ ವನಿತೆಯು ಏಳುಕೋಟಿ ಧನವನ್ನು ಸಂಪಾದಿಸಿ ಅಕ ಸ್ಮಾತ್ತಾಗಿ ಮೃತಿಯನ್ನೈದಿದಳು. ಮೂರು ತಿಂಗಳುಗಳಿಂದ ದುಃಖ ಸಮುದ್ರ ದಲ್ಲಿ ಮುಳುಗಿ ತಪಿಸುತ್ತಾ, ಈ ಸ್ಥಳವು ಅವಳಿಗೆ ಕ್ರೀಡಾಸ್ಥಾನವಾದುದರಿಂದ ಇಲ್ಲಿರುವಳೇನೋ ಎಂಬುವ ಭ್ರಾಂತಿಯಿಂದ ಬಂದು, ದೂರದಲ್ಲಿಯೇ ನಿನ್ನನ್ನು ಕಂಡು, ನನ್ನ ಕುವರಿಯೆಂದು ಭಾವಿಸಿದೆನು. ಎಲೈ ತಾಯಿಯೇ! ನೀನು ನನ್ನ ತಪ್ಪಿತವನ್ನು ಮನ್ನಿಸಿ, ನಿನ್ನ ವೃತ್ತಾಂತವನ್ನು ಹೇಳೆನಲು, ಅದಕ್ಕಾ ಲತಾಂ ಗಿಯು ತನ್ನ ವರ್ತಮಾನವನ್ನೆಲ್ಲಾ ಅವಳಿಗೆ ಅರುಹಿದಳು. ಆ ಮುದು ಕಿಯು ಆ ರಾಜಪುತ್ರಿಯನ್ನು ಕುರಿತು, ಎಲೈ ಕಮಲಾಕ್ಷಿಯೇ! ನೀನೂ ನಿನ್ನ ಗಂಡನೂ ಈರ್ವರೂ ನನ್ನ ಅಂತಃಪುರಕ್ಕೆ ಬಂದು ಅಲ್ಲಿಯೇ ಕೆಲವು ದಿವಸಗಳಿದ್ದು ನನಗೆ ದುಃಖೋಪಶಾಂತಿಯನ್ನು ಮಾಡಬೇಕು ನನ್ನ ಮನೆಯಲ್ಲಿ ಯಾವದಕ್ಕೂ ನಿಮಗೆ ಏನೂ ಕೊರತೆಯಿಲ್ಲ. ನನ್ನ ಪ್ರಾರ್ಥನೆಯನ್ನು ಸಾರ್ಥಕಮಾಡಬೇ ಕೆಂದು ನಾನಾಪ್ರಕಾರಗಳಿಂದ ಪ್ರಾರ್ಥಿಸಿ, ಈರ್ವರನ್ನೂ ಕಾಶ್ಮೀರದೇಶಕ್ಕೆ ಕರೆ ತಂದು ತನ್ನ ಅಂತಃಪುರವನ್ನೈದಿ, ಮಜ್ಜನ ಭೋಜನಾದಿಗಳನ್ನು ನೆರವೇರಿಸಿ ದಳು. ಆ ದಿನ ರಾತ್ರಿ ವಿಚಿತ್ರವತಿಯು ಕನಕಾಂಗಿ ಕೊಟ್ಟ ಬೀಗಗಳನ್ನು ತೆಗೆ ದುಕೊಂಡು ಅವಳ ಪೆಟ್ಟಿಗೆಗಳನ್ನೆಲ್ಲಾ ತೆರೆದು, ಅದರಲ್ಲಿರುವ ಅನೇಕ ಆಭರಣ ಗಳನ್ನೂ, ನಾನಾವಿಧವಾದ ರತ್ನಗಳನ್ನೂ ತನ್ನ ಗಂಡನಿಗೆ ತೋರಿಸಿ, ಅಹಹಾ! ಈ ಅಂತಃಪುರದ ಶೃಂಗಾರವೂ, ರಚನೆಯು ಇವುಗಳನ್ನು ನೋಡಿದರೆ ರಾಜಗೃ ಹವನ್ನು ತಿರಸ್ಕರಿಸುವಂತಿರುವುದು ಎಂದು ಹೇಳುತ್ತಾ, ಈರ್ವರೂ ಶಯನಗೃಹ ವನ್ನು ಪೊಕ್ಕು ಅಲ್ಲಿ ಸುವರ್ಣಮಯವಾದ ಗೋಡೆಗಳಲ್ಲಿ ಪ್ರಕಾಶಿಸುತಲಿರುವ ಅತಿವಿಚಿತ್ರಗಳಾದ ಚಿತ್ರಪಟಗಳನ್ನೂ, ರತ್ನಮಯಗಳಾದ ದೀಪಸ್ತಂಭಗಳನ್ನೂ, ನಾನಾವಿಧಮಾದ ಸುವರ್ಣಪಾತ್ರೆಗಳನ್ನೂ, ಈ ಮಧ್ಯೆ ದೇವಮಾನದಂತೆ ಪ್ರಕಾಶಿಸುತಲಿರುವ ಭಂಗಾರದ ಮಂಚವನ್ನೂ, ಅದರಮೇಲೆ ಹಾಕಲ್ಪಟ್ಟಿರುವ ಹಂಸತೂಲಿಕಾತಲ್ಪವನ್ನೂ, ಅದರ ಎರಡು ಪಾರ್ಶ್ವಗಳಲ್ಲಿಯೂ ಇರುವ ರೇಷ್ಮೆ ಯದಿಂಬುಗಳನ್ನೂ, ಮಂಚದ ಸುತ್ತಲೂ ಕಟ್ಟಲ್ಪಟ್ಟಿರುವ ಅಣಿಮುತ್ತುಗಳ ಸರ

ಗಳನ್ನೂ ನೋಡಿ ಆಶ್ಚರ್ಯಭರಿತರಾಗಿ, ಈರ್ವರೂ ಆ ಹಾಸಿಗೆಯಮೇಲೆ ಮಲಗಿ ಅನೇಕ ಸುಖಗಳನ್ನು ಅನುಭವಿಸುತ್ತಾ ಇರಲು, ವಿಚಿತ್ರವತಿಗೆ ಮೂರನೆಯ ಝಾಮದಲ್ಲಿ ನಿದ್ರೆಯಿಂದ ಎಚ್ಚರವಾಗಲು, ತಾನು ಪೂರ್ವಗದಿವಸ ಆ ಮಂಟಪದಲ್ಲಿ ಮರೆತುಬಂದ ಚಂದ್ರಹಾರವು ಜ್ಞಾಪಕಕ್ಕೆ ಬಂದು, ಗಂಡನನ್ನು ಕುರಿತು, ಎಲೈ ಪ್ರಾಣೇಂದ್ರನೇ! ನಿನ್ನೆಯರಾತ್ರಿ ಉಪರತಿಯ ಸಮಯದೊಳು ನನ್ನ ಕೊರಳಲ್ಲಿದ್ದ ಚಂದ್ರಹಾರವನ್ನು ತೆಗೆದು ಅಲ್ಲಿ ದಕ್ಷಿಣದಿಕ್ಕಿನೊಳಿರುವ ಪ್ರತಿಮೆಯ ಕೊರಳಲ್ಲಿ ಹಾಕಿದವಳು ತರದೆ ಮರೆತುಬಂದೆನೆನಲು, ಸೂರ್ಯದತ್ತನು ಗಾಬರಿಬಿದ್ದು ಆಹಹಾ! ಆ ಹಾರವು ರಾಜರು ಧರಿಸತಕ್ಕದ್ದಾದುದರಿಂದ ಅವಶ್ಯಕವಾಗಿ ತರಬೇಕೆಂದು ನಿಶ್ಚೈಸಿ, ನಾನು ಅಲ್ಲಿಗೆ ಹೋಗಿ ಜಾಗ್ರತೆಯಾಗಿ ತೆಗೆದುಕೊಂಡು ಬರುವೆನೆಂದು ಪ್ರಯಾಣಮಾಡಲು, ವಿಚಿತ್ರವತಿಯು ಈಗ ಅಲ್ಲಿ ಹೋಗಲಿಕ್ಕೆ ಸಮಯವಲ್ಲನೆಂದು ಎಷ್ಟುವಿಧವಾಗಿ ಗಂಡನನ್ನು ತಡೆದರೂ ಆತನು ಬೆಳಗಾಗುವವರೊಳಗಾಗಿ ಬರುವೆನೆಂದು ಹೇಳಿ ಕುದುರೆಯನ್ನೇರಿ, ತೀವ್ರವಾಗಿ ಹೋಗಿ, ಹೆಂಡತಿ ಹೇಳಿದ ಗುರ್ತಿನಪ್ರಕಾರ ಹಾರವನ್ನು ಹುಡುಕುತ್ತಿರಲಾಗಿ, ಸ್ವಲ್ಪನೊತ್ತಿಗೆ ಆ ಹಾರವು ಸಿಕ್ಕಿದ್ದರಿಂದ ಅದನ್ನು ತೆಗೆದುಕೊಂಡು, ತನ್ನ ಕೊರಳಿಗೆ ಹಾಕಿಕೊಂಡು ಕುದುರೆಯನ್ನೇರಿ ಬರುತ್ತಾ ಇದ್ದನು. ಆ ಚಂದ್ರಹಾರಕ್ಕೆ ಒಂದು ಚಿಕ್ಕದಾದ ನಾಗರಹಾವು ಸುತ್ತಿಕೊಂಡಿದ್ದು ದೈವವಶದಿಂದ ಸೂರ್ಯದತ್ತನ ಕೊರಳನ್ನು ಕಚ್ಚಿತು. ಅದರ ವಿಷಜ್ವಾಲೆಯು ತಲೆಗೇರಿ ಕುದುರೆಯಮೇಲೆ ಕೂತಿದ್ದವನು ಕೂತಹಾಗೆಯೇ ನಿಶ್ಚೇಷ್ಟಿತನಾದನು. ಕುದುರೆಯು ತನ್ನ ಯಜಮಾನನು ಪ್ರಜ್ಞೆಯಿಲ್ಲದೆ ಇರುವುದನ್ನು ಚಲನೆಯಿಂದ ತಿಳಿದು, ಮೆಲ್ಲಮೆಲ್ಲಗೆ ಪಟ್ಟಣದೊಳಕ್ಕೆ ಬಂದು, ತನ್ನ ನಿವಾಸಸ್ಥಾನವು ತಿಳಿಯದೆ ಮತ್ತೊಂದು ಅಂತಃಪುರವಬಳಿ ನಿಂತಿತು. ಆ ಮನೆಯೊಡನಳಾದ ಜ್ಞಾನಾಂಬಾ ಎನ್ನುವ ವೇಶ್ಯೆಯು ಹೊರಗೆ ಬಂದು, ದಿವ್ಯಸುಂದರ ತೇಜಸ್ಸಿನಿಂದ ಒಪ್ಪುತಲಿರುವ ರಾಜೇಂದ್ರತನಯನನ್ನು ನೋಡಿ, ಈತನು ಬಳಲಿಕೆಯಿಂದ ಶೋಷಿಸಿರುವನೆಂದು ಭಾವಿಸಿ, ಪರಿಚಾರಕರಿಂದ ಅವನನ್ನು ಒಳಕ್ಕೆ ತೆಗಿಸಿಕೊಂಡುಹೋಗಿ, ಹಾಸಿಗೆಯಮೇಲೆ ಮಲಗಿಸಿ, ನಾನಾವಿಧಗಳಾದ ಶೈತ್ಯೋಪಚಾರಗಳನ್ನು ಮಾಡಿದಾಗ್ಯೂ ಆತನು ಚಲಿಸದೆ ಇರುವದನ್ನು ಕಂಡು ಆ ವೇಶ್ಯೆಯು ದುಃಖಾಶ್ಚರ್ಯವುಳ್ಳವಳಾಗಿ, ಕೇವಲ ವ್ಯಸನಪಡುತ್ತಾ, ಭಗವಂತನನ್ನು ಧ್ಯಾನಿಸುತಲಿದ್ದಳು. ಇಷ್ಟರೊಳಾ ವಿಚಿತ್ರವತಿಯು ತನ್ನ ಗಂಡನು ಬಾರದೇ ಇರುವುದರಿಂದ ಭಯಪಟ್ಟು ಕನಕಾಂಗಿಗೆ ಹೇಳಿದಳು. ಆ ಮುದುಕಿಯು ಮಂಟಪದ ಹತ್ತಿರಕ್ಕೆ ಆಳುಗಳನ್ನು ಕಳುಹಿಸಲಾಗಿ, ಅವರು ಹೋಗಿ ಅಲ್ಲಿ ರಾಜತನಯನನ್ನು ಕಾಣದೆ, ಸಂಗತಿಯನ್ನು ಬಂದು ಹೇಳಲಾಗಿ, ಮುದುಕಿಯು ಜೋಯಿಸರನ್ನು ಕರೆಸಿ,

ಅವರನ್ನು ಪ್ರಶ್ನೆಕೇಳಲು, ಅವರು ಪ್ರಶ್ನೆ ಲಗ್ನವನ್ನು ಹಿಡಿದು ಶೋಧಿಸಿದ ತರುವಾಯ, ಎಲೈ ಮುದುಕಿಯೇ! ಲಗ್ನವನ್ನು ಚೆನ್ನಾಗಿ ಶೋಧನೆ ಮಾಡಿದೆವು. ರಾಜಪುತ್ರನಿಗೆ ರಾಹುಗ್ರಹದಿಂದ ಅಪಾಯವು ಸಂಭವಿಸಿ, ಗುರುವಿನಿಂದ ನೋಡಲ್ಪಟ್ಟದ್ದರಿಂದ ಪ್ರಾಣಭಯವು ಕಳೆದುಹೋಗಿ, ಸುಖವನ್ನನುಭವಿಸುತ್ತಾ, ಸಮೀಪದಲ್ಲಿಯೇ ಇರುವನು. ಕೆಲವು ದಿವಸಗಳ ಒಳಗಾಗಿ ಇಲ್ಲಿಗೆ ಬಂದು ಸೇರುವನೆಂದು ಹೇಳಿದರು. ವಿಚಿತ್ರವತಿಯು ಸಮಾಧಾನಪಡದವಳಾಗಿ ಕೇವಲ ದುಃಖಿಸುತ್ತಲಿದ್ದಳು.

ಅತ್ತಲಾ ಜ್ಞಾನಾಂಬಾ ಎಂಬ ವೇಶ್ಯೆಯ ಮನೆಗೆ ಧರ್ಮದೇವತೆಯು ಮನುಷ್ಯಾಕಾರದಿಂದ ಬಂದು, ಆ ಸರ್ಪವನ್ನು ಹಿಡಿದುಕೊಂಡು ಮಂತ್ರಿಸಿ, ಸೂರ್ಯದತ್ತನನ್ನು ಬದುಕಿಸಿ, ಬಳಿಕ ತಾನು ಅಂತರ್ಧಾನನಾಗಲಾಗಿ, ಜ್ಞಾನಾಂಬೆಯು ಆ ಮಂತ್ರಜ್ಞನು ಎಲ್ಲಿಹೋದನೆಂದು ಹುಡುಕಿಸಿದರೂ ಆತನು ಹೋದ ಮಾರ್ಗವೇ ತಿಳಿಯದ್ದರಿಂದ ಆಶ್ಚರ್ಯವನ್ನು ತಾಳ್ದು, ಅಹಾ! ನನ್ನ ಭಾಗ್ಯದ ದೈವವು ಬಂದು ಈತನನ್ನು ಬದುಕಿಸಿ ಹೋಯಿತೆಂದು ಬಹಳವಾಗಿ ಸಂತಸಗೊಂಡು, ರಾಜಪುತ್ರನನ್ನು ಆಲಿಂಗನ ಮಾಡಿಕೊಂಡು, ಆತನಿಗೆ ನಡೆದ ವರ್ತಮಾನವನ್ನೆಲ್ಲಾ ತಿಳುಹಿ, ಮಜ್ಜನ ಭೋಜನಾದಿಗಳನ್ನು ಮಾಡಿಸಿ, ಆತನೊಡನೆ ಸಂಭೋಗ ಸುಖವನ್ನನುಭವಿಸುತ್ತಾ, ತನ್ನಲ್ಲಿದ್ದ ವಿಶಿಷ್ಟ ದ್ರವ್ಯವನ್ನೂ ವ್ಯಯ ಮಾಡುತ್ತಾ, ನಾನಾವಿಧವಾದ ಉಪಚಾರಗಳಿಂದಾತನನ್ನು ಪೋಷಿಸುತಲಿದ್ದಳು. ಸೂರ್ಯದತ್ತನು ವಿಚಿತ್ರವತಿಯನ್ನು ನೆನೆದು ದುಃಖಿಸುತ್ತಾ ಮನದಲ್ಲಿ ಇಂಥಾ ಉಪಕಾರ ಮಾಡಿದ ವೇಶ್ಯೆಗೆ ಮೋಸಮಾಡಿ ಹೋಗುವದು ಅನುಚಿತವೆಂದು ಭಾವನೆಮಾಡಿ ಅಲ್ಲಿಯೇ ಇರುತ್ತಿದ್ದನು. ಆ ಜ್ಞಾನಾಂಬೆಗೆ ತಾಯಿಯಾದ ವಿಮಲಾಂಬೆ ಎಂಬುವಳು ತನ್ನ ಪುತ್ರಿಯು ಧನವನ್ನೆಲ್ಲಾ ಖರ್ಚುಮಾಡುತಲಿರುವುದನ್ನು ನೋಡಿ ಸಹಿಸಲಾರದೆ, ಒಂದಾನೊಂದು ದಿವಸ ಕುವರಿಯಾದ ಜ್ಞಾನಾಂಬೆಯನ್ನು ನೋಡಿ, ಎಲೈ ಪುತ್ರಿಕಾರತ್ನವೇ! ಮನಸ್ಸು ಬಂದ ಹಾಗೆ ಕಾರಣವಿಲ್ಲದೆ ಧನವನ್ನು ಖರ್ಚುಮಾಡುತ್ತಾ ಕಡೆಗೆ ದಾರಿದ್ರ್ಯಪದವಿಯನ್ನೈದುವದು ವೇಶ್ಯೆಯರಿಗೆ ಯೋಗ್ಯವಾದ ಕಾರ್ಯವೇ? ನೀನು ಮಾಡತಕ್ಕ ಕಾರ್ಯಗಳಿಂದ ಮಹತ್ತಾದ ಸಂಕಟವು ಸಂಭವಿಸುವುದೆಂದು ನುಡಿಯಲಾಗಿ, ಜ್ಞಾನಾಂಬೆಯು ತಾಯಿಯ ಮೇಲೆ ಕೋಪಿಸಿಕೊಂಡು ಎಲೈ ತಾಯಿಯೇ! ನಾನು ಸ್ವಯಾರ್ಜಿತವಾಗಿ ಸಂಪಾದಿಸಿದ ವಿತ್ತವನ್ನು ಯಾವರೀತಿಯಿಂದಲಾದರೂ ವಿನಿಯೋಗ ಮಾಡುವ ಪ್ರಸಂಗದಲ್ಲಿ ಎಂದಿಗೂ ಹಿಂತಿನ ಹೇಳಿಕೆಯನ್ನು ನಿನ್ನ ಕೇಳಬೇಕಾಗಿಯೂ ಇರುವುದಿಲ್ಲ. ಇನ್ನುಮೇಲೆ ನೀನೀ ವಿಚಾರವನ್ನು ಮಾತನಾಡಕೂಡದೆಂದು ಕಠಿಣವಾಗಿ ಮಾತಾಡಿದಳು. ವಿಮಲಾಂಬೆಯು ಆ ಮಾತುಗ

ಳನ್ನು ಕೇಳಿ, ತನ್ನ ಮನಸ್ಸಿನಲ್ಲಿ ಇವಳಿಗೆ ತಕ್ಕ ಉಪಾಯವನ್ನು ಮಾಡಬೇಕೆಂದು ಯೋಚಿಸಿ, ಅವಳಲ್ಲಿಯೂ ಸೂರ್ಯದತ್ತನಲ್ಲಿಯೂ ಅಧಿಕವಾದ ವಿಶ್ವಾಸವನ್ನೇ ತೋರಿಸುತ್ತಾ, ಒಬ್ಬಾನೊಬ್ಬ ಮಂತ್ರಗಾತಿಯ ಮೂಲಕದಿಂದ ತಾನು ಒಂದು ಮಾಯಾವಿಧಾನವಾದ ಮಂತ್ರವನ್ನು ಕಲಿತ, ಅದರಿಂದ ಒಂದು ಮೇಣದ ಉಂಡೆಯನ್ನು ಮಾಡಿಸಿಕೊಂಡು, ಅದನ್ನು ಮನಸ್ಸಿನಲ್ಲಿಯೇ ಇಟ್ಟುಕೊಂಡು, ಒಂದಾನೊಂದು ದಿವಸ ಜ್ಞಾನಾಂಬೆಯನ್ನು ಕುರಿತು, ಎಲೈ ಪುತ್ರಿಯೇ! ಅಳಿಯನಾದ ಸೂರ್ಯದತ್ತನಿಗೆ ಜುಟ್ಟಿನೊಳು ಪುಷ್ಪವಂ ಸುತ್ತಬೇಕೆಂದು ಹೇಳಿ ಮೋಹವನ್ನು ಬಲವಾಗಿ ತೋರಿಸುತ್ತಾ, ಆ ಸೂರ್ಯದತ್ತನು ಮಜ್ಜನ ಮಾಡಿದ ಬಳಿಕ ಅವನು ಜುಟ್ಟಿಗೆ ಪುಷ್ಪದ ಸರವನ್ನು ಸುತ್ತುತ್ತಾ, ಆ ಮಧ್ಯದಲ್ಲಿ ತನ್ನ ಬಳಿಯೊಳಿದ್ದ ಮಾಯಾಮಂತ್ರ ಸಂಬಂಧವಾದ ಮೇಣದ ಉಂಡೆಯನ್ನು ಅವನ ಜುಟ್ಟಿನ ಮಧ್ಯದೊಳು ಸೇರಿಸಿದವಳಾದಳು. ತಕ್ಷಣವೇ ರಾಜಪುತ್ರನು ಒಂದು ಗಿಳಿಯಾಗಿ, ಅಲ್ಲಿ ನಿಲ್ಲದೆ, ಬಾಗಿಲನ್ನು ದಾಂಟಿ ಪ್ರತ್ರನೆ ಹೊರಕ್ಕೆ ಹಾರಿಹೋದನು. ಅದನ್ನು ನೋಡಿದ ಜ್ಞಾನಾಂಬೆಯು, ಓಹೋ ಇದೇನೋ ಮೋಸಬಂತೆಂದು ತಿಳಿದು, ಇದು ತಾಯಿಯಿಂದಲೇ ಸಂಭವಿಸಿದ ಕಾರ್ಯವೆಂದೂಹಿಸಿ, ತಾಯಿಯಮೇಲೆ ಬಹಳವಾದ ಆಗ್ರಹವನ್ನು ಮಾಡಿ, ಆಕೆಯನ್ನು ನಾನಾವಿಧವಾಗಿ ದೂಷಿಸುತ್ತಾ, ಸೂರ್ಯದತ್ತನ ಗುಣಾತಿಶಯಗಳನ್ನು ನೆನೆನೆನೆದು ಹಂಬಲಿಸುತ್ತಾ, ಬಹಳವಾಗಿ ರೋಧನವನ್ನು ಮಾಡುತಲಿದ್ದಳು. ದ್ರೋಹಿಯಾದ ತಾಯಿಯು ತಾನು ಏನೂ ಅರಿಯದವಳಂತೆ ನಟಿಸುತ್ತಾ, ನಿದ್ರಾಹಾರಗಳನ್ನು ತೊರೆದು ದುಃಖಿಸುತ್ತಲಿರುವ ಮಗಳನ್ನು ಸಂತೈಸುತ್ತಾ ಇದ್ದಳು. ಅತ್ತಲಾ ಶುಕವು, ಆ ಪಟ್ಟಣದ ಸುತ್ತಲೂ ತಿರುಗುತ್ತಾ, ಕೀರದ ಗಾನವನ್ನು ಮಾಡುತ್ತಾ, ಅಂತರಿಕ್ಷದಲ್ಲಿ ಹಾರಾಡುತ್ತಾ, ಆ ದೇಶದ ರಾಜಪುತ್ರಿಯ ಅಂತಃಪುರದ ಸಮೀಪದೊಳು ಬಂದು ನಾಲಲಾಗಿ, ಆ ರಾಜಪುತ್ರಿಯು ಅದನ್ನು ಕಂಡು, ತನ್ನ ದೂತಿಯರನ್ನು ಕುರಿತು, ಎಲೈ ದೂತಿಯರೇ! ಈ ಗಿಳಿಯನ್ನು ನೋಡಿದರೆ ಸಾಕಿದ ಗಿಳಿಯಂತೆ ಕಾಣುವದು. ಇದನ್ನು ಏನಾದರೂ ಮಾಡಿ ಹಿಡಿಯಬೇಕೆಂದು ಯೋಚಿಸಿ, ಮೆಲ್ಲಮೆಲ್ಲಗೆ ಆ ಗಿಳಿಯ ಸಮೀಪವನ್ನೈದಿ ಕೈಚಾಚಲು, ಅದು ಕೈಗೆ ಸಿಕ್ಕಲು, ಹಿಡಿದುಕೊಂಡು ನವರತ್ನಖಚಿತವಾದ ತನ್ನ ಭಂಗಾರದ ಪಂಜರದೊಳಗೆ ಅದನ್ನು ಇಟ್ಟು, ವಿವಿಧವಾದ ಹಣ್ಣುಗಳನ್ನೂ, ಹಾಲನ್ನೂ ಅದಕ್ಕೆ ಆಹಾರವಾಗಿ ಕೊಡುತ್ತಾ, ಅದರ ವಿಚಿತ್ರತರವಾದ ಮಧುರವಾಕ್ಕುಗಳನ್ನು ಕೇಳಿ ಆನಂದಿಸುತ್ತಾ, ಅದನ್ನು ಕುರಿತು, ಎಲೈ ರಾಮನೇ! ನೀನು ಮಾತನಾಡೆಂದು ಅದರ ಕೈಲಿ ಮಧುರವಾಕ್ಕನ್ನು ನುಡಿಸುತ್ತಾ, ಅತ್ಯಂತವಾದ ಆನಂದವನ್ನೈದುತ್ತಾ, ತನ್ನ ಭುಜಗಳಮೇಲೆಯೂ, ಕೈಗಳಮೇಲೆಯೂ, ಅದನ್ನು

ಕುಳ್ಳಿರಿಸಿಕೊಂಡು ಮುದ್ದಾಡುತ್ತಾ ಈರೀತಿಯಾಗಿ ಆನಂದದಲ್ಲಿದ್ದಳು. ಒಂದಾ ನೊಂದು ದಿವಸ ಆ ರಾಜಪುತ್ರಿಯು ಆ ಶುಕದೊಡನೆ ಆಟವನ್ನಾಡುತ್ತಾ ಇರುವಾಗ ಅರ್ಧರಾತ್ರಿಯ ಸಮಯವಲ್ಲಿ ಅದರ ತಲೆಯನ್ನು ಸವರಿ (ಬಾಚಿ) ಮುದ್ದಾಡುವ ಸಮಯದಲ್ಲಿ ಅದರ ತಲೆಯೊಳಿದ್ದ ಮೇಣದ ಉಂಡೆಯು ದೈವಾಜ್ಞೆಯಿಂದ ನೆಲದಮೇಲಕ್ಕೆ ಬಿದ್ದ ಕ್ಷಣದಲ್ಲಿಯೇ ಶುಕವು ಮಾನುಷಶರೀರವನ್ನು ತಾಳ್ದು, ದಿವ್ಯತೇಜಃಪುಂಜನಾದ ಪೂರ್ವದ ರಾಜಪುತ್ರನಾಗಿ ರಾಜಪುತ್ರಿಯ ಎದುರಿಗೆ ನಿಲ್ಲಲು ಆಗ ಇಂದುಮುಖಿಯು ಆಶ್ಚರ್ಯದಿಂದ ಕಣ್ಣುಗಳನ್ನು ಮುಚ್ಚಿಕೊಂಡು, ಓಹೋ ! ಇದೇನಾಶ್ಚರ್ಯ ಎಲೈ ಸುಂದರಾಂಗನೆ ನೀನಾರೆಂದು ಅತಿವಿನಯ ಭಯಭಕ್ತಿಯಿಂದಾತನನ್ನು ಕೇಳಲು, ರಾಜಪುತ್ರನು ತನ್ನ ಸಕಲ ವೃತ್ತಾಂತವನ್ನು ತಿಳುಹಿ, ಅವಳಿಗುಂಟಾಗಿದ್ದ ಭಯವನ್ನು ನಾಚಿಕೆಯನ್ನೂ ಹೋಗಲಾಡಿಸಿ ಈರ್ವರೂ ಸುರತಕ್ರೀಡೆಗಳ ಸುಖಾನಂದದಲ್ಲಿರಲು, ಬೆಳಗಿನ ಜಾಮದಲ್ಲಿ ರಾಜಪುತ್ರಿಯು ಮೈಣದ ಉಂಡೆಯನ್ನು ಪೂರ್ವದಂತೆ ರಾಜತನಯನ ಜುಟ್ಟಿನಲ್ಲಿಟ್ಟು ಶುಕವಾದನಂತರ ಪಂಜರದೊಳಗೆ ಯಥಾಪ್ರಕಾರವಾಗಿ ಅದನ್ನು ಸೇರಿಸಿ, ರಾತ್ರಿಯಾಗುತಲೇ ಮೇಣದ ಉಂಡೆಯನ್ನು ತೆಗೆದು ರಾಜಪುತ್ರನೊಂದಿಗೆ ಕ್ರೀಡಾವಿನೋದಗಳನ್ನಾಡುತ್ತಾ ಈ ಪ್ರಕಾರವಾಗಿ ಅನೇಕ ದಿನಗಳು ಕಳೆಯುತ್ತಾ ಬರಲು, ರಾಜತನಯಳಿಗೆ ದೈವಾನುಗ್ರಹದಿಂದ ಗರ್ಭಚಿಹ್ನೆಯುಂಟಾಗಿ ಐದಾರುತಿಂಗಳಾಗುತ್ತಾ ಬಂದ ಕಾರಣ ಎಂದಿಗೂ ಅಂತರಂಗದಲ್ಲಿ ಆಛ್ಛಾದಿತವಾಗದಂಥಾ ಈ ವಾರ್ತೆಯು ರಾಜಪುತ್ರಿಯ ತಂದೆ ತಾಯಿಗಳಿಗೆ ಕ್ರಮವಾಗಿ ತಿಳಿದು ಬಂದಿತು. ಆಗ ಅರಸು ಪುತ್ರಿಯ ಅಂತಃಪುರದ ಬಳಿ ಕಾವಲಿದ್ದ ಭಟರನ್ನು ಕರೆಸಿ, ಎಲೈ ದೂತರೇ! ನಮ್ಮ ಪುತ್ರಿಯ ಅಂತಃಪುರಕ್ಕೆ ಪ್ರವೇಶಿಸಿದವನಾರೋ ಅವನನ್ನು ಒಂದು ತಿಂಗಳೊಳಗಾಗಿ ಕರೆತಂದು ನನ್ನೆದುರಿಗೆ ಬಿಡದಿದ್ದರೆ ನಿಮ್ಮನ್ನೆಲ್ಲಾ ಮರಣದಂಡನೆಗೆ ಗುರಿಮಾಡುವೆನೆಂದು ಆಜ್ಞೆಯನ್ನು ಮಾಡಿ ಕಳುಹಿದನು. ಅಷ್ಟರಲ್ಲಿ ಒಬ್ಬಾನೊಬ್ಬ ಮಂತ್ರವಾದಿಯಾದ ದೂತನು ಎದ್ದು ರಾಜನನ್ನು ಕುರಿತು, ಎಲೈ ರಾಜಾಧಿರಾಜನೇ ! ನಾನು ಇದರ ಮೂಲವನ್ನರಿತು ಬರುವೆನೆಂದು ಹೇಳಿ, ರಾಜನ ಅಪ್ಪಣೆಯನ್ನು ತೆಗೆದುಕೊಂಡು, ಕೂಡಲೇ ತಾನು ಮಾಯಾರೂಪವನ್ನು ತಾಳಿ ರಾಜಪುತ್ರಿಯ ಅಂತಃಪುರಮಂ ಪ್ರವೇಶಿಸಿ ಅಲ್ಲಿ ಶುಕರೂಪದೊಳಿರುವ ರಾಜನಂದನನನ್ನು ಕಂಡು, ಅದರ ವೃತ್ತಾಂತವನ್ನೆಲ್ಲಾ ರಾಜನಿಗೆ ತಿಳುಹಿದನು. ಬಳಿಕ ರಾಜನು ಆಶ್ಚರ್ಯಭರಿತನಾಗಿ ಹೆಂಡತಿಯನ್ನು ಕರೆದುಕೊಂಡು ಪುತ್ರಿಯ ಅಂತಃಪುರಕ್ಕೆ ಹೋಗಿ ಅವಳನ್ನು ಕುರಿತು, ಎಲೈ ಪೂರ್ಣೇಂದುಮುಖಿಯೇ ! ನಿನ್ನ ಅಂತಃಪುರಕ್ಕೆ ಬರುವ ಮನುಜನಾರು ?

ನೀನು ಗರ್ಭವನ್ನು ಧರಿಸಿದ ಕಾರಣದ ನಿಜವೇನು? ರಾಜವಂಶೋತ್ಪನ್ನರಾದ ನಮಗೆ ಲೋಕಾಪವಾದವನ್ನುಂಟು ಮಾಡಿದೆಯಲ್ಲ! ಯಥಾರ್ಥವನ್ನು ನುಡಿ ಎಂದು ಕೇಳಲಾಗಿ, ಪುತ್ರಿಯು ತಂದೆಯನ್ನು ನೋಡಿ, ಎಲೈ ತಾತನೇ! ಈ ಅಂತಃಪುರದಲ್ಲಿರುವ ದಾದಿಯರು ಮತ್ತು ಈ ಪಂಜರದ ಕೀರವು ಇವರುಗಳನ್ನಲ್ಲದೆ ಮತ್ತಾರನ್ನೂ ನಾನರಿಯೆನೆಂದು ತಲೆಯನ್ನು ಬಗ್ಗಿಸಿಕೊಂಡು ಉತ್ತರ ಹೇಳಿದಳು. ಆಗ ರಾಜನು, ಎಲೈ ಪುತ್ರಿಕಾರತ್ನವೇ! ಆ ಪಂಜರದ ಗಿಳಿಯನ್ನಿಲ್ಲಿಗೆ ಕರೆತರುವವಳಾಗೆನಲು ಆಕೆಗೆ ಸಂಶಯವುಂಟಾಗಿ, ಈ ಪಕ್ಷಿಯನ್ನು ಪ್ರಾಣಸಹಿತವಾಗಿ ಬಿಡುವುದೇ ಧರ್ಮಮಾರ್ಗವೆಂದೆಣಿಸಿ, ಆ ಪಂಜರದ ಬಳಿಗೆ ಬಂದು, ಎಲೈ ರಾಮನೇ! ನೀನೆಲ್ಲಿಯಾದರೂ ತೆರಳೆಂದು ಹೇಳಿ ಪಂಜರದ ಬಾಗಿಲನ್ನು ತೆಗೆದು ದುಃಖಿಸುತಲಿದ್ದಳು. ಅಷ್ಟರೊಳು ಆ ಕೀರವು ಅಂತಃಪುರದಿಂದ ಹೊರಗೆ ಹಾರಿ ಹೋಗಲಾರಂಭಿಸಿತು. ಆಗ ರಾಜನ ಬಳಿಯೊಳಿದ್ದ ಮಂತ್ರವಾದಿಯು ರಾಜನನ್ನು ಕುರಿತು, ಎಲೈ ಇಳೆಯಾಣ್ಮನೇ! ನಾನು ಆ ಕೀರವನ್ನು ಏನಾದರೂ ಸಾಹಸಮಾಡಿ ತರುವೆನು, ನೀವು ಭಯಪಡಬೇಡಿ ಎಂದು ನುಡಿದು, ತಾನು ಡೇಗೆಹಕ್ಕಿಯ ರೂಪವನ್ನು ತಾಳ್ದು ಆ ಕೀರದ ಬೆನ್ನಟ್ಟಿ ಹೋಗುತ್ತಿರಲಾಗಿ, ಕಾಶ್ಮೀರಪತಿಯು ನಿಜವನ್ನು ಗ್ರಹಿಸಿದವನಾಗಿ ಕುವರಿಯನ್ನು ನೋಡಿ, ಎಲೈ ಪುತ್ರಿಯೇ! ನಿನ್ನ ಕೀರವನ್ನು ನಾನು ತರಿಸಿ ಕೊಡುವೆನು ನೀನು ಚಿಂತಿಸಬೇಡವೆಂದು ಅವಳನ್ನು ಸಮಾಧಾನಪಡಿಸಿ ತಾನು ಪತ್ನೀಸಮೇತನಾಗಿ ಅಂತಃಪುರವನ್ನೈದಿ ಪ್ರಾಪ್ತವಾದ ಅಪಯಶಸ್ಸಿಗೆ ವಿಧಿಯನ್ನು ದೂರುತಲಿದ್ದನು.

ಅತ್ತ ರಾಜಶರೀರವನ್ನು ಹೊಂದಿರುವ ಕೀರವು ಬೆನ್ನಟ್ಟಿ ಬರುತಲಿರುವ ಡೇಗೆಹಕ್ಕಿಯ ಕೈಗಳಿಗೆ ಸಿಕ್ಕದೆಯೂ, ಅನೇಕವಾದ ಅರಣ್ಯಗಳನ್ನು ದಾಟುತ್ತ ನಾನಾವಿಧಗಳಾದ ಪರ್ವತ, ದುರ್ಗ ಪ್ರದೇಶಗಳನ್ನು ಕಳೆಯುತ್ತಾ, ಕಡೆಗೆ ಆ ಪಕ್ಷಿಯ ಕಣ್ಣುಗಳಿಗೆ ಕಾಣಿಸದಂತೆ ಒಂದಾನೊಂದು ಸ್ಥಳದಲ್ಲಿ ಮರೆಯಾಗಿ ಅಲ್ಲಿರುವ ನರನಾರಾಯಣಾಶ್ರಮನ್ನು ಕಂಡು ಆ ಸ್ಥಾನವನ್ನೈದಿತು. ಆಗ ಆ ನಾರಾಯಣಋಷಿಯ ಮಹಿಮಾತಿಶಯದಿಂದ ಕೀರಕ್ಕೆ ಪೂರ್ವದ ರಾಜಪುತ್ರನ ಆಕಾರವು ಪ್ರಾಪ್ತವಾಗಿ ಶುಕರೂಪವು ತೊಲಗಿ ತಲೆಯೊಳಿದ್ದ ಮೇಣದ ಉಂಡೆಯು ಕೆಳಕ್ಕೆ ಬೀಳಲು, ಅದನ್ನು ನೋಡಿದ ರಾಜೇಂದ್ರತನಯನು ಮಹದಾಶ್ಚರ್ಯಭರಿತನಾಗಿ ಆ ಮೇಣದ ಉಂಡೆಯನ್ನು ಭದ್ರವಾಗಿ ತನ್ನ ಬಳಿಯೊಳಿಟ್ಟುಕೊಂಡು ಆ ಮಹರ್ಷಿಗಳ ಪಾದಕಮಲಗಳ ಮೇಲೆ ಬಿದ್ದು, ಬಹಳವಾಗಿ ದುಃಖಿಸುತ್ತಾ, ತನ್ನ ವರ್ತಮಾನವನ್ನೆಲ್ಲಾ ಅವರಿಗೆ ಕ್ರಮವಾಗಿ ತಿಳುಹಿ, ಎಲೈ ಮಹಾನುಭಾವರುಗಳಿರಾ! ಇಂಥಾ ವಿಪತ್ತುಗಳು ನನಗುಂಟಾಗುವುದಕ್ಕೆ ನಿಮ್ಮ

ತ್ತವೇನು ಈ ವಿಚಿತ್ರಗಳಿಗೆಲ್ಲಾ ಕಾರಣಭೂತವಾದ ಮೂಲವು ಯಾವದು ಇದರ ವೃತ್ತಾಂತವನ್ನೆಲ್ಲಾ ನನಗೆ ಕ್ರಮವಾಗಿ ತಿಳುಹಿ ಕೃತಾರ್ಥನನ್ನಾಗಿ ಮಾಡಬೇಕೆಂದು ಪ್ರಾರ್ಥಿಸಲಾಗಿ, ಆ ನಾರಾಯಣ ಮಹರ್ಷಿಯು, ಎಲೈ ಕಂದನೇ! ನೀನು ಭಯಪಡಬೇಡವೆಂದು ಆತನ ಮೈದಡವಿ, ಎಲೈ ರಾಜಾತ್ಮನೇ ! ನೀನು ಯಾವ ಚಿತ್ರಗಳನ್ನು ನೋಡಿದೆಯೋ ಅವುಗಳೆಲ್ಲಾ ಸಹಜವಾದವುಗಳಲ್ಲದೆ ಚಿತ್ರಗಳಲ್ಲ, ಚಿತ್ರವಿಚಿತ್ರಗಳು, ಇಂದ್ರಜಾಲ, ಮಹೇಂದ್ರಜಾಲವು, ಅಗ್ನಿಸ್ತಂಭನವು, ಜಲಸ್ತಂಭನವು, ಅಕಟವಿಕಟಾದಿ ತಂತ್ರಗಳು, ಮೋಹನವೇ ಮೊದಲಾದ ಪರಕಾಯಪ್ರವೇಶ ವಿದ್ಯೆಗಳು ಇವೆಲ್ಲಕ್ಕೂ ಜ್ಞಾನವೇ ಕಾರಣವಾದುದರಿಂದ ಅಂಥಾ ಜ್ಞಾನಪ್ರಭಾವದ ಮಹಿಮೆಗಳನ್ನು ಬ್ರಹ್ಮ, ವಿಷ್ಣು, ಮಹೇಶ್ವರರೂ ದೇವ ಋಷಿಗಳೂ, ಇನ್ನೂ ಅನೇಕ ಇತರ ಪುಣ್ಯ ಪುರುಷರೂ ಇವರುಗಳೆಲ್ಲರೂ ತಿಳಿಯದವರಾಗಿರುವರು. ಹೀಗಿರುವಲ್ಲಿ ನೀನು ಅರಿಯತಕ್ಕ ಮಾರ್ಗವಾವುದೆಂದು ನುಡಿದು ಬಳಿಕ, ಆ ಜ್ಞಾನ ಪ್ರಭಾವವನ್ನು ಬೋಧಿಸಲಾರಂಭಿಸಿದನು.



ಸೂರ್ಯದತ್ತರಾಜ.



ನಾರಾಯಣಋಷಿ.

## ನಾರಾಯಣ ಮಹರ್ಷಿಯಿಂದ ಸೂರ್ಯದತ್ತರಾಯನಿಗೆ ಬೋಧಿಸಲ್ಪಟ್ಟ ಜ್ಞಾನಪ್ರಭಾವಂ.

ಎಲೈ ರಾಜೇಂದ್ರತನಯನೇ ! ಅಚಲ ಜ್ಞಾನಿಯಾಗಿಯೂ, ಶ್ರದ್ಧಾಸಕ್ತನಾಗಿಯೂ, ಲಾಲಿಸು. ಅಂಡಪಿಂಡ ಬ್ರಹ್ಮಾಂಡಗಳೆಂಬ ಇವುಗಳಿಗೆ ವಾಯುವೇ ಆಧಾರಭೂತವಾಗಿರುವುದರಿಂದ, ಆ ಪವನ ಸ್ವರೂಪವುಳ್ಳ ಆತ್ಮಾರಾಮ ಬ್ರಹ್ಮವನ್ನು ಜಪಯುಕ್ತವಾದದ್ದನ್ನಾಗಿಟ್ಟುಕೊಂಡು, ಆ ಎರಡಕ್ಷರಗಳನ್ನು

ಮಾತ್ರಾ ಧ್ಯಾನಿಸುವರಾಗಿ, ಕಣ್ಣುಗಳಲ್ಲಿ ಅನೇಕ ಮಹನೀಯರು ನೋಡುತ್ತ ಲಿರುವರು, ಅಂಥಾ ಅಕ್ಷರದ್ವಯವಾಗಿವುಳ್ಳ ಬ್ರಹ್ಮವನ್ನೇ ಜ್ಞಾನವೆಂತಲೂ, ಮಾಯೆ ಎಂಬಂಥಾಗಿಯೂ ನುಡಿಯುವರು. ಆ ಜ್ಞಾನವು ತೆಂಗಿನಕಾಯಿಯೊಳ ಗಣ ಜಲದಂತೆ (ನಾರಿಕೇಳಫಲಾಂಬುವತ್) ಅಖಂಡಾಕೃತಿಯಾದ ಬ್ರಹ್ಮನಲ್ಲಿ ಉತ್ಪನ್ನವಾಗಿ ಅಚಲ ಪರಿಪೂರ್ಣಗಳ ಹಾಗೆಯೇ ತಾನು ಅಖಂಡಾಕೃತಿಯನ್ನು ಹೊಂದಲಾರದೆ ಖಂಡರೂಪಗಳನ್ನೈದಿ, ಲೋಕಗಳನ್ನೂ ಲೋಕಗಳಲ್ಲಿರುವ ವಿಷ್ಣು, ಈಶ್ವರರೇ ಮುಂತಾದ ದೇವತೆಗಳೂ, ಮಾನವ, ಮೃಗ, ಪಕ್ಷಿ, ಕೀಟ ಮೊದಲಾದುವುಗಳನ್ನು ಹುಟ್ಟಿಸಿ, ತಾನು ಭಗವತ್ಪದನವನ್ನು ಹೊಂದಿ, ಆತ್ಮನೆಂ ದೆನಿಸಲ್ಪಟ್ಟು, ದೇವಮಾನವರ ಅಭೀಷ್ಟಗಳನ್ನು ನೆರವೇರಿಸುತ್ತಾ ತನ್ನ ಮಾಯೆಗೆ ಒಳಪಡಿಸಿಕೊಂಡು, ತಾನು ಮಾತ್ರ ಸೂತ್ರಧಾರಿಯಾಗಿ ಒಂದುಕಡೆ ಆಡಿ, ಮತ್ತೊಂದೆಡೆಯೊಳು ಪಾಡುತ್ತಾ ಒಂದೆಡೆಯೊಳು ಕೇಳದೆ, ಇನ್ನೊಂದು ಕಡೆ ಕೇಳುತ್ತಾ, ಒಂದು ಸ್ಥಳದಲ್ಲಿ ನಕ್ಕು, ಮತ್ತೊಂದು ಸ್ಥಳದಲ್ಲಿ ಅಳುತ್ತಾ, ಒಂದೆ ಡೆಯೊಳು ಜನಿಸಿ, ಮತ್ತೊಂದು ಸ್ಥಳದಲ್ಲಿ ಲಯವನ್ನೈದುತ್ತಾ ಈ ರೀತಿಯಾಗಿ ಅನೇಕವಾದ ಚಿತ್ರಗಳನ್ನು ಮಾಡುತ್ತಲಿರುವುದು. ಜ್ಞಾನವು ಹುಟ್ಟದೆಯೇ ಅದರ ಮರಣವನ್ನೂ ಮಹಿಮೆಯನ್ನೂ ಹೇಳುವದು ಯಾರಿಗೂ ಸಾಧ್ಯವಲ್ಲ ಅದನ್ನು ಹಿಡಿದು ನೋಡಿದಾಗ್ಯೂ ಅದು ನಿಲ್ಲದೆ ಮರುಮರೀಚಿಕದಂತೆಯೂ, ರಜ್ಜುಸರ್ಪದಹಾಗೂ, ವಂಧ್ಯಾಪುತ್ರನಂತೆ ಗಗನಾರವಿಂದದೋಪಾದಿಯೊಳು ಭ್ರಮೆಗೊಳಿಸುತ್ತಲಿರುವುದು. ಇದನ್ನು ಸಂಪಾದಿಸಲಿಚ್ಛೈಸಿ ಅನೇಕರು ನಾನಾ ವಿಧಗಳಾದ ಸನ್ಯಾಸ ಮುಂತಾದ ವೇಷಧಾರಿಗಳಾಗಿ (ಕೇವಲ ಉದರ ಪೋಷ ಣಕ್ಕೆ ಹೇಗೋ ಹಾಗೆ) ಕಡೆಗೆ ಭ್ರಾಂತರಾಗಿ ತಿರುಗುವರು. ಈ ಶರೀರಕ್ಕೆ ಒಂಭತ್ತು ರಂಧ್ರಗಳು. ಅವುಗಳಲ್ಲಿ ನಾಸಿಕ ರಂಧ್ರಗಳೆರಡರಲ್ಲಿ ಕೆಂಪಗಿರು ವದು ಸೂರ್ಯನಾಡಿಯು, ಬೆಳ್ಳಗಿರುವದು ಚಂದ್ರನಾಡಿಯು, ಕರೀದು ಈಡ ಪಿಂಗಳ ಈ ಎರಡು ಸೇರಿದ ಆ ಜಪಕುಂಡಲಿಯ ಹೆಸರು ಸುಷುಮ್ನಾನಾಡಿಯು ಇದರ ಅಂತ್ಯದಲ್ಲಿ ಜ್ಞಾನವೆಂಬುವದು ಇರುವದು. ಅದನ್ನೇ ಹಂಸವೆಂತಲೂ, ಇಂದ್ರಜಾಲಕನೆಂತಲೂ, ಪರಬ್ರಹ್ಮನೆಂತಲೂ, ನಾರಾಯಣನೆಂಬದಾಗಿಯೂ, ಸದಾಶಿವನೆಂತಲೂ, ಮಹಾಲಿಂಗವೆಂಬದಾಗಿಯೂ, ಕಳಾಸ್ವರೂಪನೆಂತಲೂ, ಸರ್ವಸಾಕ್ಷಿಯೆಂತಲೂ, ಆಪೋಜ್ಯೋತಿ ಎಂಬದಾಗಿಯೂ, ಸಚ್ಚಿದಾನಂದನೆಂ ತಲೂ ಹೇಳುವರು. ಈ ಹದಿನಾಲ್ಕು ಲೋಕಗಳನ್ನು ಜ್ಞಾನವೆಂದೇ ಅರಿಯು ವವನಾಗು. ಅಂಥಾ ಜ್ಞಾನಕ್ಕೆ ಮೂಲವೇ ಇಲ್ಲ. ವಂಧ್ಯಾ ಪುತ್ರನಂತೆ ಜ್ಞಾನವು ತನ್ನಷ್ಟಕ್ಕೆ ತಾನೇ ಬಂದು ಭ್ರಾಂತಿಯನ್ನುಂಟುಮಾಡುವದೆಂದು ಸಕಲ ರಹಸ್ಯಗಳನ್ನು ಬೋಧಿಸಿದನು.

ಅತ್ತಲಾ ರಾಜಶುಕವನ್ನು ಬೆನ್ನಟ್ಟಿ ಬರುತ್ತಲಿದ್ದ ಮಾಯಾ ಮಂತ್ರಿಕನು ಹಿಂತಿರುಗಿ ಪಟ್ಟಣಕ್ಕೆ ಹೋಗಿ, ಧೊರೆಗೆ ನಮಸ್ಕರಿಸಿ, ಎಲೈ ರಾಜಮಾರ್ತಾಂಡನೇ! ನಾನು ಆ ಶುಕವನ್ನು ಬೆನ್ನಟ್ಟಿ ಹೋಗುತ್ತಿರಲಾಗಿ, ಆ ಗಿಳಿಯು ಒಂದಾನೊಂದು ಅರಣ್ಯಮಧ್ಯದಲ್ಲಿ ನರನಾರಾಯಣರೆಂಬ ಮುನೀಂದ್ರರ ಆಶ್ರಮವನ್ನು ಸೇರಿ, ಅಲ್ಲಿ ತನ್ನ ನಿಜರೂಪವಾದ ರಾಜಪುತ್ರನಾಗಿ ಆ ಮಹಾ ಮುನಿಗಳ ಪರಿಚರ್ಯದಲ್ಲಿ ನಿಲ್ಲಲು, ನಾನು ಆ ಸಮೀಪಕ್ಕೈದಲು ಶಕ್ತಿಯಿಲ್ಲದೆ ಹಿಂತಿರುಗಿಬಂದೆನೆಂದು ನುಡಿಯಲಾಗಿ, ಅದನ್ನು ಕೇಳಿದ ರಾಜಪುತ್ರಿಯು ಅಹಹಾ ಋಷ್ಯಾಶ್ರಮದಲ್ಲಿ ಸೇರಿದ ನನ್ನ ಗಂಡನು ಬರುವದಾರಿ ಯಾವುದೆಂದು ಯೋಚಿಸಿ, ಬಳಿಕ ಓಹೋ ಆತನು ಸನ್ಯಾಸವನ್ನಾಶ್ರೈಸಿ ತಪೋವೃತ್ತಿಯೊಳಿರುವನೇನೋ, ಹಾಗಾದರೆ ನಾನೇ ಆ ಆಶ್ರಮಸ್ಥಾನಕ್ಕೆ ಹೋಗಿ ಪ್ರಾಣನಾಥನನ್ನು ಕರೆತರುವೆನೆಂದು ಯೋಚಿಸಿ, ಪ್ರಯಾಣದೊಳು ಮನವನ್ನಿಟ್ಟು ಕಾಲವನ್ನು ನಿರೀಕ್ಷಿಸುತಲಿದ್ದಳು. ಅತ್ತಲಾ ನಾರಾಯಣ ಋಷಿಯು ರಾಜಪುತ್ರನನ್ನು ಕುರಿತು ಎಲೈ ಇಳೆಯಾಣ್ಮನ ತನುಜನೇ! ಜ್ಞಾನಪ್ರಭಾವವೆಂಬುವದು ನಿನಗೆ ಸಾಂಗವಾಗಿ ಬೋಧಿಸಿದುದರಿಂದ ಅದನ್ನೆಲ್ಲಾ ನೀನು ಗ್ರಹಿಸಿರುವೆ. ಆ ಮಹಿಮೆಯಿಂದ ನಿನಗೆ ಇಷ್ಟಸಿದ್ಧಿಯೂ, ಮಹೀಮಂಡಲಾಧಿಪತ್ಯವೂ, ಪರಲೋಕದಲ್ಲಿ ಶಾಶ್ವತವಾದ ಸುಖಾನಂದಗಳೂ ಉಂಟಾಗುವವು ಎಂದು ಆತನಿಗೆ ಹೇಳಿ ಸಂತೈಸಿ, ಎಲೈ ರಾಜೋತ್ತಮನೇ! ನೀನು ಇಲ್ಲಿ ಕಣ್ಣುಗಳನ್ನು ಮುಚ್ಚಿಕೊಂಡು ಕಾಶ್ಮೀರದೇಶದ ಅವನಿಪಾಲನ ಸಭೆಯೊಳಗೆ ತೆರೆಯುವವನಾಗೆಂದು ಮುನಿಯು ನುಡಿಯಲು, ಆತನು ಕಣ್ಣುಗಳಂ ಮುಚ್ಚಿಕೊಂಡು ನಿಮಿಷಮಾತ್ರದೊಳಗಾಗಿಯೇ ಆ ರಾಜಸಭೆಯೊಳು ಕಣ್ದೆರೆದು ನಿಂತನು. ಅಲ್ಲಿ ಸೇರಿರುವ ರಾಜನು, ಸಭಿಕರು ಮುಂತಾದವರೆಲ್ಲರೂ ಅಹಹಾ ಇದೇನಾಶ್ಚರ್ಯ, ಇವನಾರು, ಎಲ್ಲಿಂದ ಬಂದನು? ದಿವ್ಯಸುಂದರನೆಂದು ಯೋಚಿಸಿ, ಆತನಿಗೆ ಮರ್ಯಾದೆಗಳನ್ನು ಮಾಡಿ. ಉಚಿತಾಸನದಲ್ಲಿ ಕುಳ್ಳಿರಿಸಿ, ಬಳಿಕ ಆತನನ್ನು ನೋಡಿ, ಎಲೈ ಮಹಾತ್ಮನೇ! ನೀನು ಯಾವ ದೇಶದಿಂದ ಇಲ್ಲಿಗೆ ಬಂದೆ? ನಿನ್ನ ಹೆಸರೇನು? ಎಂಬದಾಗಿ ಕೇಳಲು, ಆ ರಾಜತನಯನು ತನ್ನ ವೃತ್ತಾಂತವನ್ನೆಲ್ಲಾ ರಾಜನಿಗೆ ತಿಳುಹಿ, ಮೇಣದ ಉಂಡೆಯನ್ನಾತನಿಗೆ ತೋರಿಸಿದನು. ಆ ನರಾಧಿಪನು, ಮಂತ್ರಿಸಾಮಾಜಿಕರು, ಅದನ್ನು ನೋಡಿ, ಆಶ್ಚರ್ಯಭರಿತರಾಗಿ ಆತನನ್ನು ಬಹುವಿಧಗಳಿಂದ ಸ್ತುತಿಸಿ, ತನ್ನ ಪುತ್ರಿಯ ಅಂತಃಪುರಕ್ಕೆ ಆತನನ್ನು ಕಳುಹಿಸಿದನು. ದರಿದ್ರನಿಗೆ ಧನವು ಲಭಿಸಿದಂತೆ ರಾಜಪುತ್ರಿಯು ತನ್ನ ಭರ್ತನನ್ನು ಕಂಡು, ಆತನನ್ನು ಆಲಿಂಗಿಸಿ, ಆನಂದಭಾಷ್ಪಗಳನ್ನು ಬಿಟ್ಟಳು. ಬಳಿಕಲಾ ಸೂರ್ಯದತ್ತನು ಅವಳ ಅನುಮತಿಯನ್ನು ಪಡೆದು, ಸಮಸ್ತಾಭರಣಭೂಷಿತನಾಗಿ ಕುದುರೆಯ

ನ್ನೇರಿ, ಕನಕಾಂಗಿಯ ಅಂತಃಪುರಕ್ಕೆ ಹೋಗಿ, ನಿದ್ರಾಹಾರಗಳನ್ನು ತೊರೆದು, ದ್ರತ್ಯೈಕಪಾರಾಯಣಳಾಗಿದ್ದ ವಿಚಿತ್ರವತಿಯನ್ನು ನೋಡಿ, ಎಲೈ ಪ್ರಾಣನಾಯ ಕಿಯೇ! ನಾನು ಪಟ್ಟ ಕಷ್ಟಸುಖಗಳನ್ನಾಲಿಸೆಂದು, ಅವಳನ್ನು ಸಂತೋಷಸಮು ದ್ರದೊಳಿಟ್ಟು, ಅವಳನ್ನೂ, ಕನಕಾಂಗಿಯನ್ನೂ ಹಿಂದಿಟ್ಟುಕೊಂಡು, ಜ್ಞಾನಾಂ ಬೆಯ ಮನೆಗೆ ಹೋಗಿ, ಅವಳನ್ನು ನೋಡಿ, ಎಲೈ ಪ್ರಾಣರಕ್ಷಕಳೇ ನಿನ್ನ ತಾಯಿ ಯದೆಸೆಯಿಂದ ನನಗೆ ಸಂಭವಿಸಿದ ತೊಂದರೆಗಳನ್ನು ಕೇಳೆಂದು ಅವಳಿಗೆ ಸಮ ಸ್ತವನ್ನೂ ಹೇಳಿ, ಅವಳನ್ನು ಕರೆದುಕೊಂಡು ಕನಕವೇಣಿಯ ಅಂತಃಪುರಕ್ಕೆ ಹೋದನು. ಆ ಕಮಲಾಕ್ಷಿಯು ವಿಚಿತ್ರವತಿಗೆ ನಮಸ್ಕರಿಸಿ, ಜ್ಞಾನಾಂಬೆ ಯನ್ನು ಬಹಳವಾಗಿ ಸ್ತುತಿಸಿದಳು. ಕಾಶ್ಮೀರವತಿಯು ಶುಭಮುಹೂರ್ತದಲ್ಲಿ ವಿಚಿತ್ರವತಿಗೂ, ಕನಕವೇಣಿಗೂ, ಸೂರ್ಯದತ್ತನಿಗೂ ಮಂಗಳಸ್ನಾನಗಳನ್ನು ಮಾಡಿಸಿ, ವಿವಾಹಮಹೋತ್ಸವವನ್ನತಿ ವಿಜೃಂಭಣೆಯಿಂದ ನಡೆಸಿದವನಾದನು.

ತರುವಾಯ ಸೂರ್ಯದತ್ತನು ಅಲ್ಲಿಯೇ ಕೆಲವು ದಿವಸಗಳಿದ್ದು ಸಂತೋಷ ಸುಖಗಳನ್ನನುಭವಿಸಿ, ಕನಕವೇಣಿಗೆ ಜನಿಸಿದ ಕುಮಾರ ಕಂಠೀರವನಿಗೆ ದ್ಯುಮ ತ್ತೀನನೆಂದು ಪೆಸರಿಟ್ಟು, ಭಾರ್ಯೆಯರನ್ನೂ, ಜ್ಞಾನಾಂಬೆಯನ್ನೂ, ಕನಕಾಂಗಿ ಯನ್ನೂ, ಚತುರಂಗಬಲವನ್ನೂ ಹಿಂದಿಟ್ಟುಕೊಂಡು, ಹತ್ತುಕೋಟಿ ಧನ ವನ್ನೂ ನಾನಾವಿಧಗಳಾದ ಸುವರ್ಣರಜತ ವಸ್ತುಗಳನ್ನೂ ತೆಗೆದುಕೊಂಡು, ಅಮರಾಧಿಪನಂತೆ ಪ್ರಕಾಶಿಸುತ್ತಾ ಪ್ರಯಾಣವಾಗಿ ಹೊರಟು, ಮಜಲುಗಳಪ್ರ ಕಾರ ಅಲ್ಲಲ್ಲಿ ಮಾರ್ಗಮಧ್ಯದಲ್ಲಿ ನಿಂತು, ಕೆಲವು ದಿವಸಗಳಿಗೆ ಕಾಶೀಪಟ್ಟಣ ವನ್ನು ಸೇರಿ, ಅರ್ಧಯೋಜನದ ದೂರದಲ್ಲಿ ತನ್ನ ಚತುರಂಗಬಲವನ್ನು ನಿಲ್ಲಿಸಿ, ಬಿಡಾರಗಳನ್ನು ಮಾಡಿಕೊಂಡು, ವಿಚಿತ್ರವತಿಯನ್ನೂ, ಕನಕಾಂಗಿಯನ್ನೂ, ಪಾಲಕಿಯೊಳು ಕುಳ್ಳಿರಿಸಿ ಕಾಶೀದೇಶದ ಅರಸಿನ ಮನೆಗೆ ಕಳುಹಿಸಿದನು. ಅಲ್ಲಿಂದ ವಿಚಿತ್ರವತಿಯು ಪಟ್ಟಣಪ್ರವೇಶವನ್ನು ಮಾಡಿ, ತಾಯಿಯ ಅಂತಃಪುರ ವನ್ನು ಸೇರಿ, ಆಕೆಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದಳು. ಆಗಲಾ ತಾಯಿಯು ಪುತ್ರಿಯನ್ನು ನೋಡಿ ಸಂತೈಸಿದವಳಾಗಿ, ಎಲೈ ಕಮಲಾಂಗಿಯೇ ನಮ್ಮ ಉದರದರಲ್ಲಿ ನೀನು ಜನಿಸಿ, ಸತ್ಕುಲವಾದ ಈ ವಂಶಕ್ಕೆ ಅಪಕೀರ್ತಿ ಯನ್ನೂ, ನಮಗೆ ಅಪಮಾನಗಳನ್ನೂ ಉಂಟುಮಾಡಿದವಳಾದೆ. ನೀನು ಇಲ್ಲಿಂದ ಓಡಿಹೋದಂದಿನಿಂದ ನಿನ್ನ ಜನಕನು ಯಾರಿಗೂ ಮುಖವನ್ನು ತೋರಿಸದೆ, ರಾಜಸಭೆಗೆ ಪ್ರವೇಶಿಸದೆ ನಿರಂತರದಲ್ಲಿಯೂ ಅಂತಃಪುರದಲ್ಲಿಯೇ ಕಾಲಮಂ ನೂಕುತ್ತಾ, ದುಃಖಸಮುದ್ರದಲ್ಲಿ ಮುಳುಗಿರುವನು. ಈಗ ನಿನ್ನನ್ನು ನೋಡಿ ದರೆ ಏನುಮಾಡುವನೋ ತಿಳಿಯದು. ರಾಜವಂಶದಲ್ಲಿ ನಿನ್ನಂಥಾ ದ್ರೋಹಿ ಯನ್ನು ನಾನೆಲ್ಲಿಯೂ ನೋಡಿಯು, ಕೇಳಿಯೂ ಇಲ್ಲ. ದೈವಗತಿಯು ಯಾರ

ನ್ನೂತಾನೆ ಅತಿಕ್ರಮಿಸುವುದೆಂದು ನುಡಿಯಲಾಗಿ, ಅದನ್ನು ಕೇಳಿದ ಪುತ್ರಿಯು, ಕೇಳೈ—ತಾಯಿಯೇ ರಾಜವಂಶೋತ್ಪನ್ನರಾದ ನಮಗೆ ಲೋಕಾಪವಾದವು ಅಪ ಕೀರ್ತಿಯು ಇವುಗಳೆರಡೂ ಉಂಟಾಗುವಂತೆ ಎಂದಿಗೂ ದೈವವು ಮಾಡಲಾ ದೆಂದು ಮೊದಲಿನಿಂದ ನಡೆದ ವೃತ್ತಾಂತವನ್ನೆಲ್ಲಾ ಸಾಂಗವಾಗಿ ತಿಳುಹಲಾ ತಾಯಿಯು ಕೇಳಿ ಆಶ್ಚರ್ಯಪರವಶಳಾಗಿ ಸಂಗತಿಯನ್ನೆಲಾ ಪತಿಗೆ ತಿಳುಹಿದಳು. ಆತನು ಸಾವಕಾಶವಾಗಿ ಸಕಲ ವೃತ್ತಾಂತವನ್ನು ತಿಳಿದು ಅನಂತರ ಪುತ್ರಿಯನ್ನು ಮುದ್ದಿಸಿ ಸಭೆಯವರನ್ನೆಲ್ಲಾ ಕರೆಸಿ ಅವರಿಗೂ ವರ್ತಮಾನವನ್ನು ಪೇಳಿ, ಎಲ್ಲರೂ ಸೇರಿ ಆ ಶಿಬಿರಗಳಬಳಿಗೆ ಹೋಗಿ ರಾಜನು ಅಮರಾಧಿಪನಿಗೆ ಸಮಾನವಾದ ತೇಜಸ್ಸಂಪತ್ತುಗಳಿಂದ ದೇದಿವ್ಯಮಾನವಾಗಿರುವ ಸೂರ್ಯದತ್ತನನ್ನು ಆಲಿಂಗನವನ್ನು ಮಾಡಿಕೊಂಡು, ಆತನ ವರ್ತಮಾನವನ್ನೆಲ್ಲಾ ಕೇಳಿದವನಾಗಿ ಆನಂದಭಾಷ್ಪಗಳನ್ನುಗುಳುತ್ತಾ, ಎಲೈ—ಮಹಾನುಭಾವನೇ ಕೇವಲ ಪಾಪಾತ್ಮನಾಗಿಯೂ, ದುರ್ನೀತಿಪರನಾಗಿಯೂ ಇರುವ ಸುನೀತನಿಗೆ ತಕ್ಕ ದಂಡನೆಯನ್ನು ಮಾಡಿಸಬೇಕೆಂದು ನಿಶ್ಚೈಸಿ, ಆಕೆಯ ಮಗುವನ್ನು ಮುದ್ದಾಡಿ, ಸಕಲರನ್ನು ಪುರದೊಳಕ್ಕೆ ಕರೆದುಕೊಂಡು ಹೋಗಿ, ಸೂರ್ಯದತ್ತನ ತಾಯಿಯನ್ನು ಕರೆಸಿ ಅವಳನ್ನು ಕುರಿತು, ಮಹಾತ್ಮಳೇ ! ನಿನ್ನಿಂದಲ್ಲವೇ ಈ ವಿಧಗಳಾದ ತೊಂದರೆಗಳುಂಟಾದವೆಂದು ನುಡಿದನು. ಬಳಿಕ ಸೂರ್ಯದತ್ತನು ಹೆಂಡತಿಯರು ಸಹಿತವಾಗಿ ತಾಯಿಗೆ ನಮಸ್ಕರಿಸಿ ತಾನು ನಡೆಸಿದ ಕಾರ್ಯಗಳನ್ನು ಸಂಭವಿಸಿದ ಆಪನ್ಮೃತ್ಯುಗಳನ್ನು, ಬಳಿಕ ಹೊಂದಿದ ಸೌಖ್ಯವನ್ನು ಕ್ರಮವಾಗಿ ತಿಳುಹಿದನು. ಕಾಶೀದೇಶಾಧಿಪನು ವಿವಾಹಯತ್ನವನ್ನು ಮಾಡಿಸಿ, ಪೂರ್ವದ ಮಂತ್ರಿಯಾವ ಸುನೀತನೆಂಬವನಿಗೆ ರಾಜಪುತ್ರನನ್ನು ಕರೆದುಕೊಂಡು ನೀವು ಪರಿವಾರ ಸಮೇತ ಬರಬೇಕೆಂದು ಲಗ್ನಪತ್ರಿಕೆಗಳನ್ನು ಕಳುಹಿಸಿದನು. ಸುನೀತನು ಅಂತರಂಗದಲ್ಲಿ ಇಂದಿಗೆ ನನ್ನ ಕಾರ್ಯವು ಅನುಕೂಲಿಸಿತೆಂದು ನಿಶ್ಚೈಸಿ ತನ್ನ ಮಗನನ್ನು ಬಂಧುವರ್ಗಗಳನ್ನು ಪರಿವಾರವನ್ನು ಕರೆದುಕೊಂಡು ಪ್ರಯಾಣಸನ್ನದ್ಧರಾಗಿ (ದೈವಾಜ್ಞೆಯನ್ನರಿಯದೆ) ಪ್ರಯಾಣವಾಗಿ ಹೊರಟು ಕೆಲವು ದಿವಸಗಳಿಗೆ ಕಾಶೀಪುರಕ್ಕೆ ಬಂದು ಸೇರಿ ಆ ರಾಜನು ಮಾಡಿಸಿರುವ ಉಚಿತವಾದ ಬಿಡದಿಯ ಮನೆಗಳೊಳು ಇಳಿದು ಬಳಿಕ ರಾಜಸಭೆಗೆ ಹೋಗಿ ಆತನನ್ನು ಕಂಡು ನಮಸ್ಕರಿಸಿ, ರಾಜೇಂದ್ರನೇ ಸೂರ್ಯದತ್ತನನ್ನು ಕರೆದುಕೊಂಡು ಬಂದಿರುವೆನೆಂದು ತನ್ನ ಮಗನನ್ನೇ ಸೂರ್ಯದತ್ತನೆಂದು ರಾಯನಿಗೆ ತೋರಿಸಿದನು. ಆಗಲಾ ನರಾಧಿಪನು ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು, ಎಲೈ—ದುಷ್ಟಾತ್ಮನೇ ! ಲೋಕದಲ್ಲಿ ಹಂದಿಯು ಎಷ್ಟು ಮದಿಸಿದರೂ ಮದ್ದಾನೆಯ ಪರಿಯಾಗಲರಿಯದು ಅಲ್ಪನಿಗೆ ಐಶ್ವರ್ಯಬಾಹುಳ್ಯವೊದಗಿದರೂ, ಯೋಗ್ಯಪುರು

ಷನಾಗುವುದಿಲ್ಲ. ನೀನು ಪೂರ್ವದಿಂದಲು ಮಾಡಿದ ದ್ರೋಹಗಳೆಲ್ಲ ಕ್ರಮವಾಗಿ ನಮಗೆ ತಿಳಿಯಬಂದಿದೆ. ನೀನು ಕೊಲ್ಲಬೇಕೆಂದು ಯತ್ನಿಸಿದ ಪೂರ್ವದ ಸೂರ್ಯದತ್ತನನ್ನು ನೋಡೆಂದು ಆ ಮಹಾನುಭಾವನನ್ನು ತೋರಲಾಗಿ, ಮಂತ್ರಿಯು ಅಪರಿಮಿತವಾದ ಸಿಡಿಲು ಹೊಡೆದಂತೆ ಎದೆಯು ಝಗ್ಗೆಂದು ಸ್ತಂಭೀಭೂತನಾಗಿ ಏನೂ ಪ್ರತ್ಯುತ್ತರವನ್ನೀಯಲಾರದೆ ತಲೆಯನ್ನು ಬಗ್ಗಿಸಿದನು. ಆಗಲಾ ಕಾಶ್ಯಾಧಿಪನು ಸುನೀತನನ್ನು ಪಟ್ಟದಾನೆಯ ಕಾಲುಗಳಿಗೆ ಕಟ್ಟಿಸಿ ಪಟ್ಟಣದೊಳೆಲ್ಲಾ ಎಳಿಸಿ ಅವನ ತಲೆ ಒಡೆಯುವಂತೆ ಆನೆಯಿಂದ ತುಳಿಸಿ, ಅವನ ಮಗನನ್ನು ಬಂಧುಮಿತ್ರ ವರ್ಗವನ್ನು ಕಾರಾಗೃಹದೊಳಿಡಿಸಿ, ಚತುರಂಗಬಲಕ್ಕೆ ಭಯವನ್ನು ತೋರಿಸಿ, ಸಂಗತಿಯನ್ನೆಲ್ಲಾ ಸೂರ್ಯದತ್ತನಿಗೆ ತಿಳುಹಿ, ಅವನನ್ನು ಸಮಾಧಾನಗೊಳಿಸಿ, ಶುಭಮುಹೂರ್ತದಲ್ಲಿ ಸೂರ್ಯದತ್ತನಿಗೆ ಅತಿವಿಜೃಂಭಣೆಯಿಂದ ವಿವಾಹ ಮಹೋತ್ಸವವನ್ನು ಮಾಡಿಸಿ, ಆನಂದವನ್ನೈದಿ ಬಳಿಕ ಸೂರ್ಯದತ್ತನಿಗು ವಿಚಿತ್ರವತಿಗು ಕನಕವೇಣಿಗು ಅಮೂಲ್ಯವಾದ ವಸ್ತ್ರಾಭರಣಗಳನ್ನಿತ್ತು, ಅನೇಕ ಚತುರಂಗಬಲವನ್ನು ಆತನ ಹಿಂದೆ ಹೋಗುವಂತೆ ಅಪ್ಪಣೆಮಾಡಿ ಕಳುಹಿಸಿ ಪ್ರಯಾಣಕ್ಕೆ ಸಮ್ಮತಿಸಿದನು. ಸೂರ್ಯದತ್ತನು ಸಂತೋಷದಿಂದ ತನ್ನ ತಾಯಿಯನ್ನೂ, ಹೆಂತಿಯರನ್ನೂ ಹಿಂದಿಟ್ಟುಕೊಂಡು, ತನ್ನ ದೇಶಕ್ಕೆ ಬರುತ್ತಾ, ಕೆಲವು ದಿವಸಕ್ಕೆ ತನ್ನ ಪಟ್ಟಣವನ್ನು ಸೇರಿ, ರಾಜ್ಯವನ್ನು ತನ್ನ ಅಧೀನಮಾಡಿಕೊಂಡು, ತನಗೆ ಬಾಲ್ಯಸ್ನೇಹಿತನಾದ ಶ್ರುತಕೀರ್ತಿ ಎಂಬುವನನ್ನು ಮಂತ್ರಿಯನ್ನಾಗಿ ಮಾಡಿಕೊಂಡು ದುರಾಲೋಚನೆಯೊಳಿದ್ದ ಸಭಾಸದರನ್ನೆಲ್ಲಾ ನಿಶ್ಶೇಷಮಾಡಿ, ಪುರಜನಗಳಿಗೆ ಸಂತೋಷವನ್ನು ತೋರಿಸಿ, ಅನೇಕ ಚತುರಂಗಬಲ ಸಮೇತನಾಗಿ, ದೇಶದೇಶಕ್ಕೂ ಹೋಗಿ, ಪರಸೆಯಂತೆ ಒಂದೊಂದು ದೇಶವನ್ನಾಕ್ರಮಿಸಿಕೊಂಡು ರಾಜವರ್ಗವನ್ನೆಲ್ಲಾ ಸ್ವವಶಮಾಡಿಕೊಂಡು, ಅವರುಗಳಿಂದ ಕಪ್ಪಕಾಣಿಕೆಗಳನ್ನು ಕೈಕೊಳ್ಳುತ್ತಾ, ನವಖಂಡಮಂಡಲಾಧಿಪತಿಯಾಗಿ, ತನ್ನ ಕೀರ್ತಿಯು ಲೋಕಾಂತವಿಶ್ರುತವಾಗುವಂತೆ ಮಾಡಿ ಸಕಲರನ್ನು ಸುಖದೊಳ್ಳು ಕಾಪಾಡುತ್ತಾ, ಧರ್ಮವನ್ನು ನಾಲ್ಕು ಪಾದಗಳ ಮೇಲೆ ನಿಲ್ಲಿಸಿ, ಜ್ಞಾನಪ್ರಭಾವವನ್ನು ಸ್ತುತಿಸುತ್ತಾ, ಜ್ಞಾನಿಗಳನ್ನೂ, ಯೋಗಿಗಳನ್ನೂ ಪೂಜಿಸುತ್ತಾ, ಅನೇಕ ದಿವಸಗಳು ರಾಜ್ಯವನ್ನು ಧರ್ಮದಿಂದ ಪರಿಪಾಲಿಸುತ್ತಾ. ಬಳಿಕ ದೇಹವನ್ನು ತೊರೆದು ಪುಣ್ಯಲೋಕವನ್ನು ಸೇರಿ ಶಾಶ್ವತವಾದ ಸುಖಾನುಭವವನ್ನು ಹೊಂದಿದನೆಂದು ತಿಳಿಯಪಡಿಸಿದ ಭಗವಂತನನ್ನು ಕುರಿತು ಅರ್ಜುನನು, ಎಲೈ ದೇವದೇವನೇ ! ಸೂರ್ಯದತ್ತಮಹಾರಾಯನ ಚರಿತ್ರೆಯು ಕೇವಲ ಅದ್ಭುತವಾಗಿಯೂ, ರಮಣೀಯವಾಗಿಯೂ, ಆಶ್ಚರ್ಯಕರವಾಗಿಯೂ ಇರುವದು. ಅದನ್ನು ವರ್ಣಿಸಲು ನನಗೆ ಶಕ್ತಿಸಾಲದೆಂದು ಆತನನ್ನು ಬಹಳವಾಗಿ ಸ್ತುತಿಸಿ, ಶ್ರೀಕೃ

ಷ್ಣನನ್ನು ಸ್ತುತಿಗೈದು, ಎಲೈ ಸ್ವಾಮಿಯೇ! ಜ್ಞಾನಪ್ರಭಾವವು ಅಪಾರವಾದ ದ್ದಾಗಿರುವದು, ಇನ್ನು ನಿದ್ರೆಗೆ ಕಾಲಾತೀತವಾಗುತ ಬಂದುದರಿಂದ ಶಯನಮಾ ಡಬೇಕೆಂದು ಪ್ರಾರ್ಥಿಸಲಾಗಿ ಈರ್ವರೂ ಶಯನಮಾಡಿ, ಸುಖನಿದ್ರೆಯನ್ನು ಹೊಂದಿದವರಾದರು.

ಹನ್ನೊಂದನೆಯ ಕಥೆಯು ಸಂಪೂರ್ಣ.



ಶ್ರೀರಸ್ತು.

ಶ್ರೀಕೃಷ್ಣಾಯ ಪರಬ್ರಹ್ಮಣೇ ನಮಃ

## ಚಂದ್ರಕೇತುರಾಯನೆಂಬ ಹನ್ನೆರಡನೆ ರಾಜಪುತ್ರನ ಕಥೆ.

ಹನ್ನೆರಡನೆಯ ದಿವಸದ ರಾತ್ರಿ ಕೃಷ್ಣಾರ್ಜುನರೀರ್ವರೂ ಯಮುನಾನದೀ ಪ್ರಾಂತ್ಯದ ಸೈಕತ ಪ್ರದೇಶದೊಳು ಕುಳಿತುಕೊಂಡು, ಸುಖಭೋಜನವನ್ನುಗೈದ ತರುವಾಯ ತಾಂಬೂಲವನ್ನು ಸವಿಯುತ್ತಾ, ದಿವ್ಯತರವಾದ ಪುಷ್ಪಗಳ ವಾಸ ನೆಯಿಂದ ಆನಂದವನ್ನೈದುತ್ತಾ, ಸುಖಮಾನಸರಾಗಿರುತಿರಲು, ಇಂದ್ರನಂದನ ನಾದ ಅರ್ಜುನನು ದೇವಕೀತನಯನಾದ ಶ್ರೀಕೃಷ್ಣನನ್ನು ಕುರಿತು, ಎಲೈ ಯಾದ ವಕುಲಶಿರೋಮಣಿಯೇ! ವೇದಾಂತರಹಸ್ಯಗಳಲ್ಲಿ ಸಕಲವೂ ನಿನ್ನಿಂದ ತಿಳಿಯ ಲ್ಪಟ್ಟವನಾದಾಗ್ಯೂ ಅಂತರಾತ್ಮನಿಗೆ ಇನ್ನೂ ತೃಪ್ತಿಯುಂಟಾಗದೆ ಇರುವದರಿಂದ ಆ ರಹಸ್ಯಗಳಲ್ಲಿ ಅಚಲಪರಿಪೂರ್ಣಬ್ರಹ್ಮವೆಂಬುವದನ್ನು ಇತಿಹಾಸರೂಪದಿಂದ ನನಗೆ ಬೋಧಿಸಿ ಕೃತಾರ್ಥನನ್ನಾಗಿ ಮಾಡಿ ರಕ್ಷಿಸಬೇಕೆಂದು ಅತಿವಿನಯ ಭಕ್ತಿ ಯಿಂದ ಪ್ರಾರ್ಥಿಸಲಾಗಿ ಶ್ರೀಕೃಷ್ಣನು, ಎಲೈ ಪಾಂಡುನಂದನನೇ! ಇದುವರೆಗೂ ನಿನಗೆ ಬೋಧಿಸಲ್ಪಟ್ಟ ವಿಷಯಗಳನ್ನೆಲ್ಲಾ ನೀನು ಅಚಲಭಾವದಿಂದ ಸಂಗ್ರಹಿಸಿ ರುವೆಯಾದುದರಿಂದ ಈಗ ನೀನು ಕೇಳುವ ಪ್ರಶ್ನೆಯು ಮೂರುಲೋಕಗಳಿಗೂ ಅಸಾಧ್ಯವಾಗಿರುವದು. ನೀನೆನಗೆ ಪ್ರಾಣಸಖನಾದ ಕಾರಣದಿಂದಲೂ, ಪೂರ್ವ ಜನ್ಮಸ್ನೇಹದ ದೆಸೆಯಿಂದಲೂ, ನಿನ್ನಲ್ಲಿ ಕರುಣಾರಸವುಂಟಾಗಿ ಬೋಧಿಸಲೆಳಸಿ ರುವೆನು ನಿರ್ಮಲಚಿತ್ತನಾಗಿಯೂ, ಶ್ರದ್ಧಾಸಕ್ತನಾಗಿಯೂ, ಆದರವುಳ್ಳವನಾ ಗಿಯೂ ಕೇಳುವವನಾಗೆಂದು ಅಚಲಪರಿಪೂರ್ಣ ಬ್ರಹ್ಮಭಾವವಿಷಯಕವಾದ ಚಂದ್ರಕೇತುವೆಂಬ ರಾಜೋತ್ತಮನ ಇತಿಹಾಸವನ್ನು ಬೋಧಿಸಲಾರಂಭಿಸಿದನು.

ಎಲೈ ಧರ್ಮಾನುಜನೇ! ಲಾಲಿಸು. ಪೂರ್ವಕಾಲದಲ್ಲಿ ಅಮರಪುರಿ ಯನ್ನು ತಿರಸ್ಕರಿಸುತ್ತಲಿದ್ದ ಪಾಟಲೀಪುರವೆಂಬುದೊಂದು ಪಟ್ಟಣವುಂಟು. ಆ ಪಟ್ಟಣವನ್ನು ಸೂರ್ಯವಂಶೋತ್ಪನ್ನನಾದ ಸೂರ್ಯಕೇತುವೆಂಬ ಇಳೆಯಾ

ಣ್ಮನು ಧರ್ಮದಿಂದಾಳುತ್ತಲಿದ್ದನು. ಆ ನರೇಂದ್ರನಿಗೆ ಅತಿ ಸುಂದರನಾಗಿಯೂ ಕೋಟಿಸೂರ್ಯ ಪ್ರಕಾಶಮಾನನಾಗಿಯೂ ಇರುವ ಓರ್ವ ಕಂದನು ಜನಿಸಿದನು. ಪುತ್ರೋತ್ಪತ್ತಿಯನ್ನು ತಿಳಿದ ರಾಯನು ಕೇವಲ ಸಂತೋಷ ಭರಿತನಾಗಿ, ಬ್ರಹ್ಮಜ್ಞಾನಿಗಳಿಗೂ, ಅನಾಥರಾದ ಬಡಬಗ್ಗರಿಗೂ, ಇನ್ನೂ ಇತರರಿಗೂ ಉಚಿತಾನುಸಾರವಾಗಿ ಅನೇಕ ಕೋಟಿ ಧನವನ್ನು ದಾನಮಾರ್ಗವೂ ಳಿತ್ತು ಮಗನಿಗೆ ಜಾತಕರ್ಮಾದಿಗಳನ್ನು ನಡೆಸಿ, ಚಂದ್ರಕೇತುವೆಂಬಭಿದಾನವನ್ನಿತ್ತು ಅವನನ್ನು ಅತ್ಯಂತ ಪ್ರೇಮದಿಂದ ಸಲಹುತ್ತಾ, ಬಾಲನಿಗೆ ಐದು ಸಂವತ್ಸರಗಳಾಗಲು, ವಿದ್ಯಾಭ್ಯಾಸ ಮಾಡಿಸಿ, ಸಕಲ ವಿದ್ಯೆಗಳನ್ನು ಗುರುಮುಖದಿಂದ ಕಲಿಸುತಲಿದ್ದನು. ಬಾಲಕನು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೂ ವರ್ಧಿಷ್ಣುವಾಗಿ ಸಕಲ ವಿದ್ಯೆಗಳನ್ನು ಕಲಿಯುತ್ತಾ, ಅಸ್ತ್ರಶಸ್ತ್ರ ವಿದ್ಯೆಗಳಲ್ಲಿ ತುಂಬಾ ಆಸಕ್ತನಾಗಿ ಅನೇಕ ದಿವ್ಯಾಸ್ತ್ರ ಪ್ರಯೋಗಗಳನ್ನು ಅವುಗಳ ಉಪಸಂಹಾರ ಮಂತ್ರಗಳನ್ನೂ, ಶತ್ರುರಾಯರ ವ್ಯೂಹವನ್ನು ಭೇದಿಸುವಂಥಾ ತಂತ್ರಗಳನ್ನು ಗ್ರಹಿಸಲ್ಪಟ್ಟವನಾಗಿ ಪ್ರಾಯಸಮರ್ಥನಾಗಲು, ಒಂದಾನೊಂದು ದಿವಸ ತನ್ನ ಮನದೊಳಗೆ ಭೂಸಂಚಾರ ಮಾಡಬೇಕೆಂಬ ಅಭಿಲಾಷೆಯು ಜನಿಸಿದ ಕಾರಣ ಆರೀತಿ ಸಂಚಾರಮಾಡುವದಕ್ಕೆ ನಿಶ್ಚೈಸಿ, ತಂದೆತಾಯಿಗಳಿಗೆ ತಿಳಿಸದೆ ತನಗೆ ಬೇಕಾದ ಪದಾರ್ಥಗಳನ್ನು ತೆಗೆದುಕೊಂಡು ಅರ್ಧರಾತ್ರಿಯ ಸಮಯದಲ್ಲಿ ಕುದುರೆಯನ್ನೇರಿ ಏಕಾಂಗಿಯಾಗಿ ಪ್ರಯಾಣಮಾಡಿ, ಅತಿ ತೀವ್ರಬುದ್ಧಿಯುಳ್ಳವನಾಗಿ, ಕುದುರೆಯನ್ನೋಡಿಸುತ್ತಾ ಹೋಗುತ್ತಲಿದ್ದನು. ಬೆಳಗಾದಮೇಲೆ ರಾಯನು ಕುಮಾರಕಂಠೀರವನನ್ನು ಕಾಣದೆ ಸಂಗತಿಯನ್ನು ಸತಿಗೆ ಹೇಳಿ, ಈರ್ವರೂ ವ್ಯಸನಾಕ್ರಾಂತರಾಗಿ, ಪಟ್ಟಣದೊಳಗೆಲ್ಲಾ ಹುಡುಕಿಸುತ್ತಾ ಎಲ್ಲಿಯಾದರೂ ಇತರ ದೇಶಗಳಿಗೆ ಸಂಚಾರ ಹೋಗಲೆತ್ನಿಸಿರಬಹುದೆಂದು ಚಿಂತಿಸಿ, ಎಲ್ಲಿದ್ದರೂ ಹುಡುಕಿ ಕರೆತರುವಂತೆ ನಾಲ್ಕು ದಿಕ್ಕುಗಳಿಗೂ ದೂತರನ್ನು ಕಳುಹಿಸಿ, ಪುತ್ರನ ಮೇಲಣ ವ್ಯಾಮೋಹವನ್ನು ನೆನೆನೆನೆದು ದುಃಖಸಮುದ್ರದಲ್ಲಿ ಮುಳುಗಿ, ದಡವನ್ನು ಕಾಣದೆ ಇದ್ದರು. ಅತ್ತಲಾ ಚಂದ್ರಕೇತುವು ಗೊಂಡಾರಣ್ಯಮಧ್ಯದಲ್ಲಿ ನಿರ್ಭಯನಾಗಿ ಹೋಗುತ್ತಾ, ಹೆಬ್ಬುಲಿಗಳನ್ನು ಸದೆಬಡಿಯುತ್ತಾ, ಭಲ್ಲೂಕಗಳನ್ನು ಓಡಿಸುತ್ತಾ ಮದಿಸಿದ ಆನೆಗಳನ್ನು ಹೊಡೆಯುತ್ತಾ ಇನ್ನೂ ನಾನಾ ವಿಧಗಳಾದ ದುಷ್ಟಮೃಗಗಳನ್ನು ಸಂಹರಿಸುತ್ತಾ, ಮಧುರತರವಾದ ವನ್ಯ ಫಲಗಳನ್ನು ಭಕ್ಷಿಸುತ್ತಾ, ತಿಳಿಯಾಗಿ ಹರಿಯುತಲಿರುವ ನೀರನ್ನು ಕುಡಿಯುತ್ತಾ, ನದಿಗಳ ಪ್ರವಾಹಗಳಲ್ಲಿ ಈಜಾಡುತ್ತಾ, ವೃಕ್ಷಗಳ ನೆರಳಿನಲ್ಲಿ ವಿಶ್ರಮಿಸಿಕೊಳ್ಳುತ್ತಾ, ನಾನಾವಿಧಗಳಾದ ಸುಗಂಧಪುಷ್ಪಗಳನ್ನು ನೋಡಿನೋಡಿ ಅವುಗಳ ವಾಸನೆಯನ್ನು ಕೈಕೊಂಡು ಆನಂದಿಸುತ್ತಾ, ಬಹಳ ಶ್ರಮೆಯಿಂದ

ಮೂರು ತಿಂಗಳ ಪರ್ಯಂತರವೂ ಎಷ್ಟುದೂರ ಹೋದರೂ ಒಂದು ಪಟ್ಟಣ ವಾದರೂ ಹಳ್ಳಿಯಾದರೂ ಸಿಕ್ಕದೆ ಹೋದುದರಿಂದ ಬಹಳವಾಗಿ ದುಃಖಿಸುತ್ತಾ ಕಡೆಗೆ ಧೈರ್ಯವಂ ತಾಳ್ದು, ಮಾನುಷ ಸಂಬಂಧವಾದ ಈ ಕರ್ಮಭೂಮಿ ಯನ್ನು ದಾಂಟಿ, ದೇವಭೂಮಿಯನ್ನು ಸೇರಿದವನಾದನು. ಆ ಪ್ರದೇಶದಲ್ಲಿ ಅಲ್ಲಲ್ಲಿ ಬಿದ್ದು, ಪ್ರಕಾಶಿಸುತಲಿರುವ ನಾನಾ ವಿಧವಾದ ರತ್ನಗಳನ್ನು ನೋಡಿ ಆನಂದಪಡುತ್ತಾ, ದೇವಕುಸುಮಗಳನ್ನು ಕೊಯಿದು ಅವುಗಳ ಅಂದವನ್ನು ನೋಡಿ ವಾಸನೆಯನ್ನು ಆಘ್ರಾಣಿಸುತ್ತಾ ಮಧ್ಯಮಾರ್ಗದೊಳು ನಾನಾವಿಧ ಗಳಾದ ಕುಸುಮಗಳಿಂದಲೂ, ರಂಭಾ, ಪನಸ, ರಸಾಲ ಮೊದಲಾದ ವೃಕ್ಷ ಗಳಿಂದಲೂ, ಮಲ್ಲಿಕಾ, ಚಂಪಕಾದಿ ಪುಷ್ಪಗಳಿಂದಲೂ ರಾರಾಜಿಸುತ್ತಲಿರುವ ಒಂದಾನೊಂದು ಉದ್ಯಾನವನ್ನು ನೋಡಿ, ಅದನ್ನು ಪ್ರವೇಶಿಸಿ, ಕ್ರೀಡಾ ಯೋಗ್ಯಗಳಾದ ಪರ್ವತಗಳನ್ನೂ, ಸರೋವರಗಳನ್ನೂ ಅವುಗಳೊಳಿರುವ ಉದ ಕಗಳನ್ನು ನೋಡುತ್ತಾ ಹೋಗಿ, ಅದರ ಮಧ್ಯದೊಳು ಕಾಣಬಂದ ಕ್ರೀಡಾಸರ ಸ್ಸನ್ನು ನೋಡಿ, ಅದರ ಸಮೀಪವನ್ನೈದಿ, ಆ ಸರಸ್ಸಿಗೆ ನಾಲ್ಕು ದಿಕ್ಕುಗಳಲ್ಲಿಯೂ ಹಾಕಲ್ಪಟ್ಟಿರುವ ಸ್ಫಟಿಕ, ಇಂದ್ರನೀಲ ರತ್ನಾದಿಗಳ ಸೋಪಾನಗಳನ್ನೂ, ಅದರ ಮಧ್ಯದೊಳು ಕಾಂತಿಯುಕ್ತವಾಗಿರುವ ಸುವರ್ಣ ವಿಕಾರವಾದ ಕಮಲಗಳನ್ನು ಆ ಕಮಲ ಬಳ್ಳಿಗಳ ಮಧ್ಯದಲ್ಲಿ ಆಹಾರಕ್ಕೋಸ್ಕರ ಸಂಚರಿಸುತಲಿರುವ ಹಂಸ ಪಕ್ಷಿಗಳನ್ನೂ, ಈ ಅತಿಶಯಗಳನ್ನೆಲ್ಲಾ ನೋಡುತ್ತಾ, ಇದೇ ದೇವ ಸರಸ್ಸಿರ ಬಹುದೆಂದು ಯೋಚಿಸಿ, ಶ್ರಮವುಳ್ಳವನಾಗಿದ್ದರೂ ಅತಿ ಸಂತೋಷವನ್ನೈದಿ, ಕುದುರೆಯನ್ನಿಳಿದು ಆ ಸರಸ್ಸಿನಲ್ಲಿ ಸ್ನಾನವನ್ನು ಮಾಡಿ, ಅಲ್ಲಲ್ಲಿರುವ ವನಫಲ ಗಳನ್ನು ಭಕ್ಷಿಸಿ, ಜಲಪಾನವನ್ನು ಮಾಡಿ, ಮಾರ್ಗಾಯಾಸದಿಂದ ವಿಶ್ರಮಿಸಿ ಕೊಳ್ಳಬೇಕೆಂದು ಆ ಸೋಪಾನಗಳ ಮೇಲೆಯೇ ಮಲಗಿಕೊಂಡು, ಆನಂದಿಸುತ್ತಿ ರುವಷ್ಟರಲ್ಲಿ ದಿನನಾಥನಾದ ಸೂರ್ಯನು ಅಸ್ತಾದ್ರಿಯನ್ನೇರಿದನು.

ಬಳಿಕ ದೇವವಾದ್ಯಘೋಷಗಳು ಇವನ ಕಿವಿಗಳಿಗೆ ಕೇಳಬರಲಾಗಿ ಧಿಗ್ಗನೆ ಎದ್ದು ಕುಳಿತುಕೊಂಡು ನಾಲ್ಕು ದಿಕ್ಕುಗಳನ್ನು ಚೆನ್ನಾಗಿ ದೃಷ್ಟಿಸಿ ನೋಡಿದವ ನಾಗಿ ಪೂರ್ವಭಾಗದ ಕಡೆ ಅದ್ಭುತವಾದ ಒಂದು ಬೆಳಕನ್ನು ಕಂಡು, ತತ್ಕ್ಷಣದ ಲ್ಲಿಯೇ ತನ್ನ ಕಣ್ಣುರೆಪ್ಪೆಗಳು ಆ ಕಾಂತಿಯ ಜ್ವಾಲೆಗೆ ತಮ್ಮಷ್ಟಕ್ಕೆ ತಾವೇ ಮುಚ್ಚಿಕೊಳ್ಳಲು, ತಿರುಗಿ ಕಣ್ಣು ರೆಪ್ಪೆಗಳು ತೆಗೆಯುವುದಕ್ಕೆ ಆಗದೆ ಹೋದುದ ರಿಂದ ತನ್ನ ಮನಸ್ಸಿನಲ್ಲಿ ಓಹೋ ಇದೇನು ? ಕಾರಣವಿಲ್ಲದೆಯೇ ಅಕಾಲದಲ್ಲಿ ನನಗೆ ಅಂಧತ್ವವು ಸಂಭವಿಸಿತೆಂದು ಭಯಾಶ್ಚರ್ಯವುಳ್ಳವನಾಗಿ ಬಳಿಕ ಸ್ವಲ್ಪ ಹೊತ್ತಿನಲ್ಲಿಯೇ ಸಮೀಪಿಸಿ ಕೇಳಿಬರುವ ವಾದ್ಯರಭಸಗಳನ್ನು ಸರಸಸಲ್ಲಾಪ ಗಳ ನುಡಿಗಳನ್ನು ಕೇಳಿ ತರುವಾಯ ಸರಸ್ಸಿನಲ್ಲಿಳಿದು ಜಲಕ್ರೀಡೆಯನ್ನಾಡುವ

ಶಬ್ದಗಳನ್ನು, ಫಕಫಕನೆ ನಗುತ್ತಲಿರುವ ನಗೆಗಳನ್ನು ಕೇಳುವವರ ಕಿವಿಗಳಿಗೆ ಇಂಪಾಗಿರುವಂಥಾ ಈ ಆಶ್ಚರ್ಯಗಳನ್ನೆಲ್ಲಾ ಕೇಳಿದವನಾಗಿ ಕಣ್ಣುಗಳಿಂದ ನೋಡಲು ಯತ್ನವಿಲ್ಲದೆ ಬಳಿಕ ಸ್ವಲ್ಪಹೊತ್ತಿಗೆ ಮೆಲ್ಲಮೆಲ್ಲಗೆ ನಡೆಯುತ್ತಾ ಸಂಗಡಲೆ ಆ ಆಶ್ಚರ್ಯವನ್ನು ನೋಡಿ ಆನಂದವನ್ನೈದುತ್ತಾ ನಿದ್ದೆಬಾರದೆ ಬೆಳಗಾಗುವವರೆಗೂ ಆ ಸಂತೋಷಸಂಭ್ರಮದಲ್ಲಿಯೇ ಮಗ್ನನಾಗಿ ನಿದ್ರಾಶೂನ್ಯನಾದನು ಬೆಳಗಾದಮೇಲೆ ಅಲ್ಲಿ ಬಿದ್ದಿರುವ ನಾನಾವಿಧಗಳಾದ ಪುಷ್ಪವಿಶೇಷಗಳನ್ನು ನೋಡಿ ಓಹೋ ಇವುಗಳನ್ನುನೋಡಿದರೆ ದೇವಪುಷ್ಪಗಳೆಂದು ತಿಳಿಯಬರುವುದು. ಇಲ್ಲಿಗೆ ಜಲಕ್ರೀಡೆಗಾಗಿ ರಾತ್ರಿ ದೇವಕನ್ಯೆಯರು ಬಂದು ವಿನೋದಗಳನ್ನು ನಡೆಸುತ್ತಲಿರಲು, ಆ ಸಂಭ್ರಮಾತಿಶಯಗಳನ್ನು ನೋಡಲಿಕ್ಕಾಗದೆಯೇ ನನಗೆ ಅಂಧತ್ವ ಉಂಟಾಗಿತ್ತೆಂದು ಮನಸ್ಸಿನಲ್ಲಿ ನಿಶ್ಚೈಸಿ, ಅದರ ನಿಜವಾದ ವರ್ತಮಾನವನ್ನು ಅರಿಯುವ ಬಗೆಯಾವುದೆಂದು ಚಿತ್ತಚಾಂಚಲ್ಯ ಸಂಭವಿಸಿ, ಅಲ್ಲಿಂದ ಹೊರಟು ಹೋಗುತ್ತಾ ಬಹಳ ದಿವಸಗಳಿಗೆ ಭೃಗುಋಷಿಯುಂಬೋರ್ವ ತಾಪಸೋತ್ತಮನ ಆಶ್ರಮವನ್ನು ಸೇರಿ ಆ ಮಹಾಮುನಿಯ ಶಿಷ್ಯಸಮೂಹದಿಂದಾತನ ಪ್ರಭಾವಗಳನ್ನೆಲ್ಲಾ ಕೇಳಿ ತನ್ನ ಮನದೊಳಿರುವ ಸಂಶಯಗಳನ್ನು ನಿವೃತ್ತಿಮಾಡಿಕೊಳ್ಳಬೇಕೆಂದು ಯೋಚಿಸಿ, ಆ ಮುನೀಂದ್ರನಬಳಿಗೆ ಹೋಗಿ, ಆ ಮಹಾನುಭಾವನ ಅಡಿದಾವರೆಗಳಿಗೆ ನಮಸ್ಕರಿಸಿದನು. ಆ ತಪೋಧನನು ರಾಜತನಯನನ್ನು ಬಹಳವಾಗಿ ಸಂತೈಸಿ, ವೈದಡವಿ ಸಮೀಪದಲ್ಲಿ ಕುಳ್ಳಿರಿಸಿಕೊಂಡು ಎಲೈ ಪೃಥ್ವೀಶತನಯನೇ ! ನಿನ್ನ ತಂದೆತಾಯಿಗಳಾರು, ನಿನ್ನ ನಿವಾಸವು ಯಾವ ದೇಶವು ಅಕಟಕಟಾ ಈ ದೇವಭೂಮಿಗೆ ಮಾನವರು ಬರಬಹುದೆ ಬಾಲಭಾವದಿಂದ ನೀನು ಅರಿಯದವನಾಗಿ ಇಲ್ಲಿಗೆ ಬಂದಿರುವೆ. ನೀನು ಬಂದ ದಾರಿಯನ್ನು ಹಿಡಿದುಕೊಂಡು ಹೋಗೆಂದು ನುಡಿದನು. ಆಗಲಾ ರಾಜಪುತ್ರನು ಮುನಿಯ ಪಾದಗಳಿಗೆ ಪುನಃ ನಮಸ್ಕರಿಸಿ ತನ್ನ ದೇಶವನ್ನು, ತಂದೆತಾಯಿಗಳನ್ನು ತಿಳಿಸಿ, ಎಲೈ ಮಹಾತ್ಮನೇ! ನಾನೊಂದು ಸರಸ್ಸಿನ ಬಳಿಯಲ್ಲಿ ದೊಡ್ಡದಾದ ಬೆಳಕನ್ನು ಕಂಡೆನು, ತಕ್ಷಣದಲ್ಲಿಯೇ ಆ ಕಾಂತಿಯು ರಭಸದಿಂದ ನನ್ನ ಕಣ್ಣುಗಳು ಮುಚ್ಚಿಕೊಂಡವು. ಬಳಿಕ ದಿವ್ಯವಾದ್ಯಗಳ ಘೋಷಗಳನ್ನು ಕೇಳಿದೆನು, ಸ್ತ್ರೀಯರು ಜಲಕ್ರೀಡೆಯನ್ನು ಆಡುವದಕ್ಕೆ ಬಂದಿದ್ದ ಕನ್ಯೆಯರು ಯಾರು ? ಆ ಅಂಗನಾಮಣಿಗಳ ವೃತ್ತಾಂತವೇನು ? ಇವುಗಳನ್ನೆಲ್ಲಾ ನನಗೆ ದಯೆಯಿಂದ ತಿಳುಹಬೇಕೆಂದು ಪ್ರಾರ್ಥಿಸಿದನು. ಅದಕ್ಕಾತಪೋಧನನು ರಾಜತನಯನ ಹೃದಯದಲ್ಲಿ ನಾಟಿರುವ ಸಂಶಯಗಳಿಗೆ ಆಶ್ಚರ್ಯವನ್ನೈದಿ ತನ್ನ ಮನದೊಳಗೆ ತಾನೇ ಓಹೋ ಈತನನ್ನು ನೋಡಿದರೆ ಬಾಲನಾಗಿರುವನು. ಇವನಿಗೆ ಆ ರಹಸ್ಯಗಳನ್ನೆಲ್ಲಾ ಹೇಳಿದರೆ ಕಾಮಪರವಶನಾಗಿ ಪ್ರಾಣಗಳನ್ನು ತೊರೆದುಕೊಳ್ಳುವನೋ ಏನೋ

ಆದ್ದರಿಂದ ಕ್ರೂರವಾದ ವಾಕ್ಯಗಳಿಂದ ಇವನ ಅಭಿಪ್ರಾಯವನ್ನು ಭೇದಿಸಿ ತಿಳಿದುಕೊಂಡು, ವ್ಯಾಜ್ಯಾಂತರವನ್ನು ಕಲ್ಪಿಸಿ ಇವನ ತಂದೆತಾಯಿಗಳ ಬಳಿಗೆ ಇವನು ಹಿಂತಿರುಗುವಂತೆ ಮಾಡಬೇಕೆಂದು ಯೋಚಿಸಿ, ಅವನನ್ನು ಕುರಿತು, ಎಲೈ ಮಗುವೇ! ಸಾಕ್ಷಾತ್ ತಂದೆತಾಯಿಗಳನ್ನು ದುಃಖವೆಂಬ ಸಮುದ್ರದಲ್ಲಿ ಮುಳುಗುವಂತೆ ಮಾಡಿ, ಅವರ ಸಂಗಡ ಹೇಳದೆ, ಕರ್ಮಭೂಮಿಯನ್ನು ತ್ಯಜಿಸಿ, ಈ ದೇವಭೂಮಿಗೆ ಬಂದ ತಪ್ಪಿಗಾಗಿ ಸಾಲದೆ ಅದನ್ನು ಮರೆಮಾಚಿ, ದೇವರಹಸ್ಯಗಳನ್ನು ಕೂಡ ವಿಚಾರಮಾಡಲೆತ್ನಿಸಿರುವೆ. ನೀನು ಇಲ್ಲಿಯೇ ಇದ್ದರೆ ತಪ್ಪದೇ ಕೇಡುಂಟಾಗುವದು. ಶೀಘ್ರದಲ್ಲಿ ನಿನ್ನ ಸ್ವದೇಶಕ್ಕೆ ಹೋಗೆಂದು ಮುನಿಯು ಕೋಪಾಕ್ರಾಂತಲೋಚನನಾಗಿ ನುಡಿದನು. ಅದನ್ನು ಕೇಳಿದ ರಾಜತನಯನು ಭಯಪಡದೆ ಧೈರ್ಯವನ್ನವಲಂಬಿಸಿ, ಆ ಮುನೀಂದ್ರನ ಪಾದಕಮಲಗಳಿಗೆ ನಮಸ್ಕರಿಸಿ, ಆತನ ಪಾದಗಳಮೇಲೆ ಬಿದ್ದು ಹೊರಳಾಡುತ್ತಾ, ಎಲೈ ತಾಪಸವರ್‍ಯನೇ! ನಿನ್ನಂಥಾ ತಪೋಧನನು ಅನಾಥನಾಗಿಯೂ, ಅಸಹಾಯನಾಗಿಯೂ, ದೀನನಾಗಿಯೂ ಬಂದಿರುವ ನನ್ನನ್ನು ಸಂರಕ್ಷಿಸದೆ, ಭಯೋತ್ಪಾತವನ್ನುಂಟುಮಾಡಿ, ಬಂದ ದಾರಿಯನ್ನು ಹಿಡಿದು ತೆರಳೆಂದು ಹೇಳುವುದು ಧರ್ಮವೇ? ತಪೋವೃತ್ತಿಯಿಂದಿರುವ ಸಾಧುಗಳಾದ ನಿಮಗೆ ಇದು ಚಿತ್ತವೃತ್ತಿಯಲ್ಲ. ಈ ಅರಣ್ಯದಲ್ಲಿ ನೀನಲ್ಲದೆ ನನಗೆ ಇತರ ರಕ್ಷಕರು ಇಲ್ಲ. ಪ್ರಾಣಗಳಲ್ಲಿಯೂ, ದೇಹದಲ್ಲಿಯೂ ನನಗೆ ಯಾವ ಅಪೇಕ್ಷೆಯೂ ಇರುವುದಿಲ್ಲ. (ಜಾತಸ್ಯಮರಣಂ ಧ್ರುವಂ) ಎಂಬಂತೆ ಜನ್ಮಿಸಿದವನಿಗೆ ಮರಣವು ಸಿದ್ಧವಾಗಿಯೇ ಇರುವದರಿಂದ ನಿನ್ನ ಅಡಿದಾವರೆಗಳ ಶುಶ್ರೂಷೆಯೇ ನನಗೆ ಶಾಶ್ವತವಾಗಿರಲೆಂದು ಹೇಳಿ ಆತನನ್ನು ಬಹಳವಾಗಿ ಸ್ತುತಿಸುತ್ತಾ ಬರಲಾಗಿ, ಮುನೀಂದ್ರನು ಅವನ ಧೈರ್ಯವಚನಗಳಿಗೆ ಸಂತೋಷಪರವಶನಾಗಿ ಇಂತೆಂದನು.

## ಭೃಗುಋಷಿಯಿಂದ ಚಂದ್ರಕೇತುರಾಯನಿಗೆ ಹೇಳಲ್ಪಟ್ಟ ದೇವರಹಸ್ಯ.

ಎಲೈ ರಾಜಾತ್ಮಜನೇ! ನಿನಗಿರುವ ದೃಢತರವಾದ ಮನಸ್ಸನ್ನು ಪರೀಕ್ಷೆ ಮಾಡುವುದಕ್ಕೆ ಕಠಿಣವಾದ ಮಾತುಗಳನ್ನಾಡಿದೆನಲ್ಲದೆ ಮತ್ತಾವದಕ್ಕೂ ಅಲ್ಲ. ಧೈರ್ಯವಂತನಾದುದರಿಂದ ನಿನ್ನನ್ನು ಬಹಳವಾಗಿ ಮೆಚ್ಚಿರುವೆನು. ದೇವರಹಸ್ಯವನ್ನು ನಿನಗೆ ಹೇಳುವೆನು. ಅಚಲಭಾವದಿಂದ ಕೇಳು. ಮರುತ್ತನೆಂಬೋರ್ವ ಗಂಧರ್ವರಾಜನಿಗೆ ಮಾಣಿಕ್ಯಪ್ರಭೆಯೆಂಬ ಓರ್ವ ಲಲನಾಮಣಿಯು ಪುತ್ರಿಯಾಗಿರುವಳು. ಅವಳ ಸೌಂದರ್‍ಯವನ್ನು ವರ್ಣಿಸಿ ಹೇಳುವುದಕ್ಕೆ ತ್ರಿಮೂರ್ತಿಗಳಿಗೂ ಅಸಾಧ್ಯವಾಗಿರುವುದು. ಆ ಪೂರ್ಣೇಂದುಮುಖಿಯು ನವರತ್ನಖಚಿ





ಚಂದ್ರಕೇತುಮಹಾರಾಯ. ಭೃಗುಮಹಾಋಷಿಯು.

ತಗಳಿಂದ ನಿರ್ಮಿಸಲ್ಪಟ್ಟಿರುವ ಒಂಭತ್ತು ಉಪ್ಪರಿಗೆಗಳನ್ನು ಬಿಟ್ಟು, ಸಂಪೂರ್ಣ ಹುಣ್ಣಿಮೆಯ ದಿವಸ ತನ್ನ ದೂತಿಯರೊಂದಿಗೆ ಸೇರಿ ಜಲಕ್ರೀಡೆಯನ್ನಾಡುವು ದಕ್ಕಾಗಿ ನೀನು ನೋಡಿದ ಸರಸ್ಸಿಗೆ ಬರುತ್ತಲಿರುವಳು. ಆ ಕಾಲದಲ್ಲಿ ಯಾರಾ ದರೂ ಇತರರು ಆ ಅಂಗನಾರತ್ನವನ್ನು ಸಂಗ್ರಹಿಸುವರೆಂಬ ಶಂಕೆಯಿಂದ ಆ ಕಾಲದಲ್ಲಿ ಅಲ್ಲಿ ಬರಬಹುದಾದವರಿಗೆ ಕಣ್ಣುಗಳು ಮುಚ್ಚಿಹೋಗುವಂತೆ ಆ ಮರುತ್ತನು ಶಾಪವನ್ನು ಕೊಟ್ಟಿರುವನು. ಆ ಶಾಪನಿಮಿತ್ತದಿಂದಲೇ ನಿನಗೆ ಕಣ್ಣುಗಳು ತೆಗೆಯಲಸಾಧ್ಯವಾಗಿ ಮುಚ್ಚಲ್ಪಟ್ಟವೆಂದು ಹೇಳಿದನು. ಅದನ್ನು ಕೇಳಿದ ಚಂದ್ರಕೇತುವು ತನ್ನ ಮೂಗಿನ ಮೇಲೆ ಬೆರಳನಿಟ್ಟುಕೊಂಡು ಆಶ್ಚರ್ಯ ವನ್ನು ಹೊಂದಿ, ಓಹೋ ದೈವವೇ! ನಾನು ಆ ನಾರೀರತ್ನವನ್ನು ಯಾವ ಬಗೆ ಯಿಂದ ನೋಡಲಾಗುವುದು. ಅಂಥವಳು ನನಗೆ ಲಭಿಸುವ ದಾರಿಯಾವುದು ಎಂಬದಾಗಿ ಮನದೊಳು ಆ ಲತಾಂಗಿಯನ್ನೇ ನೆನೆಯುತ್ತಾ, ಮುನೀಂದ್ರನ ಅಡಿದಾವರೆಗಳಿಗೆ ನಮಿಸಿ, ಎಲೈ ಮಹಾನುಭಾವನೇ! ನಿನ್ನ ಪ್ರಭಾವದಿಂದ ನನಗಾ ಕನ್ಯಾಮಣಿಯು ದೊರೆಯುವ ಮಾರ್ಗವನ್ನರುಹಬೇಕಲ್ಲದೆ ಅನ್ಯಥಾ ಇಲ್ಲವೆಂದು ಆತನನ್ನು ಬಹಳವಾಗಿ ಸ್ತುತಿಸುತ್ತಾ ಬರಲು, ಮುನಿಪನು ನಸು ನಗುತ್ತಾ, ಎಲಾ ಬಾಲನೇ! ಆ ಮರುತ್ತನೆಂಬ ಗಂಧರ್ವನು ಅತಿ ಮಾಯಾ ಸಮರ್ಥನಾಗಿಯೂ, ರಣಶೂರನಾಗಿಯೂ, ನನಗೂ ನಿನಗೂ ಸಾಧ್ಯಪಡದವ ನಾಗಿಯೂ ಇರುವನು. ಅಂಥವನನ್ನು ಗೆಲ್ಲುವ ಉಪಾಯ ಮಾರ್ಗವನ್ನು ಪೇಳುವೆನು ಕೇಳು. ನೀನು ಇಲ್ಲಿಂದ ಹತ್ತುಯೋಜನ ದೂರವಾಗಿ ನೆಟ್ಟಗೆ

ಹೋದರೆ ಅಲ್ಲಿ ಒಂದು ಕಾಲಭೈರವನ ಆಲಯವೂ, ಒಂದು ಬೇಲದ ಹಣ್ಣಿನ ಮರವೂ ಕಾಣುವುದು. ಅದಕ್ಕೆ ಪಶ್ಚಿಮಭಾಗದ ಕಡೆ ಹತ್ತುಗಾವುದ ದೂರ ಹೋದರೆ, ಅಲ್ಲಿ ಒಂದು ನಾಗಮಲ್ಲಿಗೆಯ ತೋಟವು ಕಾಣುವುದು. ಆ ತೋಟದ ಮಧ್ಯ ಭಾಗದೊಳು ಪಚ್ಚೆಯ ಕಲ್ಲಿನಂದದ ಒಂದು ಬಂಡೆ ಇರುವುದು. ಆ ಬಂಡೆಯ ಸಮೀಪದಲ್ಲಿ ಒಂದು ಅತ್ತಿಯ ಮರವೂ ಉಂಟು ನೀನು ಅಲ್ಲಿಗೆ ಹೋಗಿ ಆ ಅತ್ತೀ ಮರವನ್ನು ಹತ್ತಿ ಅದರ ಮೇಲುಭಾಗದಲ್ಲಿರುವ ಕೊನೆಯ ರೆಂಬೆಯಮೇಲೆ ಕುಳಿತುಕೊಂಡು ನಾನೀಗ ಉಪದೇಶಿಸುವ ಮಂತ್ರವನ್ನು ಜಪಿಸುತ್ತಾ ಇರು, ಸ್ವಲ್ಪ ಹೊತ್ತಿನಮೇಲೆ ಆ ಪಚ್ಚೆಯ ಬಂಡೆಯು ತಾನಿರುವ ಸ್ಥಳದಿಂದ ಮೇಲಕ್ಕೆ ಬಂದು, ಅಲ್ಲಿ ಒಂದು ಬಿಲವು ತೋರುವುದು. ಯಾವಾಗ ನಿನಗೆ ಬಿಲವು ಕಾಣಬರುವುದೋ ಆಗ ನೀನು ಮರದ ಮೇಲಿನಿಂದ ಕೆಳಕ್ಕೆ ಇಳಿದು ಬಂದು ನಿರ್ಭಯವಾಗಿ ಆ ಬಿಲದಲ್ಲಿ ಹೊರಟು ಹೋದರೆ ಒಂದು ಯೋಜನದ ದೂರದಲ್ಲಿ ದೊಡ್ಡದಾದ ಒಂದು ಪ್ರಾಸಾದವು ಅದರ ಬಳಿಯಲ್ಲಿ ಒಂದು ಕ್ರೀಡಾಯೋಗ್ಯವಾದ ಉಪವನವು, ಆ ವನದೊಳಗೆ ಒಂದು ದಿವ್ಯವಾದ ಸರೋವರವು ಕಾಣಿಸುವುದು. ಆ ಸರಸ್ಸಿನ ಸಮೀಪದಲ್ಲಿರುವ ಒಂದು ಸಾಮಾನ್ಯವಾದ ಕಲ್ಲಿನಮೇಲೆ ಓರ್ವ ವೃದ್ಧಳಾದ ಸ್ತ್ರೀಯು ರೋದನಮಾಡುತ್ತಾ ಕುಳಿತಿರುವಳು. ನೀನು ಧೈರ್ಯವಾಗಿ ಅವಳ ಬಳಿಗೆ ಹೋಗಿ ಅವಳಿಗೆ ತನ್ನ ವೃತ್ತಾಂತವನ್ನು ತಿಳುಹಿ ನನ್ನೆಡೆಗೆ ಕರೆತಂದರೆ ಬಳಿಕ ನಿನ್ನ ಇಷ್ಟ ಕಾರ್ಯವು ಸಿದ್ಧಿಸುವುದೆಂದು ಹೇಳಿ ರಹಸ್ಯವಾಗಿ ಒಂದು ಮಂತ್ರವನ್ನು ಉಪದೇಶಿಸಿ ಆ ರಾಜತನಯನನ್ನು ಕಳುಹಿದನು. ಬಳಿಕಲಾ ಚಂದ್ರಕೇತುವು ಅತ್ಯಂತ ಉತ್ಸಾಹಪರವಶನಾಗಿ ಕುದುರೆಯನ್ನೇರಿ ಋಷಿಯ ಅಪ್ಪಣೆಯಂತೆ ಉತ್ತರದಿಕ್ಕಿಗಭಿಮುಖನಾಗಿ ಹೋಗಿ ಆತನ ಅಪ್ಪಣೆಯ ಪ್ರಕಾರ ಬೇಲದ ಮರವನ್ನು ಗುಡಿಯನ್ನು ಕಂಡು, ಆ ಕಾಲಭೈರವನನ್ನು ಭಕ್ತಿಯಿಂದ ಪೂಜಿಸಿ, ಆ ಗುಡಿಗೆ ಪಶ್ಚಿಮದಿಕ್ಕಿನಲ್ಲಿರುವ ನಾಗಮಲ್ಲಿಗೆಯ ತೋಟವನ್ನು ಅದರ ಮಧ್ಯದಲ್ಲಿದ್ದ ಪಚ್ಚೆಕಲ್ಲಿನ ಬಂಡೆಯನ್ನು ಅತ್ತಿಯಮರವನ್ನು ಕಂಡು ಆ ಅತ್ತಿಮರದ ಕೊಟ್ಟ ಕೊನೆಗೇರಿ ಮರದಮೇಲೆ ಕುಳಿತುಕೊಂಡು ತಾಪಸೋತ್ತಮನು ಉಪದೇಶಿಸಿದ ಮಂತ್ರವನ್ನು ಪುರಶ್ಚರಣೆಮಾಡುತ್ತಾ ಇರಲಾಗಿ ಆ ಬಳಿ ಇದ್ದ ಬಂಡೆ ಸ್ವಸ್ಥಾನವನ್ನು ತೊರೆದು ಮೇಲಕ್ಕೆ ಬಂದು ಮೇಲೆ ಬಿಲವು ಕಾಣಿಸಲಾಗಿ ರಾಜತನಯನು ಭಯವಿಲ್ಲದೆ ಆ ಬಿಲದೊಳು ತೂರಿಹೋಗುತ್ತಾ, ಅಲ್ಲಲ್ಲಿ ಸೂರ್ಯ ಚಂದ್ರರಂತೆ ದೇದೀಪ್ಯಮಾನವಾಗಿ ಕಾಣುತ್ತ ಬಂದ ದಿವ್ಯರತ್ನಗಳನ್ನು ನೋಡುತ್ತಾ ಹೋಗಲಾಗಿ ಸ್ವಲ್ಪ ದೂರದಲ್ಲಿ ಒಂದು ದಿವ್ಯತರವಾದ ಅಂತಃಪುರವನ್ನು ನೋಡಿ ಆಶ್ಚರ್ಯಭರಿತನಾಗಿ, ಅಹಹಾ ಇದು ಯಾರ ಅಂತಃಪುರವೊ ತಿಳಿಯದು

ಇಂಥಾದ್ದನ್ನು ಎಂದಿಗೂ ನಾನು ನೋಡಿಯೆ ಇಲ್ಲ. ಇದರೊಳಗೆ ಏನೇನು ಅತಿಶಯಗಳಿರುವವೋ ಅರಿಯೆನು, ಇಷ್ಟುದೂರ ಬಂದು ಸುಮ್ಮನೆ ಹೋಗುವದು ರಾಜಧರ್ಮವಲ್ಲವೆಂದು ಕ್ಷಾತ್ರವನ್ನು ತಾಳಿ, ಋಷಿಯ ಅಪ್ಪಣೆ ಇಲ್ಲದಿದ್ದರೂ ಒಳಹೊಕ್ಕು ನೋಡಿಬರುವೆನೆಂದು ಯೋಚಿಸಿ ಮೊದಲನೆ ಅಂತಃಪುರಕ್ಕೆ ಹೋಗಿ ಅದರ ಮಧ್ಯದಲ್ಲಿ ಮಧ್ಯಾಹ್ನದ ಸೂರ್ಯನಂತೆ ಪ್ರಕಾಶಿಸುತ್ತಲಿರುವ ದಿವ್ಯ ರತ್ನವನ್ನು ನೋಡಿ ಕಣ್ಣುಗಳಿಗೆ ಧಳುಕುಂಟಾಗಿ ನೇತ್ರಗಳು ಮುಚ್ಚಿಕೊಳ್ಳಲು ಸ್ವಲ್ಪ ಹೊತ್ತಿನ ಮೇಲೆ ಕಣ್ಣುಗಳನ್ನು ತೆರೆದು ಆ ಅಂತಃಪುರದ ನಾಲ್ಕು ಮೂಲೆಗಳಲ್ಲಿಯೂ ದಿವ್ಯವಸ್ತ್ರಾಭರಣಗಳಿಂದ ಅಲಂಕರಿಸಿ ನಿಲ್ಲಿಸಲ್ಪಟ್ಟಿರುವ ಅಪರಂಜಿಯ ಪ್ರತಿಮೆಗಳನ್ನು ಕಂಡು ದೇವನಾಗ ಕನ್ನಿಕೆಯರೆಂದು ಭಾವಿಸಿ, ಅಹಹಾ ಅಪಾಯವೇನು ಸಂಭವಿಸುವುದೋ ಎಂದು ಸ್ವಲ್ಪ ಹೊತ್ತು ನಿರೀಕ್ಷಿಸಿ ಆ ಪ್ರತಿಮೆಗಳು ಮಾತನಾಡದಿರಲು ಅವುಗಳನ್ನು ಕುರಿತು, ಎಲೈ-ಅಂಗನೆಯರಿರಾ ಮನೆಯನ್ನು ತುಳಿದು ಬಂದರೂ ವಿಚಾರಿಸದೆ ನಿಶ್ಶಬ್ದವಾಗಿರಲು ಕಾರಣವೇನು ಅಯ್ಯಯ್ಯೋ ಮಾತುಗಳೇನು ಭಂಗಾರವೋ ನಾವೇ ಮಾತನಾಡಿಸೋಣವೆಂದು ಯೋಚಿಸಿ, ಓಹೋ ಇಂದುಮುಖಿಯರಿರಾ ನೀವು ಮಾತನಾಡದೆ ಇರಲು ಕಾರಣವೇನು ? ನನ್ನನ್ನು ಸಾಮಾನ್ಯವಾಗಿ ತಿಳಿದು ಅಲಕ್ಷ್ಯಮಾಡುವುದುಚಿತವೆ ನನ್ನೊಡನೆ ಮಾತನಾಡದಿರುವ ನಿಮಗೆ ಮನಃಕೊರತೆಯುಂಟಾಗುವದು. ಅಕಟಕಟಾ ನಾನು ಸಂಭಾಷಣೆಗೆ ಅನರ್ಹನಾದ ಅಯೋಗ್ಯನೆ ಅನ್ಯರನ್ನೀರೀತಿಯಾಗಿ ಭಯಪಡಿಸಬಹುದೆ ನಿಮ್ಮ ಮುಖವನ್ನಾದರೂ ನನಗೆ ತೋರಿಸಬಾರದೇ ಎಂಬದಾಗಿ ಎಷ್ಟು ಘಟ್ಟಿಯಾಗಿ ಕೂಗಿದರೂ ಅವುಗಳು ಚಲಿಸದೆ ಇರುವದನ್ನು ನೋಡಿ ಇದೇನೋ ಆಶ್ಚರ್ಯವೆಂದೆಣಿಸಿ ಅವುಗಳ ಸಮೀಪಕ್ಕೆ ಹೋದರೆ ಅಪಾಯವೇನುಂಟಾಗುವುದೋ ಏನುಮಾಲಿ ? ಎಂದು ಬಹಳವಾಗಿ ಚಿಂತಿಸುತ್ತಾ ಸ್ವಲ್ಪ ಹೊತ್ತಿನಮೇಲೆ ಮನ್ಮಥವಿಕಾರವುಳ್ಳವನಾಗಿ ತೀವ್ರದಿಂದ ಹೋಗಿ ಅವುಗಳಲ್ಲೊಂದನ್ನು ಆಲಿಂಗನ ಮಾಡಿಕೊಂಡನು. ಆಗ ಸ್ಥಂಭೀಭೂತದಂತೆ ನಿಂತಿರುವ ಬೊಂಬೆಯನ್ನು ಕಂಡು ಇದು ಹೆಂಗಸಲ್ಲ. ಅಪರಂಜಿಯ ಪ್ರತಿಮೆಯೆಂದು ಭಾವಿಸಿ ನನ್ನಂಥಾ ಹುಚ್ಚನು ಲೋಕದಲ್ಲಿಲ್ಲವೆಂದು ತನ್ನನ್ನು ತಾನೇ ನಿಂದಿಸಿಕೊಳ್ಳುತ್ತಾ ಅಲ್ಲಿಂದ ಮುಂದಕ್ಕೆ ಸ್ವಲ್ಪದೂರ ಹೋಗಿ ನವರತ್ನಖಚಿತವಾದ ಚಪ್ಪರಕಾಲು ಮಂಚವನ್ನು ಅದರ ನಾಲ್ಕು ಮೂಲೆಗಳಲ್ಲಿಯೂ ದೀಪದಂತೆ ಉರಿಯುತ್ತಲಿರುವ ನಾಗರತ್ನಗಳನ್ನೂ ದಿವ್ಯತರವಾದ ಹಾಸಿಗೆ ದಿಂಬುಗಳನ್ನೂ ಅತ್ತರು ಪೆಟ್ಟಿಗೆಯನ್ನೂ ನಾನಾತರಗಳಾದ ಅಪರಂಜಿಯ ವಸ್ತುಗಳನ್ನೂ ಕಂಡು ಅತ್ಯಂತ ಸಂತೋಷಭರಿತನಾಗಿ ಆಹಾ ! ಈ ಹಾಸಿಗೆಯ ಮೇಲೆ ಸ್ವಲ್ಪ ಹೊತ್ತು ಮಲಗಿ ನಿದ್ರೆಮಾಡಿದರೆ ಅಮರಲೋಕದ ಸುಖವನ್ನನು

ಭವಿಸಿದಂತೆ ಆಗುವುದೆಂದು ಯೋಚಿಸಿ ಆ ಹಾಸಿಗೆಯ ಮೇಲೆ ಮಲಗಿಕೊಂಡು ಆಯಾಸವನ್ನು ವಿಶ್ರಮಿಸಿಕೊಳ್ಳುತ್ತಲಿರಲಾಗಿ ಹಾಗೆಯೇ ರಾಜಪುತ್ರನಿಗೆ ನಿದ್ರೆ ಬಂದಿತು. ಆ ರಾತ್ರಿ ಓರ್ವ ನಾಗಕನ್ನಿಕೆಯು ಅಲ್ಲಿಗೆ ಬಂದು ಮೊದಲನೆ ಅಂತಃಪುರದಲ್ಲಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಬಳಿಕ ತನ್ನ ಜೊತೆಯೊಳಿದ್ದ ದೂತಿಯರನ್ನು ಅಲ್ಲಿಯೆ ಬಿಟ್ಟು ತನಗೆ ಇಷ್ಟವಾದ ಫಲಗಳನ್ನು ಭಕ್ಷಿಸಿ ಮಧು ವನ್ನು ಕುಡಿದು ಒಳಕ್ಕೆ ಹೋಗಿ ರತ್ನ ಶಯನದ ಮೇಲೆ ನಿರ್ಭಯವಾಗಿ ಮಲಗಿ ನಿದ್ರೆಮಾಡುತಲಿರುವ ಸುಂದರ ರೂಪವುಳ್ಳ ಪುರುಷನನ್ನು ನೋಡಿ ಇವನಾರೋ ಪುಣ್ಯಪುರುಷನೆಂದು ಭಾವಿಸಿ ಆತನನ್ನು ನಿದ್ರೆಯಿಂದೆಚ್ಚರಮಾಡಿ ಎಲೈ ಪುಣ್ಯಪು ರುಷನೇ ನನ್ನ ಅಂತಃಪುರಕ್ಕೆ ನಿರ್ಭಯವಾಗಿ ಬಂದು ಶಯನದ ಮೇಲೆ ಮಲಗಿ ಸುಖನಿದ್ರೆಯನ್ನು ಮಾಡುವುದಕ್ಕೆ ನಿನಗೆ ಧೈರ್ಯವೆಂತುಂಟಾಯಿತು ನೀನಾರು ? ಇಲ್ಲಿಗೆ ಬರಲು ನಿಮಿತ್ತವೇನು ? ಎಂದು ಕೇಳಲಾಗಿ ರಾಜತನಯನು ಝಗ್ಗನೆ ಎದ್ದು ಆಶ್ಚರ್ಯವನ್ನೈದಿ, ಆ ನಾರೀಮಣಿಯ ಅಂದವನ್ನು ನೋಡಲು ಕಣ್ಣು ಗಳು ಸಾಲದೆ ಅವಳನ್ನು ಕುರಿತು, ಎಲೈ ನಾರೀರತ್ನವೇ ಆಯಾಸವಂ ತಡೆಯ ಲಾರದೆ ಇಲ್ಲಿ ಮಲಗಿದೆನು. ಈ ಹಾಸಿಗೆಯು ನಿನ್ನದಾದಾಗ್ಯೂ ನಿದ್ರಾಸುಖ ದೊಳಿರುವ ನನ್ನನ್ನು ಭಯರಹಿತಳಾಗಿ ನೀನು ಎಚ್ಚರಮಾಡಬಹುದೇ ? ನೀನು ಯಾರು ? ನಿನ್ನ ವೃತ್ತಾಂತವನ್ನೆಲ್ಲಾ ತಿಳುಹಿ ಬಳಿಕ ನೀನು ಸುಖನಿದ್ರೆಯನ್ನು ಮಾಡೆಂದು ನುಡಿದನು. ಆ ನಾರೀರತ್ನವು ಅವನ ಧೈರ್ಯಕ್ಕೂ ಸೊಬಗಿಗೂ ಮೆಚ್ಚಿದವಳಾಗಿ ಅವನಲ್ಲಿ ಮನವುಂಟಾಗಿ ಇಂತೆಂದಳು. ಕೇಳೈ ರಾಜಾತ್ಮಜನೇ ! ಅನಂತನೆಂಬ ನಾಗರಾಜನಿಗೆ ಕಾಂತಾಮಣಿ, ಚಂದ್ರಕಾಂತಾಮಣಿ, ಪೂರ್ಣ ಚಂದ್ರಕಾಂತಾಮಣಿ, ಪರಿಪೂರ್ಣಚಂದ್ರಕಾಂತಾಮಣಿ, ಸರ್ವಪರಿಪೂರ್ಣಚಂ ದ್ರಕಾಂತಾಮಣಿ ಎಂಬದಾಗಿ ಈ ಐದು ಜನ ಪುತ್ರಿಯರುಂಟು. ಅವರಲ್ಲಿ ದೊಡ್ಡವಳಾದ ಕಾಂತಾಮಣಿ ಎಂಬುವಳು ನಾನೇ. ಕಾಮವಶದಿಂದ ಸಮಸ್ತ ಲೋಕವನ್ನು ನಾವು ಸಂಚರಿಸಬಲ್ಲೆವು. ಇದು ನಮ್ಮಗಳಿಗೆ ವಿನೋದವಾದ ಅಂತಃಪುರವು ನಾವು ತಿಂಗಳಿಗೊಂದುಸಾರಿ ಇಲ್ಲಿಗೆ ಬಂದು ವಿಹಾರದಿಂದ ಹಿಂತಿರುಗಿ ಹೋಗುವೆವೆಂದು ನುಡಿದು ಆತನೊಡನೆ ಕ್ರೀಡಾಸುಖಗಳನ್ನನು ಭವಿಸಿ ಅವನ ವೃತಾಂತವನ್ನೆಲ್ಲಾ ತಿಳಿದುಕೊಂಡು ಅವನು ನಿದ್ರೆಯೊಳಿರು ವಾಗ ತಿಳಿಯದಂತೆ ದೂತಿಯರನ್ನು ಕರೆದುಕೊಂಡು ತನ್ನ ಸ್ವಸ್ಥಾನಕ್ಕೆ ತೆರ ಳಿದಳು. ಬೆಳಗಾದ ಮೇಲೆ ಚಂದ್ರಕೇತುವು ಪಕ್ಕದಲ್ಲಿ ನಾಗಕನ್ಯೆಯನ್ನು ಕಾಣದೆ ಬಹಳವಾಗಿ ದುಃಖಿಸುತ್ತಾ ಮೇಲಕ್ಕೆ ಎದ್ದು ಅಲ್ಲಿನ ಅಂದಚಂದಗ ಳನ್ನೆಲ್ಲಾ ಚೆನ್ನಾಗಿ ನೋಡಿ ಆನಂದವನ್ನೈದಿ ಪುನಃ ಸರಸ್ಸಿನಲ್ಲಿ ಸ್ನಾನಮಾಡಿ ದಿವ್ಯತರಮಾದ ವನ್ಯಫಲಗಳನ್ನು ಭಕ್ಷಿಸಿ ಅಲ್ಲಿಟ್ಟಿದ್ದ ಮಧುವನ್ನು ಯಥೇ

ಚ್ಛವಾಗಿ ಪಾನಮಾಡಿ ಸೂರ್ಯಾಸ್ತಮಾಗಲು, ಹಿಂದಣ ದಿನದಂತೆಯೇ ಶಯನದ ಮೇಲೆ ಮಲಗಿ ನಿದ್ರೆಯನ್ನು ಮಾಡುತಲಿದ್ದನು. ಆ ದಿವಸ ರಾತ್ರಿ ಎರಡನೆಯ ನಾಗಕನ್ಯೆಯಾದ ಚಂದ್ರಕಾಂತಾಮಣಿ ಎಂಬುವಳು ಅಲ್ಲಿಗೆ ಬಂದು ರಾಜತನಯನನ್ನು ಎಬ್ಬಿಸಲಾಗಿ ಆ ರಾಜನಂದನನು ಓಹೋ ಚಂದ್ರಕಾಂತಾಮಣಿಯೇ ಬಾಯೆಂದು ಕರೆಯಲಾಗಿ ಅದನ್ನು ಕೇಳಿದ ಮಾತ್ರದಿಂದಲೇ ಅವಳು ಆಶ್ಚರ್ಯಭರಿತಳಾಗಿ ಆಹಾ! ನನ್ನ ಪೆಸರನ್ನು ನೀನು ಯಾವಮೂಲದಿಂದ ಬಲ್ಲೆ ಎಂದು ಕೇಳಲಾಗಿ, ರಾಜಪುತ್ರನು ನಿಮ್ಮ ಅಕ್ಕನಾದ ಕಾಂತಾಮಣಿಯು ಹೇಳಿದಳೆಂದು ಸಕಲವನ್ನು ತಿಳುಹಿದನು. ಆಗ ಚಂದ್ರಕಾಂತಾಮಣಿಯು ಆ ರಾತ್ರೆ ರಾಜತನಯನೊಂದಿಗೆ ಸೇರಿ ಸಕಲ ಸುಖಗಳನ್ನು ಅನುಭವಿಸಿ, ಆತನು ನಿದ್ರೆಯೊಳಿರುವ ಸಮಯದಲ್ಲಿ ಅವನಿಗೆ ವಂಚಿಸಿ ತಾನು ಸ್ವಸ್ಥಾನಕ್ಕೆ ಹೋದಳು. ಈ ಪ್ರಕಾರವಾಗಿ ರಾಜಪುತ್ರನು ಆ ಐದುಜನ ನಾಗಕನ್ಯೆಯರೊಂದಿಗೆ ಐದು ದಿವಸಗಳು ಮನ್ಮಥ ಸುಖಾನುಭವಗಳನ್ನು ಹೊಂದಿ ಅಲ್ಲಿಯೇ ಇರುತ್ತಿರಲು, ಆರನೆಯ ದಿವಸ ರಾತ್ರಿ ನಾಗಕನ್ಯೆಯರು ಯಾರೂ ಬಾರದೆಹೋದುದರಿಂದ ಇವನಿಗೆ ನಿದ್ರೆಬಾರದೆ ಕಳವಳಪಡುತ್ತಾ ಬೆಳಗಾಗುವವರೆಗೂ ರಾತ್ರೆಯನ್ನು ಯುಗದಂತೆ ಕಳೆದು ಬಳಿಕ ಮುನೀಂದ್ರನು ಅಪ್ಪಣೆಕೊಟ್ಟು ಬಹಳ ದಿವಸಗಳಾಯಿತು ಆತನ ಇಷ್ಟದಂತೆ ನಡೆಯದೆಹೋದರೆ ಏನು ಅಪಾಯ ಬರುವದೋ ಎಂದು ಚಿಂತಿಸಿ ಅಲ್ಲಿ ನಿಲ್ಲದೆ ಋಷಿಯು ಹೇಳಿದ ಸಂಕೇತಸ್ಥಳಕ್ಕೆ ಹೋಗಿ ಅಲ್ಲಿ ಅಳುತ್ತಾ ಕುಳಿತಿರುವ ವೃದ್ಧಳಾದ ಸ್ತ್ರೀಯನ್ನು ಕಂಡು, ಎಲೈ—ತಾಯಿಯೇ ಭೃಗುಮಹರ್ಷಿಯು ನಿನ್ನನ್ನು ಕರೆತರುವಂತೆ ನನಗೆ ಅಪ್ಪಣೆ ಮಾಡಿರುವನು. ನೀನು ತಡೆಮಾಡದೆ ಬಾರೆಂದು ನುಡಿಯಲಾಗಿ, ಆ ಮುದುಕಿಯು ಸಿಡಿಲಿನ ಶಬ್ದದಂತೆ ಘಟ್ಟಿಯಾಗಿ ಒಂದು ಸಲ ಕೂಗಿದಳು. ಆ ಶಬ್ದವನ್ನು ಕೇಳಿ ರಾಜತನಯನು ಭಯಪಟ್ಟು ಭೂಮಿಯಮೇಲೆ ಬಿದ್ದನು. ಬಿದ್ದ ರಾಜಾತ್ಮಜನನ್ನು ಆ ವೃದ್ಧಳು ಎತ್ತಿಕೊಂಡು ಮುದ್ದಾಡುತ್ತಾ ಇರಲಾಗಿ ಆತನು ಅವಳನ್ನು ಕುರಿತು, ಎಲೈ—ಮುದುಕಿಯೇ ನೀನು ಅಜ್ಜುಗುಜ್ಜು ಮುದುಕಿಯಾಗಿದ್ದಾಗ್ಯೂ ನನ್ನನ್ನು ಎತ್ತಿಕೊಳ್ಳುವಷ್ಟು ಶಕ್ತಿಯಿರುವದೆ ಇದರ ಕಾರಣವೇನೆಂದು ಬೆಸಗೊಳ್ಳಲು ಆ ಮುದುಕಿಯು ಎಲೈ—ಕಂದನೇ ನಾನು ಧೂಮಕೇತುವೆಂಬ ರಾಕ್ಷಸಿಯು, ಯಾರ ಲಕ್ಷ್ಯವೂ ಇಲ್ಲದೆ ತ್ರಿಲೋಕಗಳನ್ನು ಸಂಚರಿಸುತ್ತಾ ಸಿಕ್ಕಿದವರನ್ನೆಲ್ಲಾ ಭಕ್ಷಿಸುತ್ತಾ ಒಂದಾನೊಂದು ದಿವಸ ಭೃಗುಋಷಿಯ ಶಿಷ್ಯರಲ್ಲೋರ್ವನನ್ನು ನಾನು ಭಕ್ಷಿಸಲಾಗಿ ಆ ತಪೋಧನನು ನನಗೆ ಶಾಪವಕೊಟ್ಟನು. ಆದಕಾರಣ ಅಂದಿನಿಂದ ನಾನಿಲ್ಲಿ ಅಳುತ್ತಾ ಬಿದ್ದಿದ್ದೆನು. ಇಂದಿಗೆ ನಿನ್ನ ದಯದಿಂದ ನಾನು ಶಾಪವಿಮುಕ್ತಳಾದೆನೆಂದು ಸಕಲವನ್ನು ತಿಳುಹಿ ಆತನನ್ನು ತನ್ನ

ಬೆನ್ನಿನಮೇಲೆ ಕುಳ್ಳಿರಿಸಿಕೊಂಡು ಅತಿತ್ವರೆಯಿಂದ ಭೃಗುಋಷಿಯ ಆಶ್ರಮವ ನ್ನೈದಿ ಆ ಮಹಾತ್ಮನಿಗೆ ನಮಸ್ಕರಿಸಲಾಗಿ ಚಂದ್ರಕೇತುವು ಆಶ್ಚರ್ಯಾನಂದಭರಿ ತನಾಗಿ ಋಷಿಯ ಪಾದಗಳಮೇಲೆ ಬಿದ್ದು ತಾನು ಹೋಗಿಬಂದ ಸಕಲ ವೃತ್ತಾಂತವನ್ನು ತಿಳುಹಿದನು. ಆಗಲಾ ಮುನಿಯು ಸಂತೈಸಿದವನಾಗಿ, ಎಲೈ—ಮಗುವೇ ಆ ನಾಗಕನ್ಯೆಯರು ಬಹಳ ದಿವಸಗಳಿಂದಲೂ ಅನೇಕ ಪುರಾ ತನರೊಡನೆ ಸಂಭೋಗಪಟ್ಟು ಇರುವರು ಅವರ ಸಂಬಂಧದಿಂದ ನಿನಗೆ ಶಕ್ತಿ ಯೆಲ್ಲಾ ಕ್ಷೀಣವಾಗುವುದು. ಆದರಿಂದ ನೀನು ಅವರೊಡನೆ ಭೋಗಾಪೇಕ್ಷೆ ಯುಳ್ಳವನಾಗದೆ ಅಚಲಪರಿಪೂರ್ಣಭಾವವನ್ನು ತಿಳಿಯುವವನಾಗೆಂದು ಹೇಳಿ, ಬಳಿಕ ಧೂಮಕೇತುವನ್ನು ಕುರಿತು, ಎಲೈ—ರಾಕ್ಷಸಿಯೇ ನೀನು ಈ ರಾಜ ಪುತ್ರನನ್ನು ಎಡಬಿಡದೆ ಇವನು ಏನು ಹೇಳುವನೋ ಅದನ್ನೆಲ್ಲಾ ನಡೆ ಸುತ್ತಾ ತಾಯಿಯಂತೆ ಸಲಹುತ್ತಲಿರು ಎಂದಾಜ್ಞಾಪಿಸಿ ರಾಜಪುತ್ರನನ್ನು, ಕುರಿತು, ಎಲೈ—ಮಗುವೇ ನೀನು ಸ್ವದೇಶಕ್ಕೆ ಹೋಗೆಂದು ಅಪ್ಪಣೆಯನ್ನಿತ್ತು ಕಳುಹಿದನು. ಬಳಿಕ ಧೂಮಕೇತುವು ಮುನೀಂದ್ರನಿಗೆ ನಮಸ್ಕರಿಸಿ ರಾಜಪುತ್ರ ನನ್ನು ತನ್ನ ಬೆನ್ನಿನಮೇಲೆ ಕುಳ್ಳಿರಿಸಿಕೊಂಡು ನಿಮಿಷಮಾತ್ರದಲ್ಲಿ ಆತನ ಪಟ್ಟ ಣದ ಹೊರವಳಯದಲ್ಲಿ ಇಳಿಸಿ, ಎಲೈ—ಕಂದನೇ ನೀನು ಮನದಲ್ಲಿ ನೆನೆಸಿದ ಕಾಲದಲ್ಲಿ ನಾನು ಬಂದು ನಿನ್ನಿಷ್ಟವನ್ನು ನೆರವೇರಿಸಿಕೊಡುವೆನೆಂದು ಹೇಳಿ ತಾನು ಹೊರಟುಹೋದಳು. ಬಳಿಕ ಚಂದ್ರಕೇತುವು ತನ್ನ ಪಟ್ಟಣದ ಒಳ ಹೊಕ್ಕು ಅಂತಃಪುರವನ್ನೈದಿ ತಂದೆತಾಯಿಗಳಿಗೆ ನಮಸ್ಕರಿಸಿ ತಾನು ಭೂಸಂ ಚಾರಮಾಡಿದ ಸಂಗತಿಯನ್ನೆಲ್ಲಾ ವಿಸ್ತಾರವಾಗಿ ತಿಳುಹಿ ಅವರನ್ನು ಸಂತೋಷ ಗೊಳಿಸಿ ತನ್ನ ಅಂತಃಪುರವನ್ನು ಬಹಳವಾಗಿ ಶೃಂಗಾರಮಾಡಿಸಿ ಒಂದಾನೊಂದು ದಿನ ರಾತ್ರಿ ಧೂಮಕೇತುವನ್ನು ಸ್ಮರಿಸಲಾಗಿ ಆ ರಕ್ಕಸಿಯು ಎದುರಾಗಿ ಬಂದು ನಿಲ್ಲಲು, ಅವಳನ್ನು ಕುರಿತು, ತಾಯಿಯೇ ಗಂಧರ್ವರಾಜನ ಪುತ್ರಿಯಾದ ಮಾಣಿ ಕ್ಯಪ್ರಭೆಯೆಂಬುವಳಮೇಲೆ ನನಗೆ ಅಭಿಲಾಷೆ ಇರುವುದು. ಆ ಕನ್ಯೆಯು ನನಗೆ ವಶಳಾಗುವಂತೆ ಮಾಡೆನಲು, ರಕ್ಕಸಿಯು ಹಾಗೆಯೇ ಆಗಲೆಂದು ಆ ನಾರೀಮ ಣಿಗೆ ತಕ್ಕದ್ದಾಗಿರುವ ನಾಗಲೋಕದ ಶಯನವನ್ನು ನಾಗಲೋಕದಲ್ಲಿನ ದಿವ್ಯತ ರಮಾದ ನಾಗರತ್ನಗಳನ್ನೂ ತೆಗೆದುಕೊಂಡು ಬಂದು ಆ ರಾಜಪುತ್ರನ ಅಂತಃಪು ರದೊಳು ಶಯನವನ್ನು ಶೃಂಗರಿಸಿ, ಅಮರಾಧಿಪನಂತೆ ಆತನನ್ನು ಅಲಂಕರಿಸಿ, ಎಲೈ ಮಗುವೇ! ತ್ವರೆಪಡದೆ ಶಾಂತವಾಗಿ ಸುಕುಮಾರತ್ವವು, ಗಾಂಭೀರ್ಯವು ಳ್ಳವನಾಗಿರೆಂದು ಹೇಳಿ ಅಲ್ಲಿಂದ ಹೊರಟು ಆ ಮಾಣಿಕ್ಯಪ್ರಭೆಯ ಏಳು ಅಂತ ಸ್ತಿನ ಪಹರೆಯವರಿಗೆಲ್ಲಾ ಮಂಕುಬೂದಿಯನ್ನು ತಳೆದು ಆ ಅಂತಃಪುರಗಳನ್ನು ಕಳೆದು ವಜ್ರಗಳ ಅಂತಃಪುರಕ್ಕೆ ಹೋಗಿ, ಅಲ್ಲಿ ಸಾವಿರ ದಾಸೀಜನರೊಂದಿಗೆ

ರಾತ್ರಿಯ ಬೆಳದಿಂಗಳಲ್ಲಿ ವಿಶ್ರಾಂತಿಗೋಸ್ಕರ ಸುಖನಿದ್ರೆಯೊಳಿದ್ದ ಮಾಣಿಕ್ಯಪ್ರಭೆಗೂ, ದಾಸಿಯರಿಗೂ ಮಂಕುಬೂದಿಯನ್ನು ತಳಿದು ಮಾಣಿಕ್ಯಪ್ರಭೆಯನ್ನು ಎತ್ತಿಕೊಂಡು ಬಂದು ರಾಜಪುತ್ರನ ಅಂತಃಪುರದಲ್ಲಿರುವ ಹಾಸಿಗೆಯಮೇಲೆ ಮಲಗಿಸಲು ತಕ್ಷಣವೇ ಎಚ್ಚೆತ್ತು ನಾಲ್ಕು ದಿಕ್ಕುಗಳನ್ನೂ ಪರೀಕ್ಷಿಸಿ ನೋಡುತಲಿರುವ ಮಾಣಿಕ್ಯಪ್ರಭೆಗೆ ಪನ್ನೀರನ್ನು ಎರಚಿ ಆಕೆಗೆ ಅಡ್ಡಲಾಗಿ ರಕ್ಕಸಿಯು ನಿಲ್ಲಲು, ರತ್ನಪ್ರಭೆಯು ಆಹಾ ! ಇದೇನು ಆಶ್ಚರ್ಯವೆಂದು ಹೇಳುತಲಿರುವಾಗ ಅವಳನ್ನು ನೋಡಿದ ರಾಜಪುತ್ರನು ಕಣ್ಣುಗಳನ್ನು ಮುಚ್ಚಿಕೊಂಡು ಅಂಧಕನಂತೆ ಸ್ತಂಭೀಭೂತನಾದನು. ತರುವಾಯ ನಾಗಕನ್ಯೆಯು ಇದೇನು ? ನನ್ನ ಅಂತಃಪುರವೂ ನನ್ನ ದಾದಿಯರೂ ಯಾರೂ ಇಲ್ಲ. ಈ ಮನುಜನನ್ನು ನೋಡಿದರೆ ಒಂದಾನೊಂದು ದಿವಸ ನನ್ನ ಉದ್ಯಾನವನದ ವಿಹಾರಗೃಹದೊಳು ಕಂಡಂತಿರ್ಪುದು. ಇವನು ಮಾನವನಾದುದರಿಂದ ದೇವಲೋಕದಿಂದ ನನ್ನನ್ನು ಇಲ್ಲಿಗೆ ಕರಿಸಲು ಸಾಹಸವೆಲ್ಲಿಂದಬಂತು, ನನ್ನನ್ನು ದೇವಲೋಕದಿಂದ ಇಲ್ಲಿಗೆ ಕರೆತಂದವರಾರು ಎಂದು ದಿಗ್ಭ್ರಮಣೆಯಾಗಿರುತ್ತಲೂ ನೋಡುತ್ತಿರುವಷ್ಟರಲ್ಲಿಯೇ ರಕ್ಕಸಿಯು ಪುನಃ ಮಂಕುಬೂದಿಯನ್ನು ತಳಿದು ಅವಳ ಸ್ವಸ್ಥಾನಕ್ಕೆ ನಿಮಿಷ ಮಾತ್ರದಲ್ಲಿ ಸೇರಿಸಿ ರಾಜಪುತ್ರನಬಳಿಗೆ ಬಂದಳು. ಆಗ ರಾಜಪುತ್ರನು ರಕ್ಕಸಿಯನ್ನು ಕುರಿತು, ಎಲೈ ತಾಯೇ ! ಈ ದಿವಸ ನನ್ನ ಸೌಭಾಗ್ಯದದೆಸೆಯಿಂದ ಈ ಪ್ರಕಾರವಾಗಿ ಸಂಭವಿಸಿತು. ನಾಳೆಯ ರಾತ್ರಿ ಧೈರ್ಯವನ್ನವಲಂಬಿಸುವೆನೆಂದು ಹೇಳಿ, ಅವಳನ್ನು ಕಳುಹಿದನು.

ಅತ್ತಲಾ ಮಾಣಿಕ್ಯಪ್ರಭೆಯು ಬೆಳಗಾದಮೇಲೆ ತನ್ನ ಹಾಸಿಗೆಯನ್ನೂ ದೂತಿಯರನ್ನೂ ನೋಡಿ ರಾಜನಂದನನನ್ನು ಮಾತ್ರ ಕಾಣದೆ ಆಶ್ಚರ್ಯವುಳ್ಳವಳಾಗಿ ದೂತಿಯರ ಸಂಗಡ ಸಕಲ ವೃತ್ತಾಂತವನ್ನೂ ಹೇಳಿದಳು ಎಲೈ ತಾಯೇ ? ನೀನು ಸ್ವಪ್ನವಾದಂತೆ ಮಾತನಾಡುವುದೇಹೊರ್ತು ಎಂದಿಗೂ ಆಪ್ರಕಾರ ನಡೆದಿರುವುದಿಲ್ಲ ಪೂರ್ವದಲ್ಲೊಂದುದಿನ ನೀನಾ ರಾಜತನಯನನ್ನು ಕಂಡಿದ್ದಕಾರಣ ಮನ್ಮಥವಿಕಾರವಾಗಿ ಈಗಲೂ ಸ್ವಪ್ನಾವಸ್ಥೆಯಲ್ಲದೆ ಬೇರೆಯಿಲ್ಲ. ಮಹಾಮಂತ್ರತಂತ್ರವಾದಿಗಳಾದ ಒಂಭತ್ತು ಉಕ್ಕಡದ ಪಹರೇಜನರನ್ನು ಕಳೆದು ನಿನ್ನ ಅಂತಃಪುರಕ್ಕೆ ಪ್ರವೇಶಿಸಿ ನಿನ್ನನ್ನು ಕರೆದುಕೊಂಡು ಹೋಗುವುದಕ್ಕೆ ಫಾಲನೇತ್ರನಿಗೂ ಅಳವಲ್ಲ ಎಂಬದಾಗಿ ಎಲ್ಲರೂ ಏಕೀಭಾವವುಳ್ಳ ಮಾತುಗಳನ್ನಾಡಿದರು. ಆ ಕನ್ಯೆಗೆ ಮಾತ್ರ ನಿಜವು ತಿಳಿಯದೆ ಸಂಶಯವಾಗಿಯೇ ಇರ್ದುದು. ಮಾರನೇ ದಿನದ ರಾತ್ರಿ ಧೂಮಕೇತುವು ಮಾಣಿಕ್ಯಪ್ರಭೆಯನ್ನು ಮಾಯಾತಂತ್ರದಿಂದ ಕರೆತಂದು ರಾಜಪುತ್ರನ ಶಯನದಮೇಲೆ ಮಲಗಿಸಲಾಗಿ, ಚಂದ್ರಕೇತುವು ಥಟ್ಟನೆ ಎದ್ದು ಕುಳಿತು, ಆ ಪೂರ್ಣೇಂದುಮುಖಿಯನ್ನು ಚೆನ್ನಾಗಿ ದೃಷ್ಟಿ

ಹಿಸೋಡುತ್ತಾ, ತನ್ನ ನೇತ್ರಗಳಿಗೆ ಪಟುತ್ವಗಳನ್ನುಂಟುಮಾಡಿ ಅವಳನ್ನಾಲಿಂಗಿಸಿ ಮುದ್ದಿಟ್ಟು ಮುಖಕ್ಕೆ ಪನ್ನೀರನ್ನು ಚೆಲ್ಲಲು, ಆ ನಾರೀಮಣಿಯು ಕಣ್ಣುಗಳ ತೆರೆದು ರಾಜಪುತ್ರನನ್ನು ನೋಡಿ ಆಶ್ಚರ್ಯದಿಂದ ವಸ್ತ್ರಾಭರಣಗಳನ್ನು ನೋಡಿ ಕೊಂಡು ಎದ್ದು ಓಹೋ! ಭೂಲೋಕದ ರಾಜತನಯನೇ! ನೀನು ಸಾಹಸ ಪರಾಕ್ರಮದಿಂದ ನನ್ನಂಥಾ ದೇವಕನ್ಯೆಯನ್ನು ಇಲ್ಲಿಗೆ ಬರಮಾಡುವುದುಚಿತ ವಲ್ಲ. ನಿನ್ನ ಮಂತ್ರ ತಂತ್ರಗಳು ಸಾಹಸಗಳು ನನ್ನ ತಂದೆಯಬಳಿ ನಡೆಯುವು ದಿಲ್ಲ. ಆತನು ಮೂರು ಲೋಕಗಳಲ್ಲಿರುವ ರಣಶೂರರಿಗೂ ಸಾಧ್ಯನಲ್ಲ. ಭೂಲೋಕವನ್ನೆಲ್ಲಾ ನಿಮಿಷಮಾತ್ರದಲ್ಲಿ ನಾಶವನ್ನು ಮಾಡಬಲ್ಲನು. ಅಕಟಾ! ನಿನಗೆ ಕೇಡುಂಟಾಗುವುದರಲ್ಲಿ ಸಂಶಯವಿಲ್ಲ. ಶೀಘ್ರವಾಗಿ ನನ್ನ ಅಂತಃಪುರಕ್ಕೆ ನನ್ನನ್ನು ಸೇರಿಸುವವನಾಗೆಂದು ನುಡಿದಳು. ಅದಕ್ಕಾ ಚಂದ್ರಕೇತುವು ನಕ್ಕು ಓಹೋ ನಿನ್ನ ತಂದೆಯು ಸಾಹಸವಂತನಾದರೂ ನನ್ನನ್ನೂ ನನ್ನ ಮಹಿಮಾತಿ ಶಯವನ್ನು ಎಂದಿಗೂ ಗೆಲ್ಲಲಾರನು. ನಿನ್ನ ತಂದೆಯ ಸಾಹಸ ವಿಷಯದಲ್ಲಿ ಲೇಶಮಾತ್ರವೂ ನಾನು ಭಯಪಡುವುದಿಲ್ಲ. ಲೋಕದಲ್ಲಿ ಪರಸ್ತ್ರೀಗಮನವು ಪಾಪಕರವಾದದ್ದಲ್ಲದೆ, ಕನ್ಯಾಪೇಕ್ಷೆಯು ಎಂದಿಗೂ ದೋಷಕರವಾದದ್ದಲ್ಲ. ಪಂಚಬಾಣನು ಆತುರದಿಂದ ನನ್ನನ್ನು ಹೊಡೆಯುತ್ತಲಿರುವುದರಿಂದ ಮನೋ ಭೀಷ್ಟವನ್ನು ಶೀಘ್ರದಲ್ಲಿ ನೆರವೇರಿಸೆಂದು ಆಕೆಯನ್ನು ಆಲಿಂಗಿಸಿಕೊಳ್ಳಲಾಗಿ, ಮಾಣಿಕ್ಯಪ್ರಭೆಯೂ ಪಂಚಬಾಣನ ಬಾಧೆಗೆ ಒಳಪಟ್ಟು ಆತನೊಡನೆ ಸರಸಸ ಲ್ಲಾಪಗಳನ್ನೆಸಗಿ ಕಾಮಕಲಿಗಳನ್ನು ತೀರಿಸಿಕೊಂಡು ಈರ್ವರೂ ಅನ್ಯೋನ್ಯವಾಗಿ ಮಾತನಾಡುತ್ತಾ ಮಾಣಿಕ್ಯಪ್ರಭೆಯು ರಾಜಪುತ್ರನನ್ನು ಕುರಿತು, ಎಲೈ ಅವ ನೀಂದ್ರತನಯನೇ! ನಮ್ಮ ಅಂತಃಪುರಕ್ಕೆ ನೀನೊಂದು ದಿವಸ ಬಾರೆಂದು ಹೇಳಿ ಈರ್ವರೂ ಸುಖನಿದ್ರೆ ಮಾಡುತ್ತಿರಲು, ಧೂಮಕೇತುವು ಯಥಾಪ್ರಕಾರವಾಗಿ ಮಾಯಾಸಾಹಸದಿಂದ ಮಾಣಿಕ್ಯಪ್ರಭೆಯನ್ನು ತೆಗೆದುಕೊಂಡುಹೋಗಿ ಅವಳಸ್ಥಾ ನಕ್ಕೆ ಸೇರಿಸಲು, ಮಾರನೆದಿವಸ ರಾಜಪುತ್ರನು ರಕ್ಕಸಿಯನ್ನು ಸಮಾಧಾನಪಡಿಸಿ ಈ ದಿವಸ ತನ್ನನ್ನು ಕರೆದುಕೊಂಡು ಹೋಗಿ ನಾಗಕನ್ಯೆಯಾದ ಮಾಣಿಕ್ಯಪ್ರಭೆಯ ಅಂತಃಪುರಕ್ಕೆ ಸೇರಿಸೆನಲು ಅದೇಪ್ರಕಾರ ರಕ್ಕಸಿಯು ಕರೆದುಕೊಂಡು ಹೋಗಿ ಬಿಡಲು, ರಾಜನಂದನನು ಅಲ್ಲಿನಸೊಬಗನ್ನು ನೋಡಿ ಅತ್ಯಾಶ್ಚರ್ಯಪಡುತ್ತಾ ಅವಳ ಹಾಸಿಗೆಯಮೇಲೆ ಕುಳಿತುಕೊಂಡು ಅವಳನ್ನು ನಿದ್ರೆಯಿಂದೆಚ್ಚರ ಮಾಡಿದನು. ಆಗ ಈರ್ವರೂ ರತಿಕ್ರೀಡೆಗಳನ್ನಾಡಿ ವಿಶ್ರಮಿಸಿಕೊಂಡು, ದಿವ್ಯಫಲ ಭಕ್ಷ್ಯಗಳನ್ನು ಭಕ್ಷಿಸಿ, ತಾಂಬೂಲವನ್ನು ಸವಿದು, ಸುಗಂಧಾದಿಗಳನ್ನು ಪೂಸಿಕೊಂಡು ಸುಖ ನಿದ್ರೆಯನ್ನು ಮಾಡಿದರು. ಬೆಳಗಾಗುವುದರೊಳಗಾಗಿ ರಕ್ಕಸಿಯು ರಾಜಪುತ್ರ ನ ಕರೆದುಕೊಂಡು ಬಂದು ಅವನನ್ನು ಅರಮನೆಗೆ ಸೇರಿಸಿ, ತಾನು ಹೋದಳು.

ಅತ್ತ ಮಾಣಿಕ್ಯಪ್ರಭೆಯು ರಾತ್ರಿಯೆಲ್ಲಾ ನಿದ್ರೆಕೆಟ್ಟು ಇದ್ದುದರಿಂದ ಬೆಳಿಗ್ಗೆ ಬಹಳ ಹೊತ್ತಾದರೂ ಹಾಸಿಗೆಯಿಂದ ಏಳದೆ ಇರಲು, ದೂತಿಯರು ಬಂದು ಹಾಸಿಗೆಯಮೇಲೆ ಮಲಗಿರುವ ಅಬಲೆಯ ಆಕಾರವನ್ನು ನೋಡಿ, ಓಹೊ ಮೋಸವು ಸಂಭವಿಸಿತು ಯಾರೋ ಪುರುಷನು ಬಂದು ಈಕೆಯೊಡನೆ ರತಿಕ್ರೀಡೆಗಳನ್ನನುಭವಿಸಿ ಹೋಗಿರುವನು, ಇಲ್ಲದಿದ್ದರೆ ಈ ಅಂಗನೆಯ ಶೀರೆಯು ಯಾತಕ್ಕೆ ಬಿಚ್ಚಿರುವುದು. ತೊಟ್ಟಿದ ಕುಪ್ಪಸವು ಬಿಚ್ಚಿಕೊಂಡಿರಲು ನಿಮಿತ್ತವೇನು? ಬಟ್ಟಕುಚಗಳ ಮೇಲೆ ಚಂದ್ರನಂತೆ ನಖಕ್ಷತಗಳು ಎಲ್ಲಿಂದ ಬಂದವು. ಮುಖದಲ್ಲಿದ್ದ ಕಸ್ತೂರಿತಿಲಕವು ಕರಗಿರಲು ಕಾರಣವೇನು? ಎಂದೀರೀತಿಯಾಗಿ ಯೋಚಿಸಿ, ಆ ಲತಾಂಗಿಯನ್ನು ನಿದ್ರೆಯಿಂದೆಬ್ಬಿಸಿ, ವರ್ತಮಾನವೇನೆಂದು ಕೇಳಲಾಗಿ, ಅದಕ್ಕಾ ತನ್ವಿಯು ಉತ್ತರವ ಕೊಡದೆ ಇರಲು, ಅವರು ಹೋಗಿ ಆ ಕನ್ಯೆಯ ತಾಯಿಗೆ ಈ ವೃತ್ತಾಂತವನ್ನು ತಿಳುಹಿದರು. ಮರತ್ತನೆಂಬ ಗಂಧರ್ವನ ಪತ್ನಿಯು ತನ್ನ ಮಗಳ ವಿಚಾರದಲ್ಲಿ ಮನಗುಂದಿ ವ್ಯಥೆಪಡುತ್ತಾ ಅವಳ ಅಂತಃಪುರಕ್ಕೆ ಹೋಗಿ ಆ ಇಂದುವದನೆಯನ್ನು ನೋಡಿ ಅವಳ ಚಹರೆಯಿಂದ ದೂತಿಯರು ನುಡಿದ ವಾಕ್ಯಗಳು ನಿಜವೆಂದು ನಂಬಿ, ಅವಳನ್ನು ನಿದ್ರೆಯಿಂದೆಬ್ಬಿಸಿ ತೊಡೆಯಮೇಲೆ ಕುಳ್ಳಿರಿಸಿಕೊಂಡು, ಲಾಲನೆಯಿಂದ ಅವಳನ್ನು ಮುದ್ದಿಟ್ಟು ನಿಜವಾದ ವರ್ತಮಾನವನ್ನು ಹೇಳೆಂದು ಕೇಳಲಾಗಿ, ಆ ಕಮಲಾಕ್ಷಿಯು ಯಥಾಸ್ಥಿತಿ ಸರಿಯಾಗಿ ಹೇಳಲು, ಮಗಳನ್ನು ಕುರಿತು, ಎಲೈ ಪುತ್ರಿಯೆ ನೀನು ಭಯಪಡಬೇಡವೆಂದು ಸಮಾಧಾನಮಾಡಿ ಈ ಸಂಗತಿಯನ್ನು ಮರುತ್ತನಿಗೆ ತಿಳುಹಲು, ಅದನ್ನು ಕೇಳಿದ ಮರುತ್ತನು ಬಾಲವನ್ನು ತುಳಿದ ಸರ್ಪದಂತೆ ಕೋಪಯುಕ್ತನಾಗಿ, ಪುತ್ರಿಯೇ! ನಿನ್ನಿಂದ ಲೋಕಾಪವಾದವೂ, ಅಪಕೀರ್ತಿಯೂ ನನಗೆ ಸಂಭವಿಸಿತು ವಂಚನೆಯಿಂದ ಈರೀತಿಯಾಗಿ ನಡೆಸಿದ ಪುರುಷಾಧಮನ ತಲೆಯನ್ನು ಚಂಡಾಡಿ ನಿನ್ನ ಮನೆಯ ಬಾಗಿಲಿಗೆ ತಂದು ಕಟ್ಟುವೆನು ಎಂಬದಾಗಿ ರಕ್ತಾಂತಲೋಚನನಾಗಿ ತನ್ನ ಚತುರಂಗಬಲವನ್ನು ಅನೇಕ ಮಾಯಾತಂತ್ರವುಳ್ಳ ವೀರಭಟರುಗಳನ್ನೂ, ಮಂತ್ರವಾದಿಗಳನ್ನು ಐನೂರು ಗಂಧರ್ವ ಸೈನ್ಯವನ್ನು ತೆಗೆದುಕೊಂಡು ಹೊರಟು, ಪುತ್ರಿಯ ಅಂತಃಪುರದಬಳಿ ಕಾವಲಿದ್ದ ಏಳು ಉಕ್ಕಡದ ಪಹರೆಯವರನ್ನು ಶಿಕ್ಷಿಸಿ, ಪುತ್ರಿಯನ್ನು ಸಮಾಧಾನಮಾಡಿ, ಸೇನಾಸಮೇತನಾಗಿ ಬಂದು ತಾನು ಪಾಟಲೀಪುರವನ್ನು ಮುತ್ತಿಗೆ ಹಾಕಿದನು. ಈ ಸಂಗತಿಯನ್ನು ಕೇಳಿದ ಚಂದ್ರಗುಪ್ತನು ಮನಸ್ಸಿನಲ್ಲಿ ಧೈರ್ಯವನ್ನು ತಾಳ್ದು ತಂದೆಯಬಳಿಗೆ ಹೋಗಿ ವ್ಯಸನಮಾಡಕೂಡದೆಂದು ನುಡಿದು ಪುರಜನಗಳಿಗೆ ಅಭಯವನ್ನಿತ್ತು ತಾನು ಧೂಮಕೇತುವನ್ನು ಸ್ಮರಿಸಲಾಗಿ, ತಕ್ಷಣವೇ ಆ ರಕ್ಕಸಿಯು ಎದುರಾಗಿ ಬಂದು ಕಾಣಿಸಿಕೊಳ್ಳಲು, ರಾಜತನಯನು

ಸಂಗತಿಯನ್ನು ತಿಳುಹಿ, ಆ ಮುಂದೆ ಏನು ಉತ್ತರವೆನಲು ರಕ್ಕಸಿಯು, ಎಲೈ ರಾಜನಂದನನೇ! ನೀನು ಭಯಪಡಬೇಡ ನಾನು ಈಗ ಪ್ರಾಪ್ತವಾಗಿರುವ ಆಪತ್ತನ್ನು ನಿಮಿಷಮಾತ್ರದಲ್ಲಿ ಹೋಗಲಾಡಿಸುವೆನೆಂದು ಅ ಕ್ಷಣವೇ ಮುತ್ತಿಗೆಹಾಕಿದ್ದ ಸೈನ್ಯವನ್ನು ಪೊಕ್ಕು ಅಲ್ಲಿರುವ ಆನೆ, ಕುದುರೆ, ಒಂಟೆಗಳನ್ನೆಲ್ಲಾ ಸದೆಬಡೆದು ಕಾಲುಸೈನ್ಯವನ್ನೆಲ್ಲಾ ಹೊಡೆದು, ಮರಣವನ್ನೈದಿದವರನ್ನೆಲ್ಲಾ ಭಕ್ಷಿಸಿ ನಿಮಿಷಮಾತ್ರದಲ್ಲಿ ಸೈನ್ಯವನ್ನು ಹಾಳುಮಾಡುತ್ತಾ ಬರಲು ಮರುತ್ತನು ಕೋಪಾವೇಷಭರಿತನಾಗಿ ಆ ರಕ್ಕಸಿಯನ್ನು ನಿಮಿಷಮಾತ್ರದಲ್ಲಿ ಕೊಲ್ಲುವೆನೆಂದು ಎದುರಾಗಿ ಬಂದು ಯುದ್ಧಕ್ಕೆ ಸನ್ನದ್ಧನಾಗಲು ರಕ್ಕಸಿಯು ಹಲ್ಲುಗಳನ್ನು ಕಡಿಯುತ್ತಾ ಔಡುಗಳನ್ನು ಕಚ್ಚುತ್ತಾ, ಎಲಾ ಮರುತ್ತನೇ! ನನ್ನನ್ನು ಮರೆತೆಯಾ! ಮೂರು ಲೋಕಗಳನ್ನು ತೃಣೀಕರಿಸುವ ಧೂಮಕೇತುವಲ್ಲನೆ? ಎಂದು ಆ ಮರುತ್ತನನ್ನು ಕೈಯಿಂದ ಹಿಡಿದುಕೊಂಡು ಕೂಸಿನಂತೆಮಾಡಿ ಅವನನ್ನು ಅಂಗೈಯೊಳಿಟ್ಟುಕೊಂಡು ಹೋಗಿ ಚಂದ್ರಕೇತುವಿಗೆ ತೋರಿಸಿ, ಎಲೈ ರಾಜೇಂದ್ರತನಯನೇ! ನಿನ್ನನ್ನೂ ಪಟ್ಟಣವನ್ನೂ ಸೂರೆಹೊಡೆಯುವುದಕ್ಕಾಗಿ ಬಂದಿರುವ ಮರುತ್ತನೆಂಬ ನಿನ್ನ ಮಾವನು ಇವನೆ ನೀನು ಉತ್ತರವನ್ನಿತ್ತರೆ ಈಗಲೇ ಇವನನ್ನು ಬಾಯೊಳಗೆ ಹಾಕಿಕೊಂಡು ಉಪ್ಪಿನಕಾಯಿಯಂತೆ ಸವಿಯುವೆನೆನಲು, ಚಂದ್ರಕೇತುವು ಕೋಪವನ್ನು ಸಮಾಧಾನಗೊಳಿಸಿ ಈತನನ್ನು ಹಿಂಸೆಮಾಡಬೇಡವೆಂದು ನುಡಿದು ಮಾವನಾದ ಗಂಧರ್ವರಾಯನಿಗೆ ನಾನಾವಿಧಗಳಾದ ಮರ್ಯಾದೆಗಳನ್ನು ಮಾಡಿ, ಸಂತೈಸಿ ಉಚಿತಾಸನದಲ್ಲಿ ಕುಳ್ಳಿರಿಸಿದನು. ಗಂಧರ್ವರಾಯನು ಖಿನ್ನಮಾನಸನಾಗಿ ತನ್ನ ಪುತ್ರಿಯ ಎದುರಿನೊಳು ಮಾಡಿದ ಶೌರ್ಯವು ನಿಷ್ಫಲವಾಯಿತೆಂದು ಅಂತರಂಗದಲ್ಲಿ ದುಃಖಿಸುತ್ತಾ ಇದ್ದನು. ಅತ್ತ ಗಂಧರ್ವರಾಯರ ಸೈನ್ಯದಲ್ಲಿ ಹತಶೇಷರಾದ ಗಂಧರ್ವರು ಓಡಿಹೋಗಿ ಕುಬೇರನಿಗೆ ಸಂಗತಿಯನ್ನು ತಿಳುಹಿದರು. ಕುಬೇರನು ತನ್ನ ಮಿತ್ರನಾದ ಮರುತ್ತನಿಗೆ ಬಂದ ವಿಪತ್ತನ್ನು ಕುರಿತು ವಿಚಾರವುಳ್ಳವನಾಗಿ ಕೇವಲ ಭಯಪಟ್ಟು, ಇಂದ್ರಾದಿ ದೇವತೆಗಳಿಗೂ ತನಗೆ ಆಪ್ತನಾದ ಈಶ್ವರನಿಗೂ ತಿಳಿಸಿ, ಯುದ್ಧಪ್ರಯತ್ನಮಾಡಿಕೊಂಡು ಎಲ್ಲರನ್ನು ಹಿಂದಿಟ್ಟುಕೊಂಡು ಬಂದು ಪಾಟಲೀಪುರದ ಸುತ್ತಲೂ ಪಾಳೆಯವನ್ನು ಬಿಡಿಸಿ, ಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿ ದೇವದುಂಭಿಗಳನ್ನು ಭೋರ್ಗೊಳಿಸಿದರು. ಸೂರ್ಯಕೇತುರಾಯನು ದೇವವಾದ್ಯಗಳ ಶಬ್ದವನ್ನು ಕೇಳಿ ಭಯಕ್ರಾಂತನಾಗಿ ನಡುಗುತ್ತಾ ಮಗನಬಳಿಗೆ ಹೋಗಿ ಎಲೈ ಪುತ್ರನೇ! ವೀರಭದ್ರನು, ಷಣ್ಮುಖ ಮೊದಲಾದ ಪುತ್ರವರ್ಗದಿಂದಲೂ, ನಂದೀಶ್ವರ, ಭೃಂಗಿ ಮೊದಲಾದ ಪ್ರಮಥಗಣಗಳಿಂದಲೂ, ಇಂದ್ರಾದಿ ದೇವಗಣಂಗಳಿಂದಲೂ, ಕುಬೇರನೇ ಮೊದಲಾದ ಯಕ್ಷಗಂಧರ್ವರಿಂದಲೂ ಕೂಡಿದವನಾಗಿ ಸಾಕ್ಷಾತ್

ಕೈಲಾಸಪತಿಯಾದ ಸಾಂಬಮೂರ್ತಿಯು ಯುದ್ಧಕ್ಕೆ ಬಂದಿರುವನು. ಆಹಾ! ಆ ಕಾಲರುದ್ರನು ತನ್ನ ಕಣ್ಣುಗಳನ್ನು ಬಿಟ್ಟು ನೋಡಿದ ಮಾತ್ರದಿಂದಲೇ ನಾವು ಭಸ್ಮೀಕೃತರಾಗುವೆವು. ಇಂಥಾ ಮಹತ್ತರವಾದ ತಪ್ಪಿತವನ್ನು ನೀನು ಮಾಡಿದ್ದು ಉಚಿತವಾಗಿ ಪರಿಣಮಿಸಲಿಲ್ಲವೆನಲು, ಚಂದ್ರಕೇತುವು ತಂದೆಗೆ ನಮಸ್ಕರಿಸಿ, ಎಲೈ ತಂದೆಯೇ! ನೀನು ಭಯವನ್ನು ಪಡದೆ ಧೈರ್ಯವನ್ನು ತೆಗೆದುಕೊಳ್ಳಬೇಕೆಂದು ಸಮಾಧಾನದಿಂದ ಪ್ರಾರ್ಥಿಸಿ, ಮನಸ್ಸಿನಲ್ಲಿ ರಕ್ಕಸಿಯನ್ನು ಸ್ಮರಿಸಲು ಪ್ರಸನ್ನಳಾದ ಧೂಮಕೇತುವಿಗೆ ಸಂಗತಿಯನ್ನರುಹಿದನು. ರಕ್ಕಸಿಯು ಭಯಪಡಬೇಡವೆಂದು ಆತನನ್ನು ಸಂತೈಸಿ, ತಕ್ಷಣವೇ ಘೋರರೂಪವನ್ನು ತಾಳ್ದು ಆರ್ಭಟಿಸುತ್ತಾ ಹೋಗಿ, ಅಪಾರವಾದ ರಾಕ್ಷಸರನ್ನು ತನ್ನ ಮಾಯಾಶಕ್ತಿಯಿಂದ ನಿರ್ಮಿಸಿ ದೇವಸೈನ್ಯವನ್ನು ಪೊಕ್ಕು ಸೇನೆಯನ್ನೆಲ್ಲಾ ಸದೆಬಡಿದು ಸಾಧ್ಯವಾದಮಟ್ಟಿಗೂ ಕೆಲವರನ್ನು ಹತಮಾಡಿ, ದೇವತೆಗಳ ವಿಮಾನಗಳನ್ನೆಲ್ಲಾ ಸದೆಬಡಿದು ಭೂಮಿಯ ಮೇಲೆ ಕೆಡಹುತ್ತಲಿರಲಾಗಿ, ಅದನ್ನು ನೋಡಿ ಇಂದ್ರಾದಿದೇವತೆಗಳು ಅನೇಕ ದಿವ್ಯಾಸ್ತ್ರಗಳನ್ನು ಪ್ರಯೋಗಿಸಿದರೂ ಆ ರಕ್ಕಸಿಯು ಅಸ್ತ್ರಗಳನ್ನೆಲ್ಲಾ ತನ್ನ ಎಡದ ಕೈಯಿಂದ ತೆಗೆದು ಬಿಸಾಡುತ್ತಾ ದೇವತೆಗಳನ್ನೂ ದಿಕ್ಪಾಲಕರನ್ನೂ ಲಕ್ಷ್ಯಮಾಡದೆ ತರುಮುತ್ತಾ. ಕುಮಾರಸ್ವಾಮಿ ಮೊದಲಾದವರನ್ನು ನೋಯಿಸಿ ಆರ್ಭಟಮಾಡುತ್ತಿರಲಾಗಿ, ಇವನ್ನೆಲ್ಲಾ ನೋಡಿ ಸಹಿಸಲಾರದೆ ಸಾಂಬಶಿವನು ಆ ರಕ್ಕಸಿಯ ಮೇಲೆ ವೀರಾವೇಶದಿಂದ ಅಸ್ತ್ರಶಸ್ತ್ರಗಳನ್ನು ಪ್ರಯೋಗಿಸಿದನು. ಈ ರೀತಿ ನಡೆಯುತ್ತಲಿರುವ ಅಘೋರವಾದ ಯುದ್ಧದ ವರ್ತಮಾನವನ್ನು ಲೋಕಸಂಚಾರಿಯಾದ ನಾರದಮಹರ್ಷಿಯು ಅರಿತು ತಕ್ಷಣವೇ ಚತುರ್ಮುಖನಿಗುಸುರಲಾಗಿ, ಚತುರ್ಮುಖನು ಓಹೋ ಈ ಸಮಯದಲ್ಲಿ ಲೋಕಗಳೆಲ್ಲಾ ನಶಿಸಿಹೋಗುವವೆಂದು ಅರಿತು ತ್ವರಿತದಿಂದ ರಮಾಕಾಂತನ ಬಳಿಗೆ ಹೋಗಿ ಬಿನ್ನವಿಸಲು, ಆಗ ಲಕ್ಷ್ಮೀಪತಿಯು ಗರುಡಾರೂಢನಾಗಿ ಅತಿ ಶೀಘ್ರದಿಂದ ಯುದ್ಧಭೂಮಿಗೆ ಬಂದು ಪರಮೇಶ್ವರನನ್ನೂ ಇಂದ್ರಾದಿ ದಿಕ್ಪಾಲಕರನ್ನೂ ಧೂಮಕೇತುವನ್ನೂ ನೋಡಿ ಅವರ ಯುದ್ಧವನ್ನು ನಿಲ್ಲಿಸಿ, ಶಿವನನ್ನು ಕುರಿತು, ಎಲೈ ಪಾರ್ವತೀಪತಿಯೇ ಇದು ಧೂಮಕೇತುವೆಂತಲೂ ಅದನ್ನು ನಾವು ನಾಧಿಸತಕ್ಕವರಲ್ಲವೆಂಬದಾಗಿಯೂ ನಿನಗೆ ತಿಳಿಯದೆ. ಈ ರಾಕ್ಷಸಿಯು ಭೃಗುಮಹರ್ಷಿಯ ಅನುಜ್ಞೆಯಂತೆ ಆ ರಾಜನಂದನನಿಗೆ ಸಹಾಯವಾಗಿ ಈ ವರೆಗೂ ಇಷ್ಟು ಕಾರ್ಯಗಳನ್ನು ನಡೆಸಿದಳೆಂದು ಹೇಳಿ, ಆ ಚಂದ್ರಮೌಳಿಯನ್ನು ಸಮಾಧಾನಪಡಿಸಿ, ಮರತ್ತ ಕುವರಿಯಾದ ಮಾಣಿಕ್ಯಪ್ರಭೆಯನ್ನು ಆ ರಾಜತನಯನಿಗೆ ಕೊಡಿಸಿ, ಸ್ನೇಹವನ್ನು ಮಾಡಿಸಿ, ಅವರವರ ಸ್ಥಾನಗಳಿಗೆ ಎಲ್ಲರನ್ನು ಕಳುಹಿ, ಶ್ರೀಯಃಪತಿಯು ಅಂತ

ರ್ಧಾನವನ್ನೈದಿದನು. ಬಳಿಕ ಚಂದ್ರಕೇತುವು ಮಾಣಿಕ್ಯಪ್ರಭೆಯೊಡನೆ ಸುಖಿ ಸುತ್ತಲಿದ್ದನು. ಈರೀತಿಯಾಗಿ ಕೆಲವುಕಾಲ ಕಳೆದ ಬಳಿಕ ಒಂದಾನೊಂದು ದಿವಸ ಸೂರ್ಯಕೇತುರಾಯನು ತನ್ನ ಮಗನನ್ನು ಕುರಿತು, ಎಲೈ ಕುಮಾರನೇ! ಇಂಥಾ ಸುಖಸಾಮ್ರಾಜ್ಯಗಳನ್ನು ನೀನು ಅನುಭವಿಸುತ್ತಲಿದ್ದರೂ ನಮ್ಮ ವಂಶ ಪಾರಂಪರ್ಯದಂತೆ ಕುಲಸ್ತ್ರೀಯನ್ನು ವಿವಾಹ ಮಾಡಿಕೊಳ್ಳದೆ ಇರುವದು ರಾಜಧರ್ಮವಲ್ಲ. ಆದಕಾರಣ ರಾಜವಂಶದ ಕನ್ಯೆಯನ್ನು ವಿವಾಹ ಮಾಡಿ ಕೊಂಡು ತನ್ಮೂಲಕದಿಂದ ಸಂತಾನವೃದ್ಧಿಯಾದರೆ ಈ ಸೂರ್ಯವಂಶಕ್ಕೆ ಕೀರ್ತಿಯೂ ಪರದಲ್ಲಿ ಸಾಧಕವು ಪ್ರಾಪ್ತಿಯಾಗುವುದೆನಲು, ಸುತನು ಉಚಿತ ವೆಂದು ಗ್ರಹಿಸಿ, ರಕ್ಕಸಿಯನ್ನು ಬರಮಾಡಿಕೊಂಡು ಸಮಾಚಾರವನ್ನು ತಿಳುಹಿ, ಎಲೈ ರಕ್ಕಸಿಯೇ! ಐವತ್ತಾರುದೇಶದ ರಾಜರುಗಳಿಗಿರುವ ವಿವಾಹಯೋಗ್ಯ ಕಾಲವುಳ್ಳವರಾದ ಸಮಸ್ತ ರಾಜಪುತ್ರಿಯರನ್ನು ಕರೆತರುವಳಾಗೆನಲು, ರಕ್ಕ ಸಿಯು ಆತನ ಅಪ್ಪಣೆಯಂತೆ ಐವತ್ತಾರುದೇಶದ ರಾಜಕನ್ನೆಯರನ್ನೆಲ್ಲಾ ತಂದು ಚಂದ್ರಕೇತುವಿನ ಅಂತಃಪುರದಲ್ಲಿ ವರಸೆಯಾಗಿ ನಿಲ್ಲಿಸಿ, ಎಲೈ ನಾರೀಮಣಿಗಳೇ! ಯಾರ ಕೊರಳಲ್ಲಿ ಈ ರಾಜನು ಪುಷ್ಪಮಾಲಿಕೆಗಳನ್ನು ಹಾಕುವನೋ ಆಸ್ತ್ರೀಯು ಈ ರಾಜತನಯನನ್ನು ವರಿಸಿದಳೆಂದು ನುಡಿದು, ಆತನ ಕೈಗೆ ಹುವ್ವಿನ ಹಾರ ವನ್ನು ಕೊಟ್ಟು, ಆ ಸ್ತ್ರೀಯರಲ್ಲಿ ಇವಳು ಇಂಥಾ ದೇಶದ ರಾಜಪುತ್ರಿಯೆಂದು ಒಬ್ಬೊಬ್ಬಳನ್ನಾಗಿ ತೋರಿಸುತ್ತಾ ತಾನು ನಿಂತುಕೊಂಡಿದ್ದಳು ಆಗ ರಾಜ ತನಯನು ಆ ಲಲನಾಮಣಿಗಳನ್ನೆಲ್ಲಾ ನೋಡುತ್ತಾ, ಕೊನೆಗೆ ಸಿಂಧೂದೇಶದ ಅರಸನ ಕುವರಿಯಾದ ಚಂದ್ರಪ್ರಭೆಯನ್ನು ಮೆಚ್ಚಿ ಅವಳ ಕೊರಳಲ್ಲಿ ಹುವ್ವಿನ ಮಾಲಿಕೆಯನ್ನು ಹಾಕಿದನು. ತಕ್ಷಣವೇ ಆ ಅಂಗನೆಯು ಅವನ ಕೊರಳಿಗೆ ಪುಷ್ಪಮಾಲಿಕೆಯನ್ನು ಹಾಕಿದಳು. ಆಗ ರಕ್ಕಸಿಯು ಸಕಲ ಕನ್ಯೆಯರನ್ನು ಅವರವರ ಸ್ಥಾನಗಳಿಗೆ ತೆಗೆದುಕೊಂಡು ಹೋಗಿ ಅವರವರ ಶಯನಗಳ ಮೇಲೆ ಬಿಟ್ಟುಬಂದವಳಾದಳು.

ಬೆಳಗಾದ ಮೇಲೆ ಅಲ್ಲಲ್ಲಿ ರಾಜಪುತ್ರಿಯರು ರಾತ್ರಿ ನಡೆದ ವೃತ್ತಾಂತವ ನ್ನೆಲ್ಲಾ ಅವರವರ ತಂದೆತಾಯಿಗಳಿಗೆ ತಿಳುಹಿಸಲಾಗಿ, ಅವರು ಪುತ್ರಿಯರನ್ನು ಕುರಿತು, ಎಲೈ ಪುತ್ರಿರತ್ನಗಳೇ! ಇದು ಸ್ವಪ್ನಪ್ರಾಯವಲ್ಲದೆ ನಿಜವಲ್ಲವೆಂದು ಸಮಾಧಾನ ಪಡಿಸಿದಾಗ್ಯೂ ಅವರು ನಂಬದೆ ಯಥಾರ್ಥವಾದ ವಿಷಯವೆಂದು ಹೇಳಿ ಆ ಚಂದ್ರಕೇತುವಿನ ಸೌಂದರ್ಯವನ್ನು, ಮಾಣಿಕ್ಯಪ್ರಭೆಯ ಅಂದವನ್ನು ಕ್ರಮವಾಗಿ ಹೇಳುತ್ತಬರಲು, ಅವರಿಗೆ ಸಂಶಯವುಂಟಾಗಿ ಯೋಚಿಸುತಲಿದ್ದರು. ಅವಿವಾಹಿತಳಾದ ಚಂದ್ರಪ್ರಭೆಯು ಮಾತ್ರ ತನ್ನ ಕೊರಳಿನಲ್ಲಿದ್ದ ಪುಷ್ಪಹಾರ ವನ್ನು ತಂದೆ ತಾಯಿಗಳಿಗೆ ತಿಳುಹಿ ವರ್ತಮಾನವನ್ನೆಲ್ಲಾ ಪೇಳಲಾಗಿ, ಅವರು

ಆಶ್ಚರ್ಯಭರಿತರಾಗಿ ಆ ರತ್ನಹಾರವನ್ನು ನೋಡುತ್ತಾ, ಓಹೋ ಈ ಹಾರವು ಭೂಲೋಕ ರಾಜರಿಂದ ಧರಿಸತಕ್ಕದ್ದಲ್ಲ. ಮತ್ತು ಎಂದಿಗೂ ಯಾವ ರಾಜರು ಇಂಥಾ ಹಾರವನ್ನು ಧರಿಸಿರುವುದಿಲ್ಲ. ಇದು ಯಾವ ಲೋಕದಹಾರವೊ ಆ ಪುರುಷನು ಯಾರೋ ನಾವು ಇದರ ಮೂಲವನ್ನರಿಯುವಬಗೆ ಹೇಗೆಂದು ವಿಚಾರಮಾಡುತ್ತಲಿದ್ದರು. ಅತ್ತ ಚಂದ್ರಕೇತುವು ತನ್ನ ತಂದೆಯನ್ನು ಕುರಿತು, ಜನಕನೇ! ನಾನು ಸಿಂಧೂರಾಜನ ಪುತ್ರಿಯನ್ನು ಕೋರಿರುವೆನೆನಲು, ಅದಕ್ಕಾತನು ಸಮ್ಮತಿಸಿ, ಸಿಂಧೂರಾಜನಿಗೆ ನಡೆದ ವರ್ತಮಾನವನ್ನು ಲಿಖಿತಮೂಲಕದಿಂದ ತಿಳುಹಲು, ಸಿಂಧೂಪತಿಯು ಆ ಲಿಖಿತಗಳನ್ನು ನೋಡಿ ಆಶ್ಚರ್ಯವನ್ನು ತಾಳ್ದು, ಹೆಂಡತಿಗೂ ಪುತ್ರಿಗೂ ಸಮಾಚಾರವನ್ನು ಅರುಹಿ, ಬಂಧುವರ್ಗಗಳನ್ನೂ ಇಷ್ಟಮಿತ್ರರನ್ನೂ ಕರೆದುಕೊಂಡು ಪಾಟಲೀಪುರಕ್ಕೆ ಬಂದು ಅತಿವಿಜೃಂಭಣೆಯಿಂದ ವಿವಾಹ ಮಹೋತ್ಸವವನ್ನು ನೆರವೇರಿಸಿ, ಅಳಿಯನನ್ನು ಸ್ತುತಿಸಿ ತನ್ನ ಯೋಗ್ಯತಾನುಸಾರ ಉಡುಗೆರೆಗಳನ್ನು, ವಸ್ತ್ರಾಭರಣಗಳನ್ನು ಕೊಟ್ಟು ಪುನಃ ತನ್ನ ದೇಶಕ್ಕೆ ಬಂದು ಸುಖವನ್ನನುಭವಿಸುತಲಿದ್ದನು. ತರುವಾಯ ಚಂದ್ರಕೇತುವು ಪಟ್ಟಾಭಿಷಕ್ತನಾಗಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಾ ನವಖಂಡ ಮಂಡಲಾಧಿಪತಿಯಾಗಿ ಸಕಲ ರಾಜರನ್ನು ತನ್ನ ಕೈಕೆಳಗೆ ತೆಗೆದುಕೊಂಡು ಅವರುಗಳಿಂದ ಕಪ್ಪಕಾಣಿಕೆಗಳನ್ನು ಪಡೆಯುತ್ತಾ ಚಕ್ರವರ್ತಿಯಾಗಿ, ಅನೇಕ ದಿವಸ ರಾಜ್ಯವನ್ನು ಪರಿಪಾಲಿಸಿ, ಅನೇಕ ಸುತರನ್ನು ಪುತ್ರಿಯರನ್ನು ಪಡೆದು ಲೋಕದಲ್ಲಿ ಮಾನುಷಶರೀರಧಾರಿಯಾಗಿ ಪಡೆಯುವ ಸರ್ವೋತ್ತಮ ಸುಖಗಳನ್ನು ಅನುಭವಿಸಿ, ಕೊನೆಗೆ ಸರ್ವಸಂಗ ಪರಿತ್ಯಾಗಮಾಡಿ ವೈರಾಗ್ಯಮಾರ್ಗವನ್ನವಲಂಬಿಸಿ, ರಕ್ಕಸಿಯನ್ನು ನೆನೆಯಲಾಗಿ ಧೂಮಕೇತುವು ಎದುರಿಗೆ ಬಂದು ನಿಂತು ನನ್ನನ್ನು ನೆನಸಿದ ಕಾರ್ಯವೇನೆಂದು ಕೇಳಲಾಗಿ, ರಾಜತನಯನು ಎಲೈ ರಕ್ಕಸಿಯೇ! ನಾನು ಸರ್ವಸಂಗಪರಿತ್ಯಾಗಮಾಡಿ ವಿರಕ್ತಿಯನ್ನು ಕೈಕೊಂಡಿರುವೆನು. ಮಹರ್ಷಿಯ ಅನುಜ್ಞೆಯಂತೆ ನಾಗಕನ್ಯೆಯರಿಂದ ಅಚಲಪರಿಪೂರ್ಣಭಾವವನ್ನು ಗ್ರಹಿಸಿ, ಪ್ರಕೃತಿ ದ್ವಯ ದೋಷರಹಿತನಾಗಬೇಕಾಗಿದೆ ನೀನು ನನ್ನಲ್ಲಿ ಪುತ್ರವಾತ್ಸಲ್ಯವುಳ್ಳವಳಾಗಿ ನಾಗಲೋಕಕ್ಕೆ ಹೋಗಿ ಬರಬೇಕು. ಏಕೆಂದರೆ, ಆ ನಾಗಲೋಕದಲ್ಲಿ ಅನಂತನೆಂಬ ನಾಗರಾಜನಿಗೆ ಕಾಂತಾಮಣಿ, ಚಂದ್ರಕಾಂತಾಮಣಿ, ಪೂರ್ಣಚಂದ್ರಕಾಂತಾಮಣಿ, ಪರಿಪೂರ್ಣಚಂದ್ರಕಾಂತಾಮಣಿ, ಸರ್ವಪರಿಪೂರ್ಣಚಂದ್ರಕಾಂತಾಮಣಿ ಎಂಬದಾಗಿ ಐದುಜನ ಪುತ್ರಿಯರಿರುವರು. ನೀನು ಶೀಘ್ರದಲ್ಲಿ ಅವರನ್ನಿಲ್ಲಿಗೆ ಕರೆತರಬೇಕೆನಲು, ರಕ್ಕಸಿಯು ಆಗಲಿ ಎಂದು ನಾಗಲೋಕಕ್ಕೆ ಹೋಗಿ ಆ ಐದು ಜನ ಕನ್ಯೆಯರನ್ನು ತಂದು ನಿಲ್ಲಿಸಲಾಗಿ, ಆ ನರೇಂದ್ರನು ಮೊದಲಿನಿಂದ ತನ್ನ

ವೃತ್ತಾಂತವನ್ನು ಅವರಿಗೆ ತಿಳುಹಿ ಮರ್ಯಾದೆಗಳನ್ನು ನಡೆಸಿ, ಉಚಿತಾಸನದ ಮೇಲೆ ಕುಳ್ಳಿರಿಸಿ, ಅವರನ್ನು ಕುರಿತು, ಎಲೈ ಅಂಗನೆಯರಿರಾ! ತಾಪಸೋತ್ತಮನಾದ ಭೃಗುಮಹರ್ಷಿಯಿಂದ ನಿಮ್ಮಗಳ ಪ್ರಭಾವಗಳೆಲ್ಲವೂ ನನಗೆ ತಿಳಿಯಲ್ಪಟ್ಟಿರುವವು. ನಾನು ಪರಮಪದವನ್ನೈದುವ ಹಾಗೆ ನನಗೆ ಅಚಲಪರಿಪೂರ್ಣಭಾವವನ್ನು ಬೋಧಿಸಬೇಕೆಂದು ಶ್ರದ್ಧಾಸಕ್ತನಾಗಿ ಪ್ರಾರ್ಥಿಸಲು, ಅದಕ್ಕಾ ನಾರೀಮಣಿಗಳು ಆಶ್ಚರ್ಯವುಳ್ಳವರಾಗಿ ಆ ರಾಜೇಂದ್ರನನ್ನು ಕುರಿತು ಎಲೈ ಮಹಾತ್ಮನೇ! ಈ ಲೋಕದಲ್ಲಿ ಮರಳಿ ಜನ್ಮವೆತ್ತಲು ಇಚ್ಛೆಯಿಲ್ಲದಂಥಾ ನೀನು ಮಾಡಿದ ಪ್ರಶ್ನೆಯು ಅತ್ಯಂತ ಆನಂದಕರವಾಗಿರುವುದು. ಈ ಪ್ರಶ್ನೆಗೆ ಉತ್ತರವನ್ನು ತಿಳಿದುಕೊಂಡ ಬಳಿಕ ಎಂದಿಗೂ ಈ ಲೋಕದಲ್ಲಿ ಜನ್ಮವು ಲಭಿಸಲಾರದು. ಆಹಾ ನಿನ್ನ ಭಾಗ್ಯವನ್ನೆಂತು ವರ್ಣಿಸಬಹುದು. ಪರಮಪುರುಷನೇ ಶ್ರದ್ಧಾವಂತನಾಗಿ ಲಾಲಿಸೆಂದು ಬೋಧಿಸಲಾರಂಭಿಸಿದರು.



ಚಂದ್ರಕೇತುರಾಯನು.



ನಾಗಕನ್ಯೆಯು.

## ಚಂದ್ರಕೇತುರಾಯನಿಗೆ ನಾಗಕನ್ಯೆಯರಿಂದ ಬೋಧಿಸಲ್ಪಟ್ಟು ಅಚಲಪರಿಪೂರ್ಣಭಾವ.

ನಾಗರಾಜನ ಮೊದಲನೇ ಪುತ್ರಿಯಾದ ಕಾಂತಾಮಣಿ ಎಂಬುವಳು ರಾಜನನ್ನು ಕುರಿತು, ಕೇಳೈ ರಾಜೇಂದ್ರನೇ—ಶ್ಲೋ॥ ಭ್ರಮೇಣಾಹಂ ಭ್ರಮೇಣತ್ವಂ। ಭ್ರಮೇಣೋಪಾಸಕಾಜನಾಃ । ಭ್ರಮೇಣೇಶ್ವರಭಾವತ್ವಂ । ಭ್ರಮಮೂಲಮಿದಂ ಜಗತ್ ॥ ಎಂಬೀರೀತಿಯಾಗಿ ಹೇಳಲ್ಪಟ್ಟಿರುವ ಕಾರಣ ಪ್ರಕೃತಿ ವಿಕೃತಿ ಸ್ವರೂಪಗಳು ನಾಮರೂಪಗಳು ಉಳ್ಳ ತ್ರಿಲೋಕವಾಸಿಗಳೂ, ಕಾಂಚನದಲ್ಲಿಯೂ

ಕಾಂತೆಯಲ್ಲಿಯೂ ಅಪೇಕ್ಷೆಯುಂಟಾಗಿರುವರಾಗಿಯೇ ಇರುವರು. ಅಂಥಾ ಕಾಂಕ್ಷೆಗೆ ಭ್ರಾಂತಿಯೆಂಬುದೇ ಮೂಲವು ಆ ಭ್ರಾಂತಿಯಿಂದ ಕಾಮವು ಚಿತ್ತದೊಳು ಅಂಕುರಿಸಿ ಅಂಥಾ ಕಾಮದಿಂದಲೇ ಸರ್ವಭೂತಗಳು ಉತ್ಪತ್ತಿಯಾಗುತ್ತಲಿರುವದರಿಂದ ಇವುಗಳನ್ನೆಲ್ಲಾ ಬಿಟ್ಟು, ಪರಿಶುದ್ಧವಾದ ಚಿತ್ತವೆಂಬುವುದನ್ನು ಸತ್ತಿನಲ್ಲಿ ಸೇರಿಸತಕ್ಕದ್ದು ಆ ಸತ್ತು ಚಿತ್ತುಗಳ ಸಂಧಾನವೇ ಆನಂದವು, ಅದನ್ನೇ ಸಚ್ಚಿದಾನಂದವೆಂದು ಅರಿಯುವವನಾಗು. ಇದೇ ನಾದ ಬಿಂದು ಕಳೆಗಳೆಂತಲೂ, ತತ್ಪದವೆಂಬವಾಗಿಯೂ, ತ್ವಂಪದವೆಂದೂ ಅಸಿಪದಗಳೆಂತಲೂ ಕಾರಣ ಕಾರ್ಯವೆಂತಲೂ, ಪ್ರಪಂಚವೆಂತಲೂ, ಮಿಥ್ಯಾಸ್ವರೂಪವೆಂಬದಾಗಿಯೂ ತಿಳಿಯಬೇಕು. ಸರ್ವವೂ ಭ್ರಾಂತಿಯಾಗಿರುವದರಿಂದ ಆ ಭ್ರಾಂತಿಗೆ ಮೂಲವೇ ಶೂನ್ಯವಾಗಿರುವುದರಿಂದಲೂ ಅಂದರೆ ಭ್ರಾಂತಿಗೆ ಅಜ್ಞಾನವೇ ಮೂಲವೆಂದು ಮುಖ್ಯವಾಗಿ ತಿಳಿಯಬೇಕು.

ಎರಡನೇ ಕುವರಿಯಾದ ಚಂದ್ರಕಾಂತಾಮಣಿಯು ಅರಸನನ್ನು ಕುರಿತು, ಎಲೆ ಇಳೆಯಾಣ್ಮನೇ ಕೇಳು—ಶ್ಲೋ॥ ಜನ್ಮಾಭಾವೇ ಕರ್ಮನಾಸ್ತಿ । ಕರ್ಮಾಭಾವೇ ಫಲಂನಹಿ । ಪಲಾಭಾವೇ ಫಲಂಕೃತ । ಭಯಾಭಾವೇ ನಸಂಶಯೇ ॥ ಎನ್ನುವ ರೀತಿಯಾಗಿ ಸಕಲವೂ ಮಾಯಾಸ್ವರೂಪವಾಗಿಯೂ, ಅಂಥಾ ಮಾಯೆಗೆ ಮೂಲರಹಿತವಾಗಿಯೂ ಇರುವುದು. ತತ್ವಗಳ ವಿವೇಚನಕ್ಕೆ ಜ್ಞಾನವೇ ಮೂಲಕಾರಣವು. ಅಜ್ಞಾನವೆಂಬುವದು ಸಿಕ್ಕದ್ದಾಗಿಯೂ ಇಂದ್ರಜಾಲದಂತೆ ಕಾಣುವದು. ಮತ್ತು ಪ್ರಪಂಚವು ಸ್ವಪ್ನದೋಪಾದಿಯಲ್ಲಿ ಕಾಣುವದರಿಂದ ಈ ಪ್ರಪಂಚವನ್ನು ಸತ್ಯವಾದದ್ದಾಗಿ ಎಂದಿಗೂ ತಿಳಿಯಕೂಡದು. ಆದರೆ ಅಚಲ ಪರಿಪೂರ್ಣವೆಂಬ ಬ್ರಹ್ಮ ಒಂದೇ ನಿರಂತರವೂ ಸತ್ಯವಾದದ್ದು. ಅನೇಕ ಮಹನೀಯರು ಈಗ ಹೇಳಲ್ಪಟ್ಟ ಮಾಯಾಸ್ವರೂಪವಾದ ಪ್ರಪಂಚವನ್ನು ಬ್ರಹ್ಮನಿಂದರಿತು ಈರ್ಷ್ಯಾಸೂಯೆಗಳಿಗೆ ಸಿಕ್ಕಿ ಲೋಕಾನುಭವವಾದ ಸುಖದುಃಖಗಳು ಪಾಪ ಪುಣ್ಯಗಳು, ಬಂಧ ಮೋಕ್ಷಗಳು ಉಂಟೆಂದು ತಿಳಿದು, ಅಂಥಾ ದುಃಖರೂಪವಾದ ಬಂಧನಗಳ ನಿವೃತ್ತಿಗೆ ಭಕ್ತಿಯು, ಶ್ರದ್ಧೆಯು, ವೈರಾಗ್ಯವು, ಯೋಗವು, ಜ್ಞಾನವು ಇವುಗಳೇ ಮೂಲಕಾರಣಗಳೆಂದರಿತ. ಮದಿಸಿದ ಆನೆಯು ತನ್ನಷ್ಟಕ್ಕೆ ತಾನೇ ತನ್ನ ಮೇಲೆ ಮಣ್ಣನ್ನು ಎರಚಿಕೊಳ್ಳುವ ರೀತಿಯಾಗಿ ಪ್ರಯೋಜನಗಳಿಲ್ಲದ ವಿಧಿ, ನಿಷೇಧ, ನಿಯಮ, ನಿಷ್ಟ, ಉಪವಾಸ, ಸ್ನಾನ, ಜಪ, ಹೋಮ ಈ ಮೊದಲಾದಂಥಾ ಕರ್ಮರೂಪಗಳಾದವುಗಳನ್ನು ತಮ್ಮ ಮೇಲೆ ಹಾಕಿಕೊಂಡು ತಮಗೆ ಮೂಲವು ಜನನ ಮರಣ ಮೊದಲಾದವುಗಳು ಇವುಗಳನ್ನರಿಯದವರಾಗಿಯೂ ಅಥವಾ ವಿಚಾರಮಾಡದವರಾಗಿಯೂ ವ್ಯರ್ಥವಾಗಿ ಆಯಾಸಪಡುತ್ತಾರೆಂದು ನುಡಿದಳು.

ಮೂರನೆ ಕುವರಿಯಾದ ಚಂದ್ರಕಾಂತಾಮಣಿಯು ಧೊರೆಯನ್ನು ಕುರಿತು ಶ್ಲೋ॥ ಇಂದ್ರಜಾಲಮಿದಂ ಸರ್ವಂ | ಯಥಾಮರುಮರೀಚಿಕಾ ॥ ಅಖಂಡಿತ ಮನಾಕಾರಂ | ವರ್ತತೇ ಕೇವಲಂ ಶಿವಂ ॥ ಎಂಬ ವಚನದಂತೆ ಬೇಸಿಗೆಯು ಬಿಸಲಿನಲ್ಲಿ ಹಳ್ಳಗಳೊಳು ಹರಿದು ಹೋಗುತ್ತಲಿರುವ ನೀರಿನ ಪ್ರವಾಹದಂತೆ ಕಾಣುವ ಮೃಗತೃಷ್ಣಿಗಳೊಳು ನೀರೇ ಇರುವುದಿಲ್ಲ. ಜ್ಞಾನಶೂನ್ಯವುಳ್ಳ ಪಶು, ಪಕ್ಷಿ, ಮೃಗಾದಿ ಜಂತುಗಳು ನೀರಿಗೋಸ್ಕರ ಹೋಗಿ ಅಲ್ಲಿಲ್ಲದಿರುವುದರಿಂದಲೂ ಹಿಂದೆಯೂ ಮುಂದೆಯೂ ಕಾಣುವದರಿಂದಲೂ ಪದೇಪದೇ ಓಡಿಹೋಗುತ್ತಲೂ ಹಿಂದಕ್ಕೆ ಬರುತ್ತಲೂ ಈ ರೀತಿಯಾಗಿ ವೃಥಾ ಶ್ರಮುವನ್ನು ಹೊಂದುವುದು. ಅಚಲಪರಿಪೂರ್ಣ ಬ್ರಹ್ಮನಲ್ಲಿ ಪ್ರಪಂಚವು ಇರುವದಿಲ್ಲ. ನಾಮ ರೂಪಗಳುಳ್ಳ ಚೇತನಾಚೇತನವೆಲ್ಲವೂ ಮಾಯೆಯು. ನೀನು ನಾನು ಪ್ರಪಂಚವು, ಆ ನೀನು ನಾನು ಇಲ್ಲದಿರುವುದೇ ಪ್ರಪಂಚರಹಿತ. ಈ ಪರಿಪೂರ್ಣಕ್ಕಿಂತಲೂ ಬೇರೆ ಯಾವದೂ ಇಲ್ಲ. ಸಕಲವೂ ಭ್ರಾಂತಿಕಗಳೆಂದು ತಿಳಿಯಲಾರದೆ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ. ಸಮಾಧಿ ಎಂಬೀ ಅಷ್ಟಾಂಗ ಲಕ್ಷಣಗಳನ್ನು ಮಂತ್ರ ಲಯ ಹಠ ರಾಜಯೋಗಗಳನ್ನು ನಾನಾವಿಧಗಳಾದ ಮುದ್ರೆಗಳನ್ನು ಪ್ರಣವವೆ ಮುಂತಾದ ಮಹಾ ಮಂತ್ರಗಳನ್ನು ಅನೇಕರು ಅಭ್ಯಾಸಮಾಡಿ ಪ್ರಯೋಜನರಾಹಿತ್ಯವನ್ನು ಕೇವಲ ಶ್ರಮೆಯನ್ನು ಹೊಂದುತ್ತಲಿರುವರು. ಸಾಧಕವಿದ್ಯೆಯಿಂದ ಒಂದುಕಾಲಕ್ಕೂ ಪ್ರಯೋಜನವಿಲ್ಲ. ನಿರ್ಮಲವಾದ ದೇಹಕ್ಕೆ ದುರ್ಗಂಧ ವಸ್ತುವನ್ನು ಬಳಿದುಕೊಂಡು ಬಳಿಕ ಆ ದುರ್ಗಂಧವನ್ನು ನೀರಿನಿಂದ ತೊಳೆದುಕೊಳ್ಳುವ ಹಾಗೆ ತಾವು ಪರಿಶುದ್ಧವಾದ ಅಚಲಪರಿಪೂರ್ಣವಾಗಿದ್ದರೂ ಭ್ರಾಂತಿಯಿಂದ ನಾನಾವಿಧಗಳಾದ ಕರ್ಮಗಳನ್ನಾಚರಿಸುತ್ತಾ ಜನನ ಮರಣ ವ್ಯವಹಾರಗಳನ್ನು ಬಿಡಲಾರದೆಯೇ ಇರುತ್ತಾರೆಂದು ತಿಳಿ ಎಂದು ಹೇಳಿದಳು.

ನಾಲ್ಕನೇ ಪುತ್ರಿಯಾದ ಪರಿಪೂರ್ಣಚಂದ್ರಕಾಂತಾಮಣಿಯು ಅರಸನಿಗಿಂತೆಂದಳು—ಶ್ಲೋ॥ ಕ್ಷೇತ್ರಕ್ಷೇತ್ರಜ್ಞಯೋರನ್ಯಂ | ನಾಮರೂಪವಿವರ್ಜಿತಂ ॥ ಸದಾತ್ರಿಪುಟರಹಿತಂ | ಸರ್ವದ್ವಂದ್ವೈ ವಿವರ್ಜಿತಂ ॥ ಎಂದು ಹೇಳಿರುವಕಾರಣ ಜ್ಞಾನವು, ಅಜ್ಞಾನವು, ಸತ್ಯವು, ಅಸತ್ಯವು, ಧರ್ಮವು, ಅಧರ್ಮವು, ಆತ್ಮನು, ಅನಾತ್ಮನು, ಜೀವನು, ಈಶ್ವರನು, ದೇಹಿಯು, ದೇಹವು, ಕ್ಷರವು, ಅಕ್ಷರವು, ಸಚ್ಚಿದಾನಂದವು ಇವುಗಳ್ಯಾವವೂ ಅಚಲಪರಿಪೂರ್ಣ ಬ್ರಹ್ಮವೆಂದು ತಿಳಿಯುತಕ್ಕದ್ದಲ್ಲ. ಆ ಅಚಲಪರಿಪೂರ್ಣಬ್ರಹ್ಮವು ಪ್ರಕೃತಿ ವಿಕೃತಿ ದ್ವಂದ್ವಗಳಲ್ಲದೆ ಪರಿಪೂರ್ಣವಾದ ಕಾರಣ ಮಾತನಾಡದೆಯೂ, ಕೇಳದೆಯೂ, ಭಕ್ಷಿಸದೆಯೂ, ನಿತ್ಯವಾಗಿಯೂ, ಅದ್ವಯವಾಗಿಯೂ, ನಿರಂತರವು ಏಕರೂಪವಾಗಿಯ

ನಾಮರೂಪಗಳಿಲ್ಲದೆಯೂ ಇರುವದರಿಂದ ಇದನ್ನು ಅರಿಯಲಾರದೆ ಆ ಬ್ರಹ್ಮ ನಿಂದ ಜ್ಞಾನವು, ಮಾಯೆಯು ಹುಟ್ಟಿರುವದೆಂದು ನುಡಿಯುವರು. ಅಖಂಡ ಪರಿಪೂರ್ಣವು ಯಾವ ಕಾಲದಲ್ಲಿಯೂ ಖಂಡಾಕಾರವಾಗಿಯೂ, ಅಪರಿಪೂರ್ಣ ವಾಗಿಯೂ ಇರುವದಿಲ್ಲ. ಅಂಡ ಪಿಂಡ ಬ್ರಹ್ಮಾಂಡಗಳೆಂಬ ಖಂಡಗಳಲ್ಲಿ ಆನಂದಿಸುವ ಯೋಗಿಗಳೂ, ಜ್ಞಾನಿಗಳೂ ಅಚಲಪರಿಪೂರ್ಣ ಬ್ರಹ್ಮವನ್ನು ಕಾಣಲಾರದೆ ಭ್ರಾಂತಿರೂಪವಾದ ಪ್ರಜ್ಞೆಯನ್ನು ಭ್ರಮೆಯೆಂದು ತಿಳಿದು ತಮ್ಮ ಈ ರೀತಿಯಾದ ಭ್ರಾಂತಿಯನ್ನು ಬಿಡದೆ ಜನನ ಮರಣ ಪ್ರವಾಹರೂಪಗಳ ಸಮುದ್ರದಲ್ಲಿ ಬಿದ್ದು ಈಜುತ್ತಲಿರುವರೆಂದು ನುಡಿದಳು.

ಇದನೇ ಪುತ್ರಿಯಾದ ಸರ್ವಪರಿಪೂರ್ಣ ಚಂದ್ರಕಾಂತಾಮಣಿಯು ರಾಜೇಂದ್ರನನ್ನು ಕುರಿತು, ಕೇಳೈಯ್ಯಾ ಪೊಡವಿಪಾಲಕನೇ! ಶ್ಲೋ॥ ಆತ್ಮಾತೀತಂ ಕೇವಲಾತ್ಮಾ ದೇಹೋನಾಸ್ತಿ ಕದಾಚನ । ಅಸ್ತಿನಾಸ್ತೀತಿಕೋವೇದನಿರ್ಣಯೋ ನಾಸ್ತಿಸರ್ವದಾ ॥ ಎಂದು ಘಂಟಾಘೋಷದಂತೆ ಹೇಳುವ ಪ್ರಕಾರವು ಮತ್ತು ಶ್ಲೋ॥ ಭಿಂದತಿ ವೇದಶಾಸ್ತ್ರಾಣಿ ಭಿಂದಂತಿಭುವತ್ರಯಂ । ಎಂಬದಾಗಿಯೂ ಮತ್ತು, ಅಶರೀರಂಸರ್ವದಾ ಅಸ್ತಿ । ಶರೀರಂರಹಿತಂಸದಾ ॥ ಎಂದು ಹೇಳಿರುವ ಕಾರಣ ತೆಂಗಿನಕಾಯಿಯೊಳಗೆ ನೀರು ಉತ್ಪತ್ತಿಯಾದಂತೆ ಅಚಲಪರಿಪೂರ್ಣ ಬ್ರಹ್ಮನಲ್ಲಿ ಭ್ರಾಂತಿಯೆಂಬುವದು ಜನಿಸಿತು. ಆ ಭ್ರಾಂತಿಯೆಂಬುವದೇ ಇಂದ್ರ ಜಾಲ ಮಹೇಂದ್ರಜಾಲಗಳು. ಇದೇ ಪ್ರಪಂಚವಾಗಿಯೂ, ವೇದಶಾಸ್ತ್ರಗಳಾ ಗಿಯೂ ಇರುವದು. ಇದಕ್ಕೆ ಅಜ್ಞಾನವೆಂಬುವದೇ ಆವರಣ. ಇದೇ ಭ್ರಮು, ಪ್ರಮು ಮೊದಲಾದ ನಾನಾರೂಪಗಳುಳ್ಳದಾಗಿ ಸಕಲ ಜಂತುಸಮೂಹಗಳನ್ನು ಆವರಿಸಿಕೊಂಡು, ಆ ಇಂದ್ರಜಾಲ ಮೊದಲಾದವುಗಳಂತೆ ಆಡಿಸುತ್ತಾ, ಹಿಂದೊಂದು ಜಾತಿಯ ಜಂತುವಿನ ವಿವೇಕದೊಳು ಬೇರೆಬೇರೆ ಬಗೆಯಾಗಿ ಕಲ್ಪ ನೆಯನ್ನುಂಟುಮಾಡಿ ಆತನ ಕಲ್ಪನೆಯನ್ನೇ ಉತ್ತಮವೆಂಬ ಭ್ರಮೆಯನ್ನಾಗಿ ಹುಟ್ಟಿಸಿ, ಅದೊಂದುಮತವಾಗಿ ಅದಕ್ಕಾಗಿ ಶ್ರಮಪಡುತ್ತಾ ಇರುವ ಸಕಲ ರನ್ನು ಮೋಸಗೊಳಿಸಿ, ತಾನು ಸೂತ್ರಗಳನ್ನು ಹಿಡಿದುಕೊಂಡು ಪ್ರತಿಮೆಗಳಂತೆ ಆಡಿಸುತ್ತಾ ಇರುವದು ತಂದೆತಾಯಿಗಳಿಲ್ಲದೆ ಬಂದಂಥಾ ಈ ಪ್ರಜೆಗೆ ಮೂಲವಿ ಲ್ಲವು. ಆನೆಯು ನುಂಗಿದ ಬೇಲದ ಹಣ್ಣಿನೊಳು ಕಳೆದುಹೋಗಿರುವ ಗರ್ಭ ದಂತೆ ಆ ಪ್ರಜೆಯೇ ಮಟ್ಟಮಾಯವಾಗಿ ಹೋಗುತ್ತದೆಂದು ಆರ್ಯದರ್ಪಣದಲ್ಲಿ ಆಪೋಜ್ಯೋತಿಗಳನ್ನು ನೋಡಿಸಿ, ವಿವೇಕವೆಂಬ ಈ ಬಿಂಬಗಳಿಂದ ಗವಾಕ್ಷವೆಂಬ ಕಣ್ಣುರೆಪ್ಪೆಗಳನ್ನು ಮುಚ್ಚಿಕೊಂಡಾದರೂ ಇಲ್ಲವೆ ತೆರೆದಾದರೂ ಅಚಲಪರಿಪೂ ರ್ಣಬ್ರಹ್ಮವನ್ನು ಪ್ರತ್ಯಕ್ಷವಾಗಿ ನೋಡೆಂದು ಸಂಜ್ಞೆಯ ಮಾಡಿದಳು. ಆಗ ಚಂದ್ರಕೇತುವು ಗ್ರಹಿಸಿದವನಾಗಿ ಅಚಲಪರಿಪೂರ್ಣಬ್ರಹ್ಮವನ್ನು ನೋಡಿ ಅದ್ಭು

ತವನ್ನು ಹೊಂದಿ, ಆ ದೇವಿಯನ್ನು ಬಹುಪ್ರಕಾರವಾಗಿ ಸ್ತುತಿಸಿ ಅವಳ ಪಾದಗಳಮೇಲೆ ಬೀಳಲು ಅದನ್ನು ನೋಡಿ ನಾಗಕನ್ಯೆಯರು ಆ ರಾಜೇಂದ್ರನನ್ನು ಸಂತೈಸಿ ಮೇಲಕ್ಕೆ ಎತ್ತಿ ಕುಳ್ಳಿರಿಸಿ, ಎಲೈ ಮಗುವೇ! ಅಚಲಪರಿಪೂರ್ಣಬ್ರಹ್ಮದಲ್ಲಿ ಒಂದೂ ಜನಿಸುವುದಿಲ್ಲ. ಆಗ ಹುಟ್ಟುತ್ತದೆ ಎಂಬುವದು ಹಗ್ಗವನ್ನು ನೋಡಿ ಸರ್ಪವೆಂದು ಭ್ರಾಂತಿಪಡುವಂತೆ ಆಗುವದು ಅಂದರೆ ಹಗ್ಗವನ್ನು ತುಳಿದು ಹಾವುತುಳಿದನೆಂಬುವ ಸುಳ್ಳುಭ್ರಾಂತಿಗೊಂಡವನಿಗೆ ಕಂಪಾದಿಗಳುಂಟಾಗುವದಲ್ಲದೆ ಆ ಭಯದಿಂದ ಬಹಳ ಅಪಾಯಗಳುಂಟಾಗುವವು. ಅದ್ವಯವಾದ ನಿತ್ಯಪರಿಪೂರ್ಣ ನಿರ್ವಿಕಾರಕನಾಗಿರುವ ಬ್ರಹ್ಮದಲ್ಲಿ ಯಾವುದೂ ಹುಟ್ಟುವದಿಲ್ಲ ಈ ಜ್ಞಾನವು ನಿರ್ಮೂಲವಾದುದರಿಂದ ಹೇಗೆ ಬರುವದೋ ಅದರಂತೆಯೇ ಹೋಗುವದು ಸ್ವಪ್ನದಲ್ಲಿ ಕಂಡ ಮನುಷ್ಯಾದಿಗಳು ಎಚ್ಚರವಾದವೇಲೆ ಯಾವರೀತಿ ಕಾಣುವುದಿಲ್ಲವೊ ತದ್ವತ್ ಇದೆಲ್ಲಾ ಭ್ರಾಂತಿ ಇದೇ ಉಪದೇಶ, ಇದೇ ಷೋಡಶಾಕ್ಷರಿ, ನಿನ್ನ ಭ್ರಾಂತಿಯನ್ನು ಗುರುದಕ್ಷಿಣೆಯಂತೆ ಅರ್ಪಿಸಿ ಭ್ರಾಂತಿಯಿಂದ ಮುಕ್ತನಾಗು. ಈ ಪರಿಪೂರ್ಣ ಬ್ರಹ್ಮನಿಗಿಂತಲೂ ಮತ್ತಾವದೂ ಇಲ್ಲವೆಂದು ದ್ವಾದಶಾಕ್ಷರೀ ಮಂತ್ರವನ್ನುಪದೇಶಿಸಿದಳು.

ತರುವಾಯ ರಾಜತನಯನು ಆ ಕನ್ಯೆಯರನ್ನು ಕುರಿತು, ಎಲೈ—ಮಹಾತ್ಮೆಯುಳ್ಳ ಅಂಗನಾಮಣಿಗಳಿರಾ ಅಚಲಪರಿಪೂರ್ಣಬ್ರಹ್ಮಕ್ಕೂ ಆಕಾಶಕ್ಕೂ ಇರುವ ಭೇದವನ್ನು ತಿಳುಹಬೇಕೆನಲು, ಅದಕ್ಕವರು ಎಲೈ—ರಾಜೇಂದ್ರನೇ ಕೇಳು ಇವುಗಳೆರಡಕ್ಕೂ ಭೇದವು ಉಂಟಾಗಿಯೇ ಇರುವದು. (ಆಕಾಶಸ್ಯ ಗುಣಶ್ಶಬ್ದೋ ನಿಶ್ಶಬ್ದೋ ಬ್ರಹ್ಮ ಉಚ್ಯತೆ) ಎಂದು ಹೇಳಿರುವ ಶ್ರುತಿಯುಪ್ರಕಾರ ಆಕಾಶವು ಶಬ್ದಗುಣವು, ಅಚಲಪರಿಪೂರ್ಣಬ್ರಹ್ಮವು ಶಬ್ದಶೂನ್ಯವು, ನಿರ್ಗುಣವು, ಸರ್ವಲೋಕಗಳಲ್ಲಿಯೂ, ಸಮಸ್ತ ದೇಶಗಳೊಳಗೂ, ಸರ್ವವಸ್ತುಗಳಲ್ಲಿಯೂ, ಸಕಲ ಕಾಲದೊಳಗೂ ಬ್ರಹ್ಮವು ಚಲಿಸದೆ ಪರಿಪೂರ್ಣವಾಗಿ ಏಕರೀತಿಯಾಗಿರುವದು. ಇದಕ್ಕೆ ಸಮಾನವಾದದ್ದು ಬೇರೊಂದು ಇಲ್ಲವೆಂಬದಾಗಿ ಬೋಧಿಸಿ, ಅವನ ಸಂಶಯಗಳನ್ನೆಲ್ಲಾ ಹೋಗಗೊಳಿಸಿ, ಅನೇಕ ರತ್ನಮೊದಲಾದವುಗಳಿಂದ ತಾವು ಆತನನ್ನು ಪೂಜಿಸಿ ಆ ರಾಜತನಯನನ್ನು ಸಂತೈಸಿ, ಅಂತರ್ಧಾನವನ್ನೈದಿದರೆಂದು ಭಗವಂತನು ಹೇಳಲಾಗಿ ಅರ್ಜುನನು ಪರಮಾಶ್ಚರ್ಯಭರಿತನಾಗಿ ಆ ಮಹಾನುಭಾವನಿಗೆ ನಮಸ್ಕರಿಸಿ, ಎಲೈ—ದೇವದೇವನೇ ಆ ಚಂದ್ರಕೇತುರಾಯನ ವೃತ್ತಾಂತವು ಕೇವಲ ಶ್ಲಾಘನೀಯವಾಗಿಯೂ, ಪಾವನವಾಗಿಯೂ ಇರುವದು ಮತ್ತು ಇದನ್ನು ಕೇಳಿದ ಮಾತ್ರದಿಂದಲೇ ಜನನಮರಣ ಪ್ರವಾಹಗಳು, ವಿವಿಧ ಭ್ರಾಂತಿಗಳು ಕ್ಷಯವಾಗುವದೆಂದು ಬಹುಪ್ರಕಾರದಿಂದ ಸ್ತೋತ್ರಮಾಡಿ, ಎಲೈ—ಸ್ವಾಮಿಯೇ ಆ ಚಂದ್ರಕೇತು ಮಹಾರಾಯನ

ಮುಂದಣ ವೃತ್ತಾಂತವೇನು ಮತ್ತು ಅಭ್ಯಾಸಿಗಳೂ, ಆರೂಢರೂ ಹೊಂದತಕ್ಕ ಫಲಗಳು ಹೇಗಿರುವವು, ಅವುಗಳನ್ನು ನನಗೆ ಬೋಧಿಸಬೇಕೆಂದು ಪ್ರಾರ್ಥಿಸಲಾಗಿ, ಶ್ರೀಕೃಷ್ಣನು ಅರ್ಜುನನನ್ನು ಕುರಿತು, ಎಲೈ ಪಾಂಡುನಂದನನೇ! ಕೇಳು, ಆ ಚಂದ್ರಕೇತುವು ಅಚಲನಾಗಿಯೂ, ಪರಿಪೂರ್ಣನಾಗಿಯೂ, ಪ್ರಕೃತಿದ್ವಯ ದೋಷರಹಿತನಾಗಿಯೂ ಅನೇಕ ದಿವಸಗಳು ರಾಜ್ಯವನ್ನು ಪಾಲಿಸಿ ಬಳಿಕ ದೇಹವನ್ನು ಬಿಟ್ಟು ಶಾಶ್ವತವಾದ ಪರಮಪದವನ್ನೈದಿದನು. ಅಭ್ಯಾಸಿಗಳಿಗೆ ಮೋಕ್ಷವು ಅಲ್ಲದೆ ಇತರ ಪದವಿಗಳು ಅಂದರೆ, ಸಾಲೋಕ್ಯವು, ಸಾಮೀಪ್ಯವು, ಸಾರೂಪ್ಯವು, ಸಾಯುಜ್ಯವು, ಸಾರ್ಷ್ಟಿತ್ವವು ಈ ಐದು ಸಂಭವಿಸುವವು. ಆರೂಢರಿಗೆ ವಿವೇಕವನ್ನು (ಅರಿವು) ಬಿಡದೆ ಇರುವ ದೋಷದಿಂದ ಭ್ರಮರೂಪಕವಾದ ಮೋಕ್ಷದಲ್ಲಿದ್ದು ಪುನಃ ಜನನ ಮರಣ ಪ್ರವಾಹರೂಪಗಳಾದ ಮಾರ್ಗಗಳುಂಟಾಗುವವು. ಹರಿಹರಾದಿಗಳ ಅಂಶವನ್ನು ಹೊಂದಿ ಭೂಲೋಕದಲ್ಲಿ ಅವತಾರಮಾಡಿದ ಸಾಕಾರಸ್ವರೂಪವಾದ ಸದ್ಗುರುಸ್ವಾಮಿಯನ್ನು ವಿಷ್ಣುವೆಂತಲೂ, ಶಿವನೆಂತಲೂ ಭಾವಿಸಿ, ಆ ಮಹಾನುಭಾವನಿಗೆ ಅರ್ಚನ ವಂದನೆ ಮೊದಲಾದ ಪೂಜೆಗಳನ್ನು ಮಾಡಿ, ಆ ಗುರುಮುಖದಿಂದ ಭಕ್ತಿಯೋಗಜ್ಞಾನಗಳನ್ನು ಗ್ರಹಿಸಿ, ಸುಖದಿಂದ ಮೋಕ್ಷವನ್ನು ಪಡೆಯಬೇಕಲ್ಲದೆ ದೇಶಾಚಾರನಿಷ್ಠರಿಂದಲೂ, ತಿರುಮಣಿ, ಶ್ರೀಚೂರ್ಣಗಳನ್ನು, ಧರಿಸುವದರಿಂದಲೂ, ವಿಭೂತಿ ರುದ್ರಾಕ್ಷಿಗಳಿಂದ ಅಲಂಕರಿಸಿಕೊಳ್ಳುವುದರಿಂದಲೂ, ಅಷ್ಟಾಕ್ಷರೀ, ಷಡಾಕ್ಷರೀ, ಪಂಚಾಕ್ಷರೀ, ಚತುರಾಕ್ಷರೀ ಮೊದಲಾದ ಮಂತ್ರಗಳನ್ನು ಗುಣಗುಟ್ಟುವುದರಿಂದಲೂ ಪರಮಪದವಾದ ಮೋಕ್ಷವನ್ನೈದಲಾರರು. ಅವಿವೇಕರಾದ ಕೆಲವರು ಗುಡಿಗೋಪುರಗಳಿಗೆ ಹೋಗಿ ನಾನಾವಿಧಗಳಾದ ದಾರು, ಪಾಷಾಣ ಲೋಹಗಳಿಂದ ಮಾಡಲ್ಪಟ್ಟಿರುವ ಪ್ರತಿಮೆಗಳಿಗೆ ಅರ್ಚನವಂದನಾದಿಗಳು ಪ್ರತಿಮೆಗಳಿಗೆ ನಿಷಿದ್ಧಗಳೆಂತಲೂ, ಪ್ರಯೋಜನಗಳಲ್ಲವೆಂತಲು, ಜ್ಞಾನಶೂನ್ಯರಿಗೆ ಮಾತ್ರ ಅವುಗಳು ತ್ರೇತಾಯುಗದಲ್ಲಿ ಕಲ್ಪಿಸಲ್ಪಟ್ಟವೆಂತಲೂ, ಶ್ರೀಮದ್ಭಾಗವತವು ಘಂಟಾನಾದದಂತೆ ಮೊರೆಯಿಡುತಲಿದ್ದರೂ ಅನೇಕ ಪ್ರಜ್ಞಾನಶೂನ್ಯರು ಅದನ್ನು ಏನುಕಾರಣ ನೆನೆಯುವುದಿಲ್ಲವೊ ತಿಳಿಯದು.

ಸಕಲ ಧರೆಯಲ್ಲಿಯು ತುಂಬಿ ನಿಬಿಡೀಕೃತಮಾದ ಪರಿಪೂರ್ಣಬ್ರಹ್ಮವು, ಆಗ ಹೇಳಲ್ಪಟ್ಟ ಪ್ರತಿಮೆಗಳಲ್ಲಿಯೂ ಇರುವುದಿಲ್ಲವೆ ಎಂದು ಸಂಶಯವುಂಟಾದರೆ ತಮಗೆ ಎದುರಾಗಿ, ಹಿಂದೆಯು, ಪಾರ್ಶ್ವಗಳಲ್ಲಿಯು ಅಚಲಪರಿಪೂರ್ಣಬ್ರಹ್ಮವು ತುಂಬಿರುವುದೆಂದು ಯೋಚಿಸದೆ ಆ ದಾರು ಪಾಷಾಣಾದಿ ಶಿಲೆಗಳಲ್ಲಿ ಮಾತ್ರವೇ ಇರುವುದೆಂದು ಯೋಚಿಸುವ ಅಂಥಾ ಚಂಚಲಮನವು ಎಷ್ಟು ಯುಗಗಳಾದಾಗ್ಯೂ ಜನನ ಮರಣ ಪ್ರವಾಹರೂಪಗಳುಳ್ಳ ಸಮುದ್ರದಲ್ಲಿ ಮುಳುಗಿ ದಡ

ವನ್ನು ಕಾಣದೆ ಇರುವದು. ಮತ್ತು ಕೆಲವರು ಉತ್ತಮವಾದ ಗುರುವಿನಪಾದದ ಜಲವೇ ಗಂಗಾತೀರ್ಥವೆಂದು ನಿಜದಿಂದ ಮನದಲ್ಲಿ ನೆನೆಯದವರಾಗಿ, ಅನೇಕವಾದ ಗಂಗಾದಿ ತೀರ್ಥಗಳಿಗೆ ಹೋಗಿ (ಕಾಗಿ, ಹದ್ದುಗಳಂತೆ) ತಾವೂ ಮುಳುಗುವರು ಮೊಸಳೆಗಳು, ಮೀನುಗಳು, ನಳ್ಳಿಗಳು ಮೊದಲಾದ ಜಲಚರ ಜಂತುಗಳು ನಿರಂತರವೂ ನೀರಿನಲ್ಲಿಯೇ ಇರುವದರಿಂದ ಅವುಗಳಿಗೆ ಎಷ್ಟು ಫಲಾದಿಗಳುಂಟಾಗುವವೂ ಮೇಲ್ಕಂಡಂತೆ ಮುಳುಗುವವರಿಗೂ ಅಷ್ಟೇ ಲಭಿಸುವುದೆಂದು ಕಾಶೀಘಟ್ಟ ಪ್ರಕರಣವು ನುಡಿಯುತಲಿದೆ. ದೇಶಾಚಾರನಿಷ್ಟರಾದ, ಕೆಲವರು, ನಿಷ್ಪ್ರಯೋಜನಗಳನ್ನು ತಿಳಿಯದೆಯು ಆತ್ಮನನ್ನು ಶ್ರೀಮನ್ನಾರಾಯಣನಲ್ಲಿ ಸಂಧಾನವನ್ನಾಗಿ ಮಾಡದೆಯೂ, ಸದ್ಗುರುವಿನ ಮಂತ್ರವೇ ತನ್ನ ಮೋಕ್ಷಕ್ಕೆಳೆಯುವುದೆಂದು ಯೋಚಿಸದೆಯು, ಭಿನ್ನಾಭಿಪ್ರಾಯವುಳ್ಳವರಾಗಿರುವುದರಿಂದ ಲೇಶವೂ ಫಲವಿಲ್ಲ. ಅರ್ಜುನನೇ ಈ ಹನ್ನೆರಡು ಪುಣ್ಯಚರಿತ್ರೆಗಳನ್ನು ಓದಿದಾಗ್ಯೂ, ಕೇಳಿದಾಗ್ಯೂ, ಮಹಾಮುನೀಂದ್ರರನ್ನು ಸೇವಿಸಿ ಕೀರ್ತಿಸಿದರೂ ಪುಣ್ಯಲೋಕಗಳನ್ನೈದುವರು. ಮತ್ತು ಸಾಕ್ಷಾತ್ ಸದ್ಗುರುವಿನ ಉಪದೇಶದಿಂದ ಅರಿತ ವಿವೇಕಪರರಿಗೆ ಮೋಕ್ಷವೂ, ಅಚಲಪರಿಪೂರ್ಣ ಬ್ರಹ್ಮವನ್ನು ದರ್ಶಿಸಿದ ಮಹನೀಯರಿಗೆ ವಿದೇಹಕೈವಲ್ಯವೂ, ಪರಮಪದವೂ ಸಂಭವಿಸುವದರಲ್ಲಿ ಸಂಶಯವಿಲ್ಲ.

ಆದಕಾರಣ ನೀನೀಸ್ವರೂಪವನ್ನು ದರ್ಶಿಸಿ, ಈ ವಿಶ್ವರೂಪಕವಾದ ಈ ಶರೀರ ಆತ್ಮಗಳುಳ್ಳ ಅರಿವನ್ನು ಸಂಪೂರ್ಣವಾಗಿ ತ್ಯಜಿಸಿ, ಶಾಶ್ವತವಾದ ಮೋಕ್ಷವನ್ನು ಹೊಂದುವನಾಗೆಂದು ಷೋಡಶಾಕ್ಷರೀ ಮಂತ್ರವನ್ನು ಬೋಧಿಸಿ, ಶರೀರಾತ್ಮಗಳಮೇಲೆ ಭ್ರಮೆಯಿಲ್ಲದವನನ್ನಾಗಿ ಮಾಡಿ, ಬಳಿಕ ದ್ವಾದಶಾಕ್ಷರೀ ಮಂತ್ರವನ್ನುಪದೇಶಿಸಿ, ಎಲೈ—ಇಂದ್ರನಂದನನೇ ನೀನು ಅಶರೀರನಾಗಿರುವದರಿಂದ ಜನನಮರಣ ಪ್ರವಾಹಗಳು ಪಾಪಪುಣ್ಯಗಳು ಉಂಟಾಗಿರುವುದಿಲ್ಲವೆಂದು ನುಡಿದು, ಅಚಲಪರಿಪೂರ್ಣಬ್ರಹ್ಮವನ್ನು ಸಂಜ್ಞೆಮಾಡಿ ತಿಳುಹಿಸಿದನು.

ಆಗಲಾ ಅರ್ಜುನನು ಶ್ರೀಕೃಷ್ಣನ ಪಾದಕಮಲಗಳಮೇಲೆ ಬಿದ್ದು, ಎಲೈ—ಮಹಾತ್ಮನೇ ನನ್ನ ಸಮಸ್ತ ಪಾಪಗಳು ನಶಿಸಿದವು ಕೃತಾರ್ಥನಾದೆನು. ಜನನಮರಣ ಪ್ರವಾಹರೂಪಾದಿಗಳಿಂದ ನನ್ನನ್ನು ಮುಕ್ತನನ್ನಾಗಿಮಾಡಿ, ಸದುಪದೇಶವನ್ನು ಮಾಡಿದಕಾರಣ ನನ್ನ ಭಾಗ್ಯವನ್ನೆಷ್ಟೆಂದು ಕೊಂಡಾಡಲಿ ಎಂದು ಆತನನ್ನು ಬಹುವಿಧಗಳಿಂದ ಸ್ತುತಿಸಿ, ಮಹಾನುಭಾವನೇ ನಿನ್ನನ್ನು ಕೊಂಡಾಡಲು ನಾನು ಸಮರ್ಥನಲ್ಲವೆಂದು ಹೇಳಿ ಬಹಳವಾಗಿ ಆನಂದಪರವಶನಾಗಲು, ಶ್ರೀಕೃಷ್ಣನು ಆತನನ್ನು ಸಂತೈಸಿ, ಸ್ವಲ್ಪಕಾಲ ದೇವರಹಸ್ಯಗಳನ್ನು ಸಂಭಾಷಣೆ ಮಾಡಿ ಬಳಿಕ ಇರ್ವರೂ ಶಯನಿಸಿ ಸುಖನಿದ್ರೆಯೊಳಿರುತ್ತಿದ್ದರು.

**ಹನ್ನೆರಡನೆಯ ಕಥೆ ಸಂಪೂರ್ಣವಾದುದು.**





ಶ್ರೀಕೃಷ್ಣಾಯ ನಮಃ.

## ಕೃಷ್ಣಾರ್ಜುನರು ಖಾಂಡವವನವನ್ನು ದಹಿಸಿದ ಕಥೆ.

ಹದಿಮೂರನೆಯ ದಿವಸ ಸೂರ್ಯೋದಯಾನಂತರದಲ್ಲಿ ವಾಸುದೇವನು, ಕುಂತೀನಂದನನನ್ನು ಕುರಿತು, ಎಲೈ—ಇಂದ್ರನಂದನನೇ ನಾವೀರ್ವರೂ ಈ ಯಮುನಾನದೀ ಪ್ರಾಂತ್ಯದಲ್ಲಿ ಹನ್ನೆರಡು ದಿವಸಗಳಿಂದಲೂ ಕಾಲವನ್ನು ಕಳೆದ ವರಾದೆವು. ಇನ್ನುಮೇಲೆ ನಾವು ಇಲ್ಲಿ ಮಾಡತಕ್ಕ ಕಾರ್ಯವೇನು ಬಹಳ ದಿವಸ ಗಳವರೆಗೂ ನಾನು ಸಾವಕಾಶವಾಗಿ ಇಲ್ಲಿರೋಣದರಿಂದ ತಂದೆತಾಯಿಗಳು ಬಹಳವಾಗಿ ಕಳವಳಪಡುವರು. ಗೋಪಸ್ತ್ರೀಯರು ಕೂಡ ಬಹಳವಾಗಿ ಪರಿ ತಪಿಸುತಲಿರುವರು ಇನ್ನು ಜಾಗ್ರತೆಯಾಗಿ ಪ್ರಯಾಣ ಮಾಡುವದು ಯುಕ್ತ ವಾಗಿರುವ ಕಾರಣ ನಾವು ತಡೆಮಾಡದೆ ಇಲ್ಲಿಗೆ ಅತ್ಯಂತ ಸಮೀಪದಲ್ಲಿರುವ ಅಮರಾಧಿಪನ ಉದ್ಯಾನವನದ ಬಳಿಗೆ ಹೋಗಿ ಅದನ್ನು ನೋಡಿಕೊಂಡು ಹೊರ ಡಬೇಕೆಂದಾತನಿಗೆ ತಿಳುಹಲು, ಅದನ್ನು ಕೇಳಿದ ಅರ್ಜುನನು ಆನಂದಪಡುತ್ತಾ ಸಮ್ಮತಿಸಿ ಈರ್ವರೂ ಪ್ರಯಾಣವಾಗಿ ಹೊಂಟು, ಆ ಅಮರಪತಿಯ ವನವಂ ಹೊಕ್ಕು ನಾನಾವಿಧಗಳಾದ ಫಲವೃಕ್ಷಗಳನ್ನು ವಿವಿಧವಾದ ಪುಷ್ಪಗಳ ಗಿಡಗ ಳನ್ನು, ಅನೇಕವಾದ ಲತಾವಿಶೇಷಗಳನ್ನು, ನೇತ್ರೋತ್ಸವವಾಗಿ ನೋಡುತ್ತಾ, ಶುಕ, ಪಿಕ, ಶಾರಿಕಾದಿ ಪಕ್ಷಿವರ್ಗಗಳ ನಿನಾದವನ್ನು ಕೇಳುತ್ತಾ, ಆ ಆನಂದಾ ಶ್ರಮದೊಳು ಒಂದಾನೊಂದು ವೃಕ್ಷದ ಕೆಳಗೆ ಕುಳಿತುಕೊಂಡು ವಿಶ್ರಾಂತಿ ಸುಖ ವನ್ನೈದುತ್ತಲಿರಲು, ಅಗ್ನಿದೇವನು ಕೃಷ್ಣಾರ್ಜುನರೀರ್ವರೂ ಆ ಉದ್ಯಾನವನದಲ್ಲಿ ಕುಳಿತಿರುವದನ್ನು ಕಂಡು ಅಹಹಾ ಸೃಷ್ಟಿಕರ್ತನಾದ ಬ್ರಹ್ಮನ ಅಪ್ಪಣೆಯು

ತನಗೆ ಲಭಿಸಿತಾದಕಾರಣ ಇವರೀರ್ವರೂ ನನ್ನ ವ್ಯಾಧಿಯನ್ನು ಪರಿಹರಿಸಲೋಸುಗ ದಯಮಾಡಿದಕೆಂದರಿತು ಅತ್ಯಂತ ಸಂತೋಷ ಮಾನಸನಾಗಿ ಅವರ ಸಮಿಾಪವನ್ನೈದಿ ಅವರನ್ನು ಬಹುಪ್ರಕಾರದಿಂದ ಸ್ತುತಿಸಿ, ತಾನು ಅಗ್ನಿದೇವನೆಂದು ಅವರಿಗೆ ತಿಳುಹಿ, ತನಗೆ ಪ್ರಾಪ್ತವಾಗಿರುವ ಮಾಂದ್ಯರೋಗವನ್ನು, ಚತುರ್ಮುಖನ ಅನುಜ್ಞೆಯನ್ನು ಅಮರಾಧಿಪನಾದ ಇಂದ್ರನಿಂದ ತನಗುಂಟಾಗುತ್ತಲಿರುವ ವಿರೋಧವನ್ನು ಹೇಳಿ, ಪರಮಾತ್ಮನಾದ ಶ್ರೀಕೃಷ್ಣನಿಗೆ ಶಂಖ, ಚಕ್ರಗಳನ್ನು, ದಿವ್ಯತರವಾದ ಶ್ವೇತಾಶ್ವಗಳಿಂದುಕ್ತಮಾದ ರಥವನ್ನು ಅಕ್ಷಯತೂಣೀರವನ್ನು ಅರ್ಜುನನಿಗೂ ಕೊಟ್ಟು ಅವುಗಳ ಪ್ರಭಾವಗಳನ್ನು ವಿವರಿ. ಹೇಳಲಾಗಿ, ನರನಾರಾಯಣರೀರ್ವರೂ ಅತ್ಯಂತ ಆನಂದಪರವಶರಾಗಿ ಆ ಹವ್ಯವಾಹನನನ್ನು ಕುರಿತು, ಆ ಮಹಾತ್ಮನಿಗೆ ನಮಸ್ಕರಿಸಿ, ಎಲೈ ಅನಲನೆ ಮೂರು ಲೋಕದಲ್ಲಿರುವವರೆಲ್ಲರೂ ಯಾಗಾದಿ ಕ್ರತುಗಳನ್ನು ಮಾಡುವದು ನಿನ್ನ ಸಹಾಯದಿಂದಲ್ಲದೆ ಇತರರ ಸಹಾಯವು ಫಲಕಾರಿಯಾಗುವದೇ ನಿನ್ನನ್ನು ತ್ಯಜಿಸಿ ಅಂಥವುಗಳ ಮೂಲಕ ಸ್ವರ್ಗಾದಿ ಲೋಕಗಳನ್ನು ಪಡೆಯುವರೀತಿಯಾವುದು. ಅಹಾ ಲೋಕಪಾವನನಾದ ನಿನಗೆ ಮಾಂದ್ಯವನ್ನುಂಟುಮಾಡುವರುಂಟೆ ನೀನು ಭಯವನ್ನು ತ್ಯಜಿಸಿ, ಈಕ್ಷಣದಲ್ಲಿಯೇ ತ್ರಿಲೋಕಾಧಿಪನಾದ ದೇವೇಂದ್ರನ ವನವನ್ನು ದಹಿಸುವನಾಗೆಂದು ಅಪ್ಪಣೆಯನ್ನಿತ್ತರು.

ಆಗಲಾ ಹವ್ಯವಾಹನನು ಅತ್ಯಂತ ಉತ್ಸಾಹವುಳ್ಳವನಾಗಿ ಆ ಮಹಾತ್ಮರನ್ನು ಕುರಿತು, ಎಲೈ ಪುಣ್ಯಪುರುಷರೇ ನೀವು ಈ ಭೂಭಾರವನ್ನು ತಪ್ಪಿಸುವದಕ್ಕಾಗಿಯೂ, ಲೋಕವನ್ನು ಸಂರಕ್ಷಿಸುವದಕ್ಕೂ, ಸಾಕ್ಷಾತ್ ನರನಾರಾಯಣಾಂಶದಿಂದ ಅವತರಿಸಿ, ಲೋಕೋಪಕಾರವನ್ನು ಮಾಡುತಲಿರುವಿರಿ. ನಿಮ್ಮ ದರ್ಶನದಿಂದ ನಾನು ಕೃತಾರ್ಥನಾದೆನೆಂದು ಬಹುಪ್ರಕಾರವಾಗಿ ಅವರನ್ನು ಸ್ತುತಿಸಿ, ಸಂಗಡಲೇ ತಾನು ನಾಲ್ಕು ದಿಕ್ಕುಗಳಿಗೂ ವ್ಯಾಪಿಸಿ, ವನವನ್ನೆಲ್ಲಾ ದಹಿಸಲಾರಂಭಿಸಿದನು.

ಆ ಹವ್ಯವಾಹನನು ಪ್ರತ್ಯಕ್ಷವಾಗಿ ವನವನ್ನೆಲ್ಲಾ ಸುಡುತ್ತಾ ಬಂದದ್ದನ್ನು ಕಂಡ ವನಪಾಲಕರು ಒಡ್ಡೋಲಗದಲ್ಲಿ ಕುಳಿತಿರುವ ದೇವೇಂದ್ರನ ಬಳಿಗೆ ಹೋಗಿ, ಎಲೈ ಅಮರಪತಿಯೇ ಇದುವರೆಗೂ ನಿನ್ನಿಂದ ಸಂರಕ್ಷಿಸಲ್ಪಡುತ್ತಿದ್ದ ನಿನ್ನ ಉದ್ಯಾನವನವನ್ನು ಕಾಪಾಡುತಲಿದ್ದೆವು. ಈಗ ಪ್ರಳಯವಾಗುವ ಕಾಲ ಸಂಭವಿಸಿದಕಾರಣದಿಂದಲೋ ಏನೋ ಧಗದ್ಧಗಾಯಮಾನವಾಗಿ ಛಟಪಟ ಧ್ವನಿಗಳೊಡನೆ ಬ್ರಹ್ಮಾಂಡ ಕಟಾಹವನ್ನು ಆವರಿಸಿಕೊಂಡು ಅಗ್ನಿಯು ಸುಡುತಲಿರುವದು. ನಿನ್ನ ಉದ್ಯಾನವೂ, ಕ್ರೀಡಾಸರಸ್ಸುಗಳೂ, ಲತಾವಿತಾನಗಳೂ, ಮೃದುಮಧುರವಾದ ಪಕ್ಷಿಗಳ ಧ್ವನಿಗಳೂ ಈಗ ಎಲ್ಲಿ ಹೋಯಿತೋ ಕಾಣುವ

ದಿಲ್ಲವೆಂದು ಯಥಾರ್ಥ ಸಂಗತಿಯನ್ನು ಬಿನ್ನೈಸಿದರು. ಆ ಮಾತನ್ನು ಕೇಳಿದ ತಕ್ಷಣದಲ್ಲಿಯೇ ತ್ರಿದಶಾಧಿಪನು ಕಾಲಾಗ್ನಿರುದ್ರನಂತೆ ಕೋಪಾಟೋಪದಿಂದುಬ್ಬಿ ಸಮರ್ಥರಾದ ಸೇನಾನಾಯಕರನ್ನು ಕರೆದುಕೊಂಡು ನವಮೇಘಗಳು ಸಹಿತವಾಗಿ ಬಂದು ವನವನ್ನೆಲ್ಲಾ ನಿಮಿಷಮಾತ್ರದಲ್ಲಿ ತಣ್ಣಗಾಗುವ ಹಾಗೆ ವರ್ಷಗಳನ್ನು ಸುರಿಸುವಂತೆ ಮೇಘಗಳಿಗೆ ಅಪ್ಪಣೆಯನ್ನು ಮಾಡಲಾಗಿ, ಅವು ಇಂದ್ರನ ಅಪ್ಪಣೆಯಮೇರಿಗೆ ಅವಿಚ್ಛಿನ್ನವಾದ ದಾರೆಗಳಿಂದ ನೀರನ್ನು ಸುರಿಸಲಾರಂಭಿಸಿದವು. ಅದನ್ನು ನೋಡಿದಕೂಡಲೆ ಅರ್ಜುನನು ಆ ಮಳೆಯ ಹನಿಗಳು ಬೀಳದಂತೆ ತನ್ನ ಅಸ್ತ್ರಗಳಿಂದ ಅಂತರಿಕ್ಷದಲ್ಲಿ ತಡೆಮಾಡಲು, ವನದಲ್ಲಿ ಒಂದು ತೊಟ್ಟು ನೀರು ಕೂಡ ಬೀಳದೇ ಹೋಯಿತು. ಇದನ್ನು ನೋಡಿದ ಇಂದ್ರನು ಕೋಪಾಕ್ರಾಂತನಾಗಿ ಮೇಘಗಳನ್ನು ಶಿಕ್ಷಿಸಿ ಅಘೋರವಾದ ವರ್ಷಗಳು ಸುರಿಯುವಂತೆ ಆಜ್ಞೆಮಾಡಲು ಎಷ್ಟು ಬಲವಾಗಿ ಜಲಪ್ರಳಯವಾಗುವಂಥಾ ಮಳೆಯು ಸುರಿಯುತ್ತ ಬಂದರೂ ಆ ಅರ್ಜುನನು ಕಟ್ಟಿದ ಶರಪಂಜರದಿಂದ ಒಂದು ತೊಟ್ಟಾದರೂ ಅಗ್ನಿಯಮೇಲೆ ಬೀಳದೆ ಹೋಗಲಾಗಿ ಇಂದ್ರನು ಅದರ ಕಾರಣವನ್ನರಿಯದೆ ಬಳಿಕ ಅರ್ಜುನನಿಂದ ಈ ಕಾರ್ಯವು ನಡೆಯುವದೆಂದು ತಿಳಿದು ಅವನೊಡನೆ ಯುದ್ಧವನ್ನು ಮಾಡಲಾರಂಭಿಸಿ ಎಷ್ಟುಯುದ್ಧ ಮಾಡಿದರೂ ಆತನನ್ನು ಜೈಸುವದಕ್ಕೆ ಆಗದೇ ಹೋದುದರಿಂದ ಆಶ್ಚರ್ಯವನ್ನು ಹೊಂದಿ ಶ್ರೀಕೃಷ್ಣಾರ್ಜುನರೀರ್ವರಿಂದಲೂ ಸಂಭವಿಸಿತೆಂದು ಅರಿತು ಅವರ ಪ್ರಭಾವಗಳನ್ನು ತಿಳಿದು ಕೃಷ್ಣನನ್ನು ಸ್ತುತಿಸಿ ಅರ್ಜುನನನ್ನಾಲಿಂಗನ ಮಾಡಿಕೊಂಡು ಅವನಿಗೆ ಬೇಕಾದವರಗಳನ್ನಿತ್ತು ಸಂತೈಸಿ ಅಮರಪುರಿಗೆ ತೆರಳಿದನು. ಬಳಿಕ ಹವ್ಯವಾಹನನು ತನ್ನ ಇಚ್ಛಾನುಸಾರವಾಗಿ ವನವೆಲ್ಲಾ ದಹಿಸಿ ತೃಪ್ತಿಯನ್ನು ಹೊಂದಿ ಕೃಷ್ಣಾರ್ಜುನರ ಅಪ್ಪಣೆಯನ್ನು ಪಡೆದು ತನ್ನ ಲೋಕಕ್ಕೆ ಹೋದನು. ತರುವಾಯ ಕೃಷ್ಣಾರ್ಜುನರು ತಮಗೆ ಶರಣಾಗತನಾದ ಮಯನನ್ನು ಕರೆದುಕೊಂಡು ಇಂದ್ರಪ್ರಸ್ಥಪುರಕ್ಕೆ ಬಂದು ನಡೆದ ಸಂಗತಿಗಳನ್ನೆಲ್ಲಾ ಕ್ರಮವಾಗಿ ಧರ್ಮರಾಯನಿಗೆ ತಿಳುಹಲು, ಯುಧಿಷ್ಠಿರನು ಆನಂದಪರವಶನಾಗಿ ವಾಸುದೇವನನ್ನಾಲಿಂಗಿಸಿಕೊಂಡು, ಎಲೈ—ದೇವೋತ್ತಮನೇ ! ಲೀಲಾಮಾನುಷ ವಿಗ್ರಹನೇ ನಿನ್ನ ಕರುಣಾಕಟಾಕ್ಷದಿಂದಲ್ಲವೇ ಅರ್ಜುನನಿಗೆ ಲೋಕದಲ್ಲಿ ಕೀರ್ತಿಯೂ ಪರಾಕ್ರಮವೂ ವ್ಯಾಪಿಸುತಲಿರುವದು ಇಲ್ಲದಿದ್ದರೆ ಹೀಗಾಗಲು ಕಾರಣವೇ ಇಲ್ಲ ಎಂದು ಆತನನ್ನು ಸ್ತುತಿಸಿ ಮಯನನ್ನು ಸನ್ಮಾನಿಸಿದನು. ಆಗಲಾ ಮಯನು ಧರ್ಮರಾಯನ ಶಾಂತ, ಶಮದಮಾದಿ ಗುಣಗಳಿಗೂ, ಭೀಮಸೇನನ ಔನ್ನತ್ಯಾಕಾರ್ಯಕ್ಕೂ ಕಡುಸಂತೋಷವನ್ನೈದಿ ಧರ್ಮರಾಯನಿಗೆ ದಿವ್ಯವಾದ ಸಭೆಯನ್ನು, ಭೀಮಸೇನನಿಗೆ ಗದಾಯುಧವನ್ನು ಕೊಟ್ಟು ತನ್ನ ಸ್ವಸ್ಥಾನಕ್ಕೆ ತೆರಳಿದನು.

ತರುವಾಯ ಶ್ರೀಕೃಷ್ಣನು ಧರ್ಮರಾಯನಿಂದ ಅಪ್ಪಣೆಯನ್ನು ಪಡೆದು ಸುಭದ್ರೆಗೆ ಉಚಿತವಾದ ವಾಕ್ಯಗಳನ್ನು ಬೋಧಿಸಿ, ಕುಂತೀದೇವಿಯ ಅನುಜ್ಞೆಯನ್ನು ತಲೆಯೊಳಾಂತು ತನ್ನ ಪುರಕ್ಕೆ ಪ್ರಯಾಣಮಾಡಲು, ಅರ್ಜುನನು ಯಾದವಕುಲಾಂಬುಧಿಯನ್ನು ಹಿಂಬಾಲಿಸಿ ಸ್ವಲ್ಪದೂರ ಆತನ ಸಂಗಡಲೇ ಹೋಗಿ ಬಳಿಕ ಆತನಿಗೆ ನಮಸ್ಕರಿಸಿ ಅಪ್ಪಣೆಯನ್ನು ಪಡೆದು ಇಂದ್ರಪ್ರಸ್ಥಪುರಕ್ಕೆ ಬಂದನು. ಕೃಷ್ಣನು ಅಲ್ಲಿಂದ ದ್ವಾರಕಾಪುರಕ್ಕೆ ಬಂದು ಅಲ್ಲಿ ಆತನ ಬರುವಿಕೆಯನ್ನೆದುರುನೋಡುತಲಿದ್ದ ಜನನೀಜನಕರನ್ನು ಗೋಪಸ್ತ್ರೀಯರನ್ನು ಸಂತೋಷಪಡಿಸಿ, ತಂದೆತಾಯಿಗಳಿಗೆ ನಮಸ್ಕರಿಸಿ, ಸುಭದ್ರಾದೇವಿಯ ಕುಶಲಪರಂಪರೆಯನ್ನು ತಿಳುಹಿ, ಆ ದೇವಿಯು ಪತಿಯಲ್ಲಿಯೂ, ಮೈದುಂದಿರಲ್ಲಿಯೂ, ಅತ್ತೆಯಲ್ಲಿಯೂ ಇಟ್ಟಿರುವ ವಿಶ್ವಾಸವನ್ನು ಗೌರವವನ್ನು ಪ್ರೇಮವನ್ನು ಕ್ರಮವಾಗಿ ತಿಳುಹಿ ಅವರಿಗೆ ಪರಮಸಂತೋಷವನ್ನುಂಟುಮಾಡಿ, ಲೀಲಾಮಾನುಷವಿಗ್ರಹನಾದ ಶ್ರೀಕೃಷ್ಣನು ತಾನು ಲೀಲಾವಿಭೂತಿಯೊಳು ಶಾಶ್ವತಮಾದ ನಿತ್ಯಾನಂದ ಸುಖಗಳನ್ನನುಭವಿಸುತಲಿದ್ದನು.

ಈ ವೇದಾಂತ ಬೋಧಕಗಳಾದ ಹನ್ನೆರಡು ಕಥೆಗಳನ್ನು ಓದಿದವರು ಕೇಳಿದವರು, ಪಾಪವಿಮುಕ್ತರಾಗಿ ಭೂಲೋಕದಲ್ಲಿ ಸಕಲ ಸುಖಗಳನ್ನು ಅನುಭವಿಸುತ್ತಾ ಬಳಿಕ ಪರಲೋಕದೊಳು ಶಾಶ್ವತ ಸುಖಾನುಭವಗಳನ್ನು ಹೊಂದುವರು. ಮತ್ತು ಈ ಪೇಳಲ್ಪಟ್ಟ ವೇದಾಂತ ವಿಷಯಗಳನ್ನು ಗುರುಮುಖದಿಂದ ತಿಳಿದಂಥಾ ಮಹಾತ್ಮರು ಮೋಕ್ಷವನ್ನು ವಿದೇಹ ಕೈವಲ್ಯವನ್ನು, ಸಂಶಯವಿಲ್ಲದೆ ಹೊಂದುವರು. ಉದ್ಗ್ರಂಥಗಳನ್ನು ಪಠಿಸಿ, ಗುರುಕಟಾಕ್ಷವನ್ನು ಪಡೆದು ವೇದಾಂತಮಾರ್ಗಪ್ರವರ್ತಕರಾಗಿರುವದೇ ಮೋಕ್ಷಮಾರ್ಗವಲ್ಲದೆ ಬೇರೆ ಇಲ್ಲ. ಕಾಶೀ ಮೊದಲಾದ ಕ್ಷೇತ್ರಗಳ ಯಾತ್ರೆಮಾಡುವದರಿಂದಲೂ ಉಪವಾಸಾದಿಗಳನ್ನು ಕೈಕೊಳ್ಳುವದರಿಂದಲೂ, ಅನೇಕ ಭಾಷಾಪ್ರಜ್ಞೆಗಳುಂಟಾದವರಾದರೂ, ಊರ್ಧ್ವಪುಂಡ್ರಾದಿಗಳನ್ನು ಧರಿಸಿರುವದರಿಂದಲೂ ಕೃಷ್ಣಾಜಿನಾದಿಗಳನ್ನು ಧರಿಸಿ ಸನ್ಯಾಸವನ್ನಾಶ್ರೈಸುವದರಿಂದಲೂ ಇನ್ನು ಇತರ ಸಾಧನೆಗಳಿಂದಲೂ ಆ ಶಾಶ್ವತಮಾದ ಪರಮಪದವು ಒಂದುಕಾಲಕ್ಕೂ ಲಭಿಸುವದಿಲ್ಲವೆಂಬಲ್ಲಿಗೆ.

ಶ್ರೀ ಕೃಷ್ಣ ಬೋಧಾಮೃತವೆಂಬ
ಹನ್ನೆರಡು ರಾಜಪುತ್ರರ ಕಥೆ
ಸಮಾಪ್ತಮಾದುದು.
ಶ್ರೀರಸ್ತು.

# THE SELF ENGLISH STUDY.

## ದಿ ಸೆಲ್ಫ್ ಇಂಗ್ಲಿಷ್ ಸ್ಟಡಿ.

## ಆಂಗ್ಲಭಾಷಾ ಪ್ರವೇಶದಾಯಿನಿ.

ಎಂಬ ತಾವಾಗಿ ಇಂಗ್ಲಿಷ್ ಭಾಷೆಯನ್ನು ಕಲಿಯುವ
ಪುಸ್ತಕ.

ಒಂದನೆಯ ಪುಸ್ತಕ ೧—೮—೦ ಎರಡನೆಯ ಪುಸ್ತಕ ೧—೮—೦.
ಮೂರನೆಯ ಪುಸ್ತಕ ೧—೮—೦ ಅಂಚೆ ವೆಚ್ಚ ಬೇರೆ
ಐದನೆಯ ಮುದ್ರಣ. ಅಚ್ಚು ಅಂದ ಗಟ್ಟಿ ಅಟ್ಟೆ.

ಒಂದನೆಯ ಪುಸ್ತಕದಲ್ಲಿ:—ಎ ಬಿ ಸಿ. ಡಿ ಇಂದ ಜಡ್ ವರಗಿನ ಬರೆವಣಿಗೆಯ ಅಚ್ಚು ಅಕ್ಷರಗಳನ್ನು ಗುರುತು ಹಿಡಿಯುವುದು, ಪ್ರೊಂದಕ್ಕೊಂದು ಕೂಡಿಸುವುದು, ಕೂಡಿಸಿದುವುಗಳನ್ನು ಓದುವುದು, ಉಚ್ಚಾರಣೆಯ ಪ್ರಭೇದ, ಅವುಗಳ ಅರ್ಥ, ಒಕ್ಕಲುತನ, ಉಡಿಗೆತೊಡಿಗೆ, ಕಲಾಶಾಲೆ, ಊಟ, ಸಿಪ್ಪೆ, ಸಂಚಾರ, ಕಾರ್ಯಕಲಾಪಗಳಲ್ಲಿ ಬಳಸುವ ಅನೇಕ ಶಬ್ದಗಳು, ಅಂಕೆಗಳು ಮೊದಲಾಗಿ ಉಚ್ಚಾರಣೆ ಅರ್ಥಗಳ ಸಮೇತ ಬರೆದಿದೆ

ಎರಡನೆಯ ಪುಸ್ತಕದಲ್ಲಿ :—ಕಾಗದಪತ್ರಗಳನ್ನು ಬರೆಯುವ ವಿಧಾನ ತಕ್ಕಷ್ಟು ವ್ಯಾಕರಣ ನಿಯಮಗಳು, ತಂತಿಯ ವರ್ತಮಾನ, ರೈಲು, ಸುಂಕ ಮೊದಲಾದ ವರ್ತಕರಿಗೆ ಅವಶ್ಯಕವಾದ ಅನೇಕ ಸಂಗತಿಗಳಿವೆ

ಮೂರನೆಯ ಪುಸ್ತಕದಲ್ಲಿ:—ಕಾಫಿಕ್ಲಬ್ಬು, ಹೋಟಲು, ಕಚೇರಿ, ಆಟಪಾಟಗಳ ಕೂಟಗಳು, ಸಭೆಗಳಲ್ಲಿ ಒಬ್ಬರೊಂದಿಗೊಬ್ಬರು ಮಾತಾಡುವ ವಿನೋದ ಮತ್ತು ಅವಶ್ಯಕವಾದ ದೊಡ್ಡದೊಡ್ಡ ವಾಕ್ಯಸಮುದಾಯವಿದೆ

ಓದುವುದಕ್ಕೂ ಮಾತಾಡುವುದಕ್ಕೂ ಬೋಧಕರ ಸಹಾಯ ಸ್ವಲ್ಪಮಟ್ಟಿಗೂ ಇಲ್ಲದೆ ಒಂದೆರಡು ತಿಂಗಳ ಅತ್ಯಲ್ಪಕಾಲದಲ್ಲಿ ಕಲಿಸುವ ಅತ್ಯುತ್ತಮವಾದ ಪುಸ್ತಕಗಳಿವು

ಗ್ರಂಥಕರ್ತರಿಂದಲೂ ಈ ಮೂರು ಪುಸ್ತಕಗಳ ಸಮಸ್ತ ಸ್ವಾತಂತ್ರ್ಯವನ್ನು ನಾವು ಪಡೆದಿರುವೆವಾದುದರಿಂದ ಅಪೇಕ್ಷಿತರು ಬೇಗಬೇಗ ನಮಗ ಬರೆದು ತರಿಸಿಕೊಳ್ಳಬಹುದು.

ಕಲಾನಿಧಿ ಬುಕ್ ಡಿಪೋ. ಪ್ರೊಪ್ರೈಟರ್
ಚಿಕ್ಕಪೇಟೆ, ಬೆಂಗಳೂರು ಸಿಟಿ